|| ಶ್ರೀಃ ||

# ಪೀಠಿಕೆ

---

ಈ ನವನ್ಯಾಸವು "ದಿ ಕೌಂಟ್ ಆಫ್ ಮಾಂಟಿಕ್ರಿಸ್ಟೊ" ಎಂಬ ಹೆಸರಿನಿಂದ ಇಂಗ್ಲೀಷರ ನುಡಿಯಲ್ಲಿ ಕಂಗೊಳಿಸುತ್ತಿರುವ ಗ್ರಂಥದ ಕರ್ಣಾಟಕ ಗದ್ಯಾನುವಾದವಾಗಿದೆ. ಇದರ ಮೂಲಗ್ರಂಥವು ಫ್ರಾನ್ಸು ರಾಜ್ಯದ ಪ್ಯಾರಿಸ್ ನಗರದ ನಿವಾಸಿಯಾದ ಅಲೆಗ್ಝಾಂಡರ ಡೂಮಾ ಎಂಬ ವಿದ್ವಾಂಸನಿಂದ ಫ್ರೆಂಚ ಭಾಷೆಯಲ್ಲಿ ವಿರಚಿತವಾಗಿರುವುದು. ಆ ವಿದ್ವಾಂಸನು ಜೀವಿತಕಾಲದಲ್ಲಿಯೇ ಅಸಾಧಾರಣವಾದ ಖ್ಯಾತಿಯನ್ನೂ ಲಾಭವನ್ನೂ ಪಡೆದನು. ಅವನ ಪ್ರತಿಭೆಗೆ ಮುಗ್ಧರಾಗಿ ಅವನು ಹೇಳುವುದನ್ನೆಲ್ಲಾ ವಿದ್ವಾಂಸನೊಬ್ಬನು ಬರೆಯುತ್ತಿದ್ದನೆಂದೂ, ಅದಕ್ಕೆ ಬೇಕಾಗುವ ಲೇಖನೋಪಕರಣಗಳನ್ನು ವಿದ್ಯಾಭಿಮಾನಿಯಾದ ವರ್ತಕನೊಬ್ಬನು ಹವಣಿಸುತ್ತಿದ್ದನೆಂದೂ ಕಿಂವದಂತಿಯೊಂದುಂಟು ಈ ಮೂಲಗ್ರಂಥವನ್ನು ಪ್ರಪಂಚದ ಬಹುಜನಾಂಗದವರು ತಮ್ಮ ತಮ್ಮ ದೇಶಭಾಷೆಗಳಲ್ಲಿ ಪರಿವರ್ತನೆ ಮಾಡಿಕೊಂಡಿದ್ದಾರೆ, ಎಂದರೆ ಇದರ ಖ್ಯಾತಿಯನ್ನು ಸ್ವಲ್ಪಮಟ್ಟಿಗೆ ವಿವರಿಸಿದಂತಾಗುತ್ತದೆ. ಇದನ್ನು ನಮ್ಮ ಭರತಖಂಡದ ಔತ್ತರೇಯರೂ ದ್ರಾವಿಡರೂ ಆಯಾ ಭಾಷೆಗಳಲ್ಲಿ ಪರಿವರ್ತಿಸಿಕೊಂಡಿದ್ದಾರೆ. ಕರ್ಣಾಟ ಜನಪದದಲ್ಲಿ ಈ ಗ್ರಂಥವು ಅಷ್ಟಾಗಿ ಪ್ರಚಾರದಲ್ಲಿರುವಂತೆ ಕಾಣುವುದಿಲ್ಲ. ಆದುದರಿಂದ ನನ್ನ ಮಿತ್ರವರ್ಯರೂ ವೈಕುಂಠವಾಸಿಗಳೂ ಆದ ಶ್ರೀಮಾನ್ ಮಂ. ಅ. ಶ್ರೀನಿವಾಸಾಚಾರ್ಯರವರು ಈ ಗ್ರಂಥವನ್ನು ಕನ್ನಡನುಡಿಯಲ್ಲಿ ಬರೆದಿರುವರು.

ಆಂಗ್ಲೇಯಭಾಷೆಯನ್ನರಿಯದ ಪಾಠಕರ ಸೌಕರ್ಯಕ್ಕಾಗಿ ಈ ಕಥೆಯಲ್ಲಿ ವರ್ಣಿಸಿರುವ ವಿಷಯುಗಳ ಕಾಲ ದೇಶಗಳನ್ನು ಸೂಚಿಸುವುದು ಅಪ್ರಸಕ್ತವಾಗಲಾರದು. ಕ್ರಿಸ್ತಶಕ ಹದಿನೆಂಟನೆಯ ಶತಾಬ್ದದಲ್ಲಿ ಫ್ರಾನ್ಸ್ (France) ದೇಶದ ರಾಜಕೀಯಸ್ಥಿತಿಯೂ ಸಾಮಾಜಿಕಸ್ಥಿತಿಯೂ ಅತಿ ಘೋರವಾಗಿ ಭಗವದ್ಭಕ್ತರು ಮಾತ್ರವೇ ಅಲ್ಲದೆ ವಿಷಯಪ್ರಪಂಚದಲ್ಲಿ ಮಗ್ನರಾಗಿರುವವರೂ ಉಪಹಾಸಕರೂ ವಿಷಾದಿಸತಕ್ಕವಾಗಿದ್ದುವು. ರಾಜರು ಪ್ರಜಾಪಾಲನೆಯೆಂದು

# ಮೊದಲನೆಯ ಭಾಗದ ಸೂಚೀಪತ್ರ

॥ ಶ್ರೀಃ ॥

# ರಾಜಾ ಮಲಯಸಿಂಹ

## ಒಂದನೆಯ ಅಧ್ಯಾಯ

### ಆಗಮನ

ಸುಮಾರು ಮುನ್ನೂರು ವರ್ಷಗಳ ಹಿಂದೆ ಅಮರದೇಶವೆಂದೊಂದು ದೊಡ್ಡ ದೇಶವಿದ್ದಿತು. ಅದರ ಮುಖ್ಯ ಪಟ್ಟಣವಾದ ಅಮರಪುರವೆಂಬುದು ಅತಿಸುಂದರವಾಗಿಯೂ ರಮಣೀಯವಾಗಿಯೂ ಇದ್ದಿತು. ಆ ದೇಶದಲ್ಲಿ ಮಲಯಪಟ್ಟಣವೆಂಬುದು ಒಂದು ದೊಡ್ಡ ವ್ಯಾಪಾರಸ್ಥಳವು, ಅದು ಸಮುದ್ರತೀರದಲ್ಲಿದ್ದುದರಿಂದ ಅಲ್ಲಿಯ ವ್ಯಾಪಾರವು ವಿಶೇಷವಾಗಿತ್ತು. ಒಂದು ದಿನ ಜಯಲಕ್ಷ್ಮಿಯೆಂಬೊಂದು ಹಡಗು ಆ ಪಟ್ಟಣದ ರೇವಿಗೆ ಬಂದು ನಿಂತಿತು. ಹಡಗು ಆ ರೇವಿಗೆ ಬರುವುದೆಂದರೆ ಯಾವಾಗಲೂ ಆ ಊರಿನವರಿಗೆ ಬಹು ಸಂಭ್ರಮ, ಅದರಲ್ಲಿಯೂ ಆ ಊರಿನಲ್ಲಿಯೇ ಕಟ್ಟಲ್ಪಟ್ಟಿದ್ದ ಈ ಜಯಲಕ್ಷ್ಮಿಯ ಆಗಮನವೆಂದರೆ ಅವರಿಗೆ ಮತ್ತಷ್ಟು ಸಂಭ್ರಮ ರೇವಿನ ಸುತ್ತಲೂ ನಿಮಿಷಮಾತ್ರದಲ್ಲಿ ಜನಗಳು ಗುಂಪುಸೇರಿ, ಹೋ! ಜಯಲಕ್ಷ್ಮಿ ಬಂದಿತು, ಜಯಲಕ್ಷ್ಮಿಯು ಬಂದಿತು, ಎಂದು ಕೋಲಾಹಲ ಮಾಡುತ್ತಿದ್ದರು. ಆ ಗುಂಪಿನಲ್ಲಿ ಒಬ್ಬನು ದಡವನ್ನು ಸೇರಬೇಕೆಂದು ಅತ್ಯಾತುರದಿಂದ ಜನಗಳ ಮಧ್ಯೆ ನುಗ್ಗುತ್ತಿದ್ದನು. 'ಅವನನ್ನು ಕಂಡೊಡನೆಯೆ ಜನಗಳು ಯಜಮಾನ ಧನಕೋಟಿ, ಯಜಮಾನ ಧನಕೋಟಿ, ಎಂದು ಮರ್ಯಾದೆಯಿಂದ ದಾರಿಯನ್ನು ಬಿಟ್ಟರು. ಅವನು ದಡವನ್ನು ಸೇರಿ ಅಲ್ಲಿದ್ದ ಹರಿಗೋಲುಗಳಲ್ಲಿ ಒಂದನ್ನು ಹತ್ತಿ ಹಡಗು ಸ್ವಸ್ಥಾನವನ್ನು ಸೇರುವುದಕ್ಕೆ ಸರಿಯಾಗಿ ತಾನೂ ಅದರ ಪಕ್ಕವನ್ನು ಸೇರಿದನು. ಅವನನ್ನು ಕಂಡೊಡನೆಯೇ ಹಡಗಿನಲ್ಲಿ ಮುಖ್ಯಾಧಿಪತಿಯಾಗಿದ್ದ ಒಬ್ಬ ತರುಣನು ಇದಿರುಗೊಂಡು ಮರ್ಯಾದೆಮಾಡಲೋಸುಗ ಹಡಗಿನ ಮುಂದುಗಡೆಗೆ ಬಂದನು.

ಆ ತರುಣನು ಬಹುಸುಂದರನಾಗಿಯೂ ಆಜಾನುಬಾಹುವಾಗಿಯೂ ಇದ್ದನು. ಅವನಿಗೆ ಸುಮಾರು ಹತ್ತೊಂಭತ್ತು ವಯಸ್ಸು. ಅವನ ಮುಖವು ಶಾಂತಿಯನ್ನೂ

ಅದ್ಭುತಶಕ್ತಿಯನ್ನೂ ಸೂಚಿಸುತ್ತಲಿದ್ದಿತು. ಅವನನ್ನು ನೋಡಿದರೆ ಸಮುದ್ರದಲ್ಲಿ ಹುಟ್ಟಿ ಬೆಳೆದು ಸಮುದ್ರವೆಂದರೆ ಲಕ್ಷ್ಯವಿಲ್ಲದವನಂತೆ ತೋರುತಲಿದ್ದಿತು ಅವನನ್ನು ನೋಡಿದ ಕೂಡಲೇ ಹರಿಗೋಲಿನಲ್ಲಿದ್ದ ಯಜಮಾನನು, ಏನಯ್ಯ ಧರ್ಮದೇವ! ನೀನು ಸೌಖ್ಯವಾಗಿದ್ದೀಯಾ? ಇದೇನು ಹಡಗು ವ್ಯಸನದ ಚಿಹ್ನೆಗಳನ್ನು ಸೂಚಿಸುತ್ತಿದೆ? ಎಂದು ಕೇಳಿದನು. ಅದಕ್ಕೆ ಸ್ವಾಮೀ, ದಾರಿಯಲ್ಲಿ ನಮಗೆ ಒಂದು ದೊಡ್ಡ ವಿಪತ್ತು ಉಂಟಾಯಿತು; ನಮ್ಮ ನೌಕಾಧಿಪತಿಯು ಕಾಲವಾದನು, ಆದರೆ ಹಡಗಿನ ಸರಕುಗಳೆಲ್ಲವೂ ಭದ್ರವಾಗಿವೆ ಎಂದು ಹೇಳಿ ಜಯಲಕ್ಷ್ಮಿಯ ಪಟಗಳನ್ನು ಇಳಿಸಿರಿ, ಲಂಗರನ್ನು ಕೆಳಕ್ಕೆ ಬಿಡಿರಿ ಎಂದು ನಾವಿಕರಿಗೆ ಅಪ್ಪಣೆ ಮಾಡಿದನು

ಈ ವಿಪತ್ತು ಹೇಗೆ ಸಂಭವಿಸಿತೆಂದು ಯಜಮಾನನು ಕೇಳಲು, ತರುಣನು ಸ್ವಾಮೀ, ಇದು ಬಹುಆಕಸ್ಮಿಕವು ಮಾತನಾಡುತ್ತಿದ್ದ ಹಾಗೆಯೇ ನೌಕಾಧಿಪನಿಗೆ ಜ್ವರಬಂದು ಪ್ರಜ್ಞೆತಪ್ಪಿತು. ಔಷಧಿಗಳನ್ನು ಕೊಡಲು, ಮೂರು ದಿವಸಗಳ ಮೇಲ ಸ್ವಲ್ಪ ಜ್ಞಾನವು ಬಂದಿತು, ಆಗವನು ತಾನು ಹೇಳಬೇಕಾದುದನ್ನೆಲ್ಲಾ ಹೇಳಿ ಪ್ರಾಣವನ್ನು ಬಿಟ್ಟನು. ಅವನ ಉತ್ತರಕ್ರಿಯೆಗಳನ್ನೆಲ್ಲಾ ಕ್ರಮವಾಗಿ ನಡಿಸಿಬಿಟ್ಟೆವು. ಅವನ ಸ್ವಂತ ಸರಕುಗಳನ್ನೆಲ್ಲಾ ಅವನ ಕುಟುಂಬಕ್ಕೆ ಕೊಡಬೇಕೆಂದು ಜೋಪಾನವಾಗಿ ತಂದಿದೇನೆ. ನಮ್ಮ ಶತ್ರುಗಳ ಸಂಗಡ ಹತ್ತು ವರುಷಗಳು ಯುದ್ಧಮಾಡಿ ಹೆಸರ ಪಡೆದು ಕೊನೆಗೆ ನೆಮ್ಮದಿಯಾಗಿ ಪ್ರಾಣವನ್ನು ಬಿಡುವುದು ಪುಣ್ಯವೇ ಸರಿ ಎಂದು ಹೇಳಿ ಧರ್ಮದೇವನು ಕಣ್ಣಿನಲ್ಲಿ ನೀರ ತುಂಬಿಕೊಂಡನು..

ಅದನ್ನು ನೋಡಿ ಧನಕೋಟಿಯು ಅಪ್ಪಾ! ನಾವೆಲ್ಲರೂ ಮರ್ತ್ಯರು, ಎಂದಿದ್ದರೂ ಸಾಯಲೇಬೇಕು, ಮುದುಕರು ಸಾಯದಿದ್ದರೆ ಚಿಕ್ಕವರು ಅಭಿವೃದ್ಧಿಗೆ ಬರುವುದು ಹೇಗೆ? ಹಡಗಿನ ಸರಕುಗಳೆಲ್ಲವೂ ಸರಿಯಾಗಿವೆ ಎಂದು ಕೇಳಿ ಬಹಳ ಸಂತೋಷ ನಿನ್ನ ವಿಷಯದಲ್ಲಿ—

ಸ್ವಾಮಿ! ಎಲ್ಲವೂ ಸರಿಯಾಗಿದೆ; ಮೇಲಕ್ಕೆ ಬಿಜಯಮಾಡಿಸಿ ಪರಾಂಬರಿಸಬೇಕು ಎಂದು ಹಡಗಿನಿಂದ ಒಂದು ಹಗ್ಗವನ್ನು ಬಿಡಲು ತತ್‍ಕ್ಷಣವೇ ಧನಕೋಟಿಯು ಆ ಹಗ್ಗವನ್ನು ಹಿಡಿದು ಮೇಲಕ್ಕೆ ಹೋದನು ಅವನು ಹತ್ತಿಹೋದ ರೀತಿಯನ್ನು ನೋಡಿದರೆ ಹೀಗೆ ಹತ್ತುವುದು ಅವನಿಗೆ ವಾಡಿಕೆಯಾಗಿದ್ದಿತೆಂದು ತೋರುತ್ತಲಿದ್ದಿತು.

ಧನಕೋಟಿಯು ಹಡಗಿನ ಮೇಲಕ್ಕೆ ಬಂದೊಡನೆಯೇ ಧರ್ಮದೇವನು ಅವನನ್ನು ನೋಡಿ ಸ್ವಾಮಿ! ಅಗೋ ನಿಮ್ಮ ಗುಮಾಸ್ತ ದುರ್ಮತಿಯು ತನ್ನ ಕೊಟ್ಟಡಿಯಿಂದ ಬರುತ್ತಿದಾನೆ, ತಮಗೆ ಬೇಕಾದ ಅಂಶಗಳನ್ನು ಅವನು ಸಮರ್ಪಕವಾಗಿ ತಿಳಿಸುವನು ಎಂದು ಹೇಳಿ ಮುಂದೆ ತಾನು ಮಾಡಬೇಕಾದ ಕೆಲಸವನ್ನು ಮಾಡಲು ಹೊರಟನು.

ದುರ್ಮತಿಗೆ ಸುಮಾರು ಇಪ್ಪತ್ತಾರು ವಯಸ್ಸು ಅವನು ಯಜಮಾನನೊಡನೆ ಇಚ್ಛಕವನ್ನು ಹಾಡುತ್ತ ಜತೆಗಾರರಲ್ಲಿ ದುರಹಂಕಾರಿಯಾಗಿಯೂ ಭೃತ್ಯರಲ್ಲಿ ನಿರ್ದಯನಾಗಿಯೂ ದುಃಖದಾಯಕನಾಗಿಯೂ ಇರುತ್ತಿದ್ದುದರಿಂದ ದುರ್ಮತಿಯೆಂಬ ತನ್ನ ಹೆಸರನ್ನು ಸಾರ್ಥಕಮಾಡಿಕೊಂಡನು ನಾವಿಕರೆಲ್ಲರೂ ಅವನ ಗುಣಗಳನ್ನು ಚೆನ್ನಾಗಿ ಬಲ್ಲರು. ಅವರು ಧರ್ಮದೇವನನ್ನು ಎಷ್ಟುಮಟ್ಟಿಗೆ ಪ್ರೀತಿಸುತ್ತಲಿದ್ದರೋ ಅಷು ಮಟ್ಟಿಗೆ ದುರ್ಮತಿಯನ್ನು ದ್ವೇಷಿಸುತ್ತಲಿದ್ದರು.

ಗುಮಾಸ್ತನಾದ ದುರ್ಮತಿಯು ಯಜಮಾನನ ಸಮೀಪಕ್ಕೆ ಬಂದು ಬಹು ನಮ್ರತೆಯಿಂದ ಸ್ವಾಮಿ' ನಮಗೆ ಒದಗಿದ ವಿಪತ್ತು ತಮಗೆ ತಿಳಿದಿರಬಹುದು ಎನ್ನಲು, ಯಜಮಾನನು ಅಹುದು; ಆ ಸಮಾಚಾರವನ್ನು ಕೇಳಿ ಮನಸ್ಸಿಗೆ ಬಹಳ ವ್ಯಸನ ವುಂಟಾಯಿತು, ಆದರೆ ದೈವಯತ್ನಕ್ಕೆ ನಾವೇನು ಮಾಡಲಾದೀತು ಎಂದನು.

ಸ್ವಾಮಿ! ಮೃತಪಟ್ಟ ನೌಕಾಧಿಪತಿಯು ಧೈರ್ಯಶಾಲಿಯಾಗಿಯೂ ಅನುಭವ ಶಾಲಿಯಾಗಿಯೂ ಇದ್ದನು; ವಯಸ್ಸಾಗಿದ್ದುದರಿಂದ ಅವನ ಬುದ್ಧಿಯೂ ಅನುಭವವೂ ಹೆಚ್ಚಾಗಿದ್ದುವು.

ಬುದ್ಧಿಗೂ ಅನುಭವಕ್ಕೂ ವಯಸ್ಸೇ ಕಾರಣವಲ್ಲ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದಾಗಿರಬಹುದು. ನಮ್ಮ ಧರ್ಮದೇವನನ್ನು ನೋಡು ಎಂದು ಯಜಮಾನನು ಹೇಳಿದೊಡನೆಯೇ ದುರ್ಮತಿಯ ಮೋರೆಯು ಕಪ್ಪಾಗಿ ಮನದಲ್ಲಿ ಅಡಗಿದ್ದ ದ್ವೇಷವೂ ಅಸೂಯೆಯೂ ಹೊರಹೊಮ್ಮಿ ತೋರುತಿದ್ದುವು. ಆದರೆ ಅಲ್ಲಿದ್ದವರು ಆರೂ ಅವನ ಮುಖವನ್ನು ನೋಡಲಿಲ್ಲ. ಧರ್ಮದೇವನು ಚಟುವಟಿಕೆಯಿಂದ ಮಾಡಿಸುತ್ತಲಿರುವ ಕಾರ್ಯಗಳನ್ನು ಧನಕೋಟಿಯು ನೋಡುತ್ತಲಿದ್ದನು; ನಾವಿಕರೆಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿದ್ದರು, ಆ ಕೆಲಸಗಳನ್ನು ನಾವಿಕರು ಸರಿಯಾಗಿ ಮಾಡುವರೋ ಇಲ್ಲವೋ ಎಂದು ಧರ್ಮದೇವನು ನೋಡುತ್ತಲಿದ್ದನು. ದುರ್ಮತಿಯು ಕ್ಷಣ

ಮಾತ್ರದಲ್ಲಿಯೇ ತನ್ನ ದ್ವೇಷಾಸೂಯೆಗಳನ್ನು ಅಡಗಿಸಿಕೊಂಡು, ಅಹುದು ಮಹಾ ಸ್ವಾಮಿ ! ಧರ್ಮದೇವನು ಬುದ್ಧಿಶಾಲಿ, ತುಂಬ ಅನುಭವವುಳ್ಳವನು, ಆದರೆ ಅವನು ಇನ್ನೂ ಸಣ್ಣವನು, ಜಂಭಗಾರ ನೌಕಾಧಿಪನು ಸಾಯುವುದನ್ನೇ ಕಾದಿದ್ದು ಅವನು ಸತ್ತಕೂಡಲೇ ಇತರರೊಡನೆ ಆಲೋಚನೆಯನ್ನು ಕೂಡ ಮಾಡದೆ ತಾನೇ ಯಾಜಮಾನ್ಯವನ್ನು ವಹಿಸಿದುದಲ್ಲದೆ ಮಲಯಪಟ್ಟಣದ ದಾರಿಯನ್ನು ಬಿಟ್ಟು ಏಲಾದ್ವೀಪದ ಕಡೆಗೆ ತಿರುಗಿ ಆ ದ್ವೀಪದಲ್ಲಿ ಎರಡು ದಿವಸಗಳು ವ್ಯರ್ಥಕಾಲಕ್ಷೇಪಮಾಡಿದನು.

ಧರ್ಮದೇವನು ಹಡಗಿನ ಸಹಾಯಕಾಧಿಪತಿಯಾಗಿದ್ದುದರಿಂದ ನೌಕಾಧಿಪತಿಯು ಸತ್ತುಹೋದ ಮೇಲೆ ತಾನು ಹಡಗಿನ ಯಾಜಮಾನ್ಯವನ್ನು ವಹಿಸಿದುದೇನೋ ಸರಿ , ಆದರೆ ಅವನು ಏಲಾದ್ವೀಪಕ್ಕೆ ಏತಕ್ಕೆ ಹೋದನು ? ಹಡಗು ಶಿಥಿಲವಾಗಿದ್ದುದರಿಂದ ಅದನ್ನು ಸರಿಮಾಡಿಸಲು ಅಲ್ಲಿಗೆ ಹೋದನೋ ? ಕಾರಣವಿಲ್ಲದೆ ಸುಮ್ಮನೆ ಅಲ್ಲಿಗೆ ಹೋಗಿದ್ದ ಪಕ್ಷದಲ್ಲಿ ಅವನು ಹಾಗೆ ಮಾಡಿದುದು ತಪ್ಪು.

ಸ್ವಾಮೀ , ಹಡಗು ಆವ ವಿಧದಲ್ಲಿಯೂ ಶೈಥಿಲ್ಯವನ್ನು ಹೊದ್ದಿರಲಿಲ್ಲ ಆದರೂ ಏಲಾದ್ವೀಪಕ್ಕೆ ಹೋಗಿದ್ದನು.

ದುರ್ಮತಿಯು ಹೀಗೆಂದ ವೇಳೆಗೆ ಸರಿಯಾಗಿ ಧರ್ಮದೇವನು ತನ್ನ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ಇವರ ಸಮೀಪಕ್ಕೆ ಬರಲು, ದುರ್ಮತಿಯು ದೂರಕ್ಕೆ ಹೋದನು. ಧರ್ಮದೇವನನ್ನು ನೋಡಿ ಧನಕೋಟಿಯು ಅಯ್ಯಾ ! ಇಲ್ಲಿ ಸ್ವಲ್ಪ ಬಾ, ನಿನ್ನೊಡನೆ ಒಂದು ಮಾತನಾಡಬೇಕು ಎನ್ನಲು, ಇಗೋ ಬಂದೆ ಎಂದು ಮರೆತಿದ್ದ ಆವುದೋ ಒಂದು ಕೆಲಸವನ್ನು ಮಾಡಲು ಬೇರೆಕಡೆಗೆ ಓಡಿಹೋದನು. ಅದನ್ನು ನೋಡುತಿದ್ದ ದುರ್ಮತಿಯು ಪುನಃ ಯಜಮಾನನ ಸಮೀಪಕ್ಕೆ ಬಂದು ಸ್ವಾಮಿ ! ನಾನು ಆರಿಕೆ ಮಾಡಿದುದು ತಮಗೆ ಈಗ ಗೊತ್ತಾಯಿತಷ್ಟೆ ! ತಾನು ಆವಾಗಲೇ ನೌಕಾಧಿಪನಾದೆನೆಂಬ ಅಹಂಕಾರವು ಇದರಿಂದಲೇ ಗೊತ್ತಾಗುವುದಿಲ್ಲವೆ ಎಂದನು ಅದಕ್ಕಾಧನಕೋಟಿಯು ಅವನು ಏಕೆ ಜಯಲಕ್ಷ್ಮಿಯ ನೌಕಾಧಿಪತಿಯಾಗಬಾರದು ಎಂದು ಕೇಳಲು, ದುರ್ಮತಿಯು ಸ್ವಾಮೀ ! ತಾವೂ ತಮ್ಮ ಪಾಲುದಾರರೂ ಸಮ್ಮತಿಸಿದರೆ ಅವಶ್ಯವಾಗಿ ಆಗಬಹುದು. ಅಲ್ಲಿಯುವರೆಗೆ

ಅಲ್ಲಿಯುವರೆಗೆ ತಾನೇ ಅವನೇಕೆ ಯಜಮಾನನಾಗಕೂಡದು ? ಅವನು ಚಿಕ್ಕವ

ನಾಗಿದ್ದರೂ ಬುದ್ಧಿಶಾಲಿಯಾಗಿಯೂ ಸಮರ್ಥನಾಗಿಯೂ ಇದಾನೆ; ಅಂಥವನು ನೌಕಾಧಿಪತ್ಯಕ್ಕೆ ತಕ್ಕವನು ಎಂದು ಧನಕೋಟಿಯೆನ್ನಲು, ದುರ್ಮತಿಯ ಅಂತಃ ಕ್ಲೇಶವು ಹೆಚ್ಚಾಯಿತು. ಅಷ್ಟು ಹೊತ್ತಿಗೆ ಧರ್ಮದೇವನು ಕೆಲಸವನ್ನು ಮುಗಿಸಿ ಕೊಂಡು ಧನಕೋಟಿಯ ಬಳಿಗೆ ಓಡಿಬಂದು ಸ್ವಾಮಿಾ, ಏನು ಅಪ್ಪಣೆ ಎಂದನು. ದುರ್ಮತಿಯು ಮರಳಿ ಯಜಮಾನನ್ನು ಬಿಟ್ಟು ದೂರವಾಗಿ ಹೋಗಿ ನಿಂತನು.

ಧರ್ಮದೇವ, ನೀನು ಏಲಾದ್ವೀಪಕ್ಕೆ ಏತಕ್ಕೆ ಹೋದೆ? ಅಲ್ಲಿ ಏಕೆ ಎರಡು ದಿವ ಸಗಳು ನಿಂತೆ? ಎಂದು ಕೇಳಲು, ಅದಕ್ಕವನು ಮಹಾಸ್ವಾಮಿಾ, ನಮ್ಮ ನೌಕಾಧಿ ಪತಿಯು ಸಾಯುವ ಕಾಲದಲ್ಲಿ ಒಂದು ಕಾಗದದ ಕಟ್ಟನ್ನು ನನ್ನ ಕೈಯಲ್ಲಿ ಕೊಟ್ಟು ಇದನ್ನು ಏಲಾದ್ವೀಪದಲ್ಲಿರುವ ಚಕ್ರವರ್ತಿಯ ಮಂತ್ರಿಯವರಿಗೆ ಕೊಟ್ಟು ಮಲಯ ಪಟ್ಟಣವನ್ನು ಸೇರೆಂದು ಹೇಳಿದ್ದನು, ಅವನು ಮರಣಕಾಲದಲ್ಲಿ ಹೇಳಿದ್ದ ಮಾತನ್ನು ನಡೆಸುವುದು ನನ್ನ ಕೃತ್ಯವೆಂದು ತಿಳಿದು ನಾನು ಅಲ್ಲಿಗೆ ಹೋದೆನು. ಅಲ್ಲಿಯ ಕೆಲಸ ಮುಗಿಯುವುದು ಎರಡು ದಿವಸಗಳಾದುವು ಎಂದನು.

ಮಂತ್ರಿಶ್ರೇಷ್ಠನಾದ ನೃಪಸಿಂಹನನ್ನು ನೋಡಿದೆಯೋ? — ನೋಡಿದೆ.

ಯಜಮಾನನು ಅಕ್ಕಪಕ್ಕವನ್ನು ನೋಡಿ ಸಮಿಾಪದಲ್ಲಿ ಆರೂ ಇಲ್ಲವೆಂದು ತಿಳಿದು ಚಕ್ರವರ್ತಿಯವರು ಸುಖವಾಗಿದ್ದರೋ! ಎಂದನು ಅದಕ್ಕೆ ಧರ್ಮದೇವನು ಅಹುದು ಎಂದನು.

ಅವರು ನಿನ್ನ ಸಂಗಡ ಏನ ಹೇಳಿದರು ಎನ್ನಲು, ಜಯಲಕ್ಷ್ಮಿಯು ಎಲ್ಲಿಗೆ ಹೋಗಿ ದ್ದಿತು? ಆರಿಗೆ ಸೇರಿದುದು ಎಂದು ಕೇಳಿದರು. ಈ ಪ್ರಶ್ನೆಗೆ ಉತ್ತರವನ್ನು ಕೊಟ್ಟ ಮೇಲೆ ಧನಕೋಟಿಯ ವಂಶದವರನ್ನು ನಾನು ಬಲ್ಲೆ. ಅವರು ವಂಶಪಾರಂಪರ್ಯವಾಗಿ ಸ್ವತಂತ್ರ ವಾಗಿ ಹಡಗುಗಳನ್ನಿಟ್ಟು ವ್ಯಾಪಾರವನ್ನು ಮಾಡುತ್ತಲಿರುವರು. ಅವರಲ್ಲಿ ಒಬ್ಬನು ನನ್ನ ಸಂಗಡ ಸೈನ್ಯದಲ್ಲಿ ಸೇರಿದ್ದನು ಎಂದು ಹೇಳಿದರು ಎಂದನು.

ಅದು ನಿಜ; ಅವರೊಡನೆ ಸೈನ್ಯದಲ್ಲಿದ್ದವರು ನನ್ನ ಚಿಕ್ಕಪ್ಪಂದಿರು, ಈಗಲೂ ಅವರು ಬದುಕಿದ್ದಾರೆ. ಅವರ ಸಂಗಡ ಈ ಮಾತನ್ನು ಹೇಳಿನೋಡು, ಎಷ್ಟು ಸಂತೋಷ ಪಡುತ್ತಾರೆ. ನೀನು ಏಲಾದ್ವೀಪಕ್ಕೆ ಹೋಗಿ ಕಾಗದದ ಕಟ್ಟನ್ನು ಮಂತ್ರಿಗೆ ಕೊಟ್ಟು

ದನ್ನು ಆರಿಗೂ ಹೇಳಬೇಡ. ಈ ಸಮಾಚಾರವು ಈ ದೇಶದ ಈಗಣ ಅಧಿಕಾರಿಗಳಿಗೆ ತಿಳಿದರೆ ನಿನಗೆ ತುಂಬ ತೊಂದರೆಯುಂಟಾದೀತು ಎಂದನು

ಅದು ಹೇಗೆ? ಆ ಕಟ್ಟಿನಲ್ಲಿ ಏನಿದ್ದಿತೋ ಅದೇ ನನಗೆ ಗೊತ್ತಿಲ್ಲ

ಈ ರಾಜ್ಯದ ಈಗಣ ದೊರೆಯೂ ಇನ್ನೂ ಇತರ ದೊರೆಗಳೂ ಸೇರಿ, ಚಕ್ರವರ್ತಿಯನ್ನು ಯುದ್ಧದಲ್ಲಿ ಸೋಲಿಸಿ ಹಿಡಿದು ಏಲಾದ್ವೀಪದಲ್ಲಿ ಸೆರೆಯಿಟ್ಟು ಇರುವುದರಿಂದ, ಅಲ್ಲಿಗೆ ಹೋಗಿಬರುವುದೇ ಅನುಮಾನಕ್ಕೆ ಕಾರಣ ; ಅಲ್ಲಿಗೆ ವರ್ತಮಾನವನ್ನು ಕೊಡುವುದು, ಅಲ್ಲಿಂದ ಸಮಾಚಾರಗಳನ್ನು ತರುವುದು, ಮುಂತಾದ ಕಾರ್ಯಗಳು ರಾಜದ್ರೋಹವೆಂದೇ ಭಾವಿಸಲ್ಪಡುವುವು.

ಸ್ವಾಮಿಾ, ಇಲ್ಲಿಯ ರಾಜ್ಯಸಂಬಂಧವಾದ ಮಾತುಗಳನ್ನು ನಾನು ಚಕ್ರವರ್ತಿಯೊಡನೆ ಹೇಳಲಿಲ್ಲ ಅವರೂ ನನ್ನೊಡನೆ ಅಲ್ಲಿಯ ವಿಷಯವಾವುದನ್ನೂ ಹೇಳಲಿಲ್ಲ. ನನಗೆ ಈ ಸಮಾಚಾರಗಳೇ ಗೊತ್ತಿಲ್ಲ. ಇಗೋ ಆರೋಗ್ಯಾಧಿಕಾರಿಗಳೂ, ಸುಂಕದ ಅಧಿಕಾರಿಗಳೂ ಬರುತಲಿದ್ದಾರೆ ಅವರನ್ನು ನೋಡಿ ಅವರು ಕೇಳುವ ಪ್ರಶ್ನೆಗಳಿಗೆ ಬದಲನ್ನು ಹೇಳಿ ಬಿಟ್ಟು ಬರುತ್ತೇನೆ ಎಂದು ಹೇಳಿ ಧರ್ಮದೇವನು ಹೊರಟು ಹೋದನು.

ಅವನು ಅತ್ತ ಹೋದ ಕೂಡಲೇ ದುರ್ಮತಿಯು ಯಜಮಾನನ ಸಮಿಾಪಕ್ಕೆ ಬಂದು ಸ್ವಾಮಿಾ, ಉಪನೌಕಾಧಿಪತಿಯು ಏಲಾದ್ವೀಪಕ್ಕೆ ಹೋಗಿದ್ದುದರ ಕಾರಣವನ್ನು ತಮಗೆ ಸಮರ್ಪಕವಾಗುವ ಹಾಗೆ ತಿಳಿಸಿರುವಂತೆ ತೋರುತ್ತಲಿದೆ ಎನ್ನಲು, ಧನಕೋಟಿಯು ಅಹುದು ಎಂದನು.

ಹಡಗು ಏಲಾದ್ವೀಪಕ್ಕೆ ಹೋಗಿದ್ದ ಕಾರಣವು ತಮಗೆ ಒಪ್ಪಿಗೆಯಾಯಿತೆಂದು ಕೇಳಿ ಸಂತೋಷವಾಯಿತು ನನ್ನ ಜತೆಗಾರರಲ್ಲಿ ಆರಾದರೂ ತಪ್ಪಿ ನಡೆದರೆ ನನಗೆ ಮಹಾ ಸಂಕಟ.

ಧರ್ಮದೇವನು ಆ ಕೆಲಸವನ್ನು ತಾನೇ ಸ್ವತಂತ್ರಿಸಿ ಮಾಡಲಿಲ್ಲ ; ನೌಕಾಧಿಪತಿಯು ಸಾಯುವಾಗ ಹೇಳಿದ ಮಾತಿನಂತೆ ನಡೆಸಿದನು.

ನೌಕಾಧಿಪತಿ ಎನ್ನುತ್ತಲೇ ನನಗೊಂದು ಸಂಗತಿ ಜ್ಞಾಪಕಕ್ಕೆ ಬರುತ್ತದೆ. ಧರ್ಮದೇವನು ತಮಗಾವ ಪತ್ರವನ್ನಾದರೂ ಕೊಟ್ಟನೋ ? ಇಲ್ಲ.

"ನೌಕಾಧಿಪತಿಯು ಸಾಯುವ ಕಾಲದಲ್ಲಿ ಒಂದು ಕಾಗದದ ಕಟ್ಟನ್ನು ಅವನ ಕೈಯಲ್ಲಿ ಕೊಟ್ಟಹಾಗೆ ಇತ್ತು" "ಆವಕಟ್ಟು?" "ಧರ್ಮದೇವನು ಏಲಾದ್ವೀಪದಲ್ಲಿ ಬಿಟ್ಟ ಕಟ್ಟು" "ಅದು ನಿನಗೆ ಹೇಗೆ ಗೊತ್ತಾಯಿತು?"

ಧನಕೋಟಿಯು ಹೀಗೆ ಹೇಳುತ್ತಲೇ ದುರ್ಮತಿಗೆ ಭೀತಿಯು ತಲೆದೋರಿತು. ತಾನು ಹೇಳಿದುದು ಹೆಚ್ಚಾಯಿತೆಂದುಕೊಂಡು ಸ್ವಾಮಿ, ನೌಕಾಧಿಪತಿಯ ಕೊಟ್ಟಡಿಯ ಮಾರ್ಗವಾಗಿ ನಾನು ಹೋಗುತ್ತಿದ್ದಾಗ ಆತನು ಧರ್ಮದೇವನ ಕೈಯಲ್ಲಿ ಒಂದು ಕಾಗದದ ಕಟ್ಟು ಕೊಟ್ಟಿದ್ದುದನ್ನು ನೋಡಿದೆನು ಎಂದನು.

ಪತ್ರವಿದ್ದಿದ್ದರೆ ಧರ್ಮದೇವನು ನನಗೆ ಕೊಡುವನು ಎಂದು ಯಜಮಾನನು ಹೇಳಲು, ದುರ್ಮತಿಯು ಹಾಗೆಯೇ ಆಲೋಚಿಸಿ ಸ್ವಾಮಿ, ಒಂದು ವೇಳೆ ನನ್ನ ತಿಳುವಳಿಕೆಯು ತಪ್ಪಾಗಿರಬಹುದು; ತಮ್ಮ ಸಂಗಡ ನಾನು ಈ ಪ್ರಸ್ತಾಪವನ್ನು ಮಾಡಿದೆನೆಂದು ಧರ್ಮದೇವನಿಗೆ ತಿಳಿಸಬೇಡಿರಿ ಎಂದನು

ಆ ವೇಳೆಗೆ ಧರ್ಮದೇವನು ಯಜಮಾನನ ಬಳಿಗೆ ಬಂದು ಸ್ವಾಮಿ, ಅಧಿಕಾರಿಗಳನ್ನು ಸಮಾಧಾನಪಡಿಸಿ ಬಂದೆನು, ಇನ್ನು ನನ್ನ ಕೆಲಸವು ತೀರಿತು ಎಂದನು.

ಇನ್ನೇನೂ ಇಲ್ಲವೋ? ಇಲ್ಲ

ನೌಕಾಧಿಪತಿಯು ನನಗೆ ಕೊಡುವಂತೆ ಹೇಳಿ ನಿನ್ನಲ್ಲಿ ಆವುದಾದರೂ ಪತ್ರವನ್ನು ಕೊಟ್ಟಿರುವನೋ?

ಇಲ್ಲ; ಹಾಗೆ ಕೊಟ್ಟಿದ್ದರೆ ತಮಗೆ ಒಡನೆಯೇ ಕೊಡುತ್ತಲಿದ್ದನು.

ಹಾಗಾದರೆ ಸರಿ. ಈ ದಿವಸ ನೀನು ನಮ್ಮ ಮನೆಗೇ ಭೋಜನಕ್ಕೆ ಬಾ.

ಕ್ಷಮಿಸಬೇಕು. ವೃದ್ಧರಾದ ನನ್ನ ತಂದೆಯನ್ನು ನೋಡಬೇಕೆಂದು ತುಂಬ ಆತುರವಾಗಿದ್ದೇನೆ.

ಆಮೇಲೆಯಾದರೂ ಬರುವೆಯೋ? ಇಲ್ಲ, ಕ್ಷಮಿಸಬೇಕು. ತಂದೆಯನ್ನು ನೋಡಿದ ಮೇಲೆ ಇನ್ನೊಬ್ಬರನ್ನು ನೋಡಬೇಕಾಗಿದೆ

ದಿಟ, ಮರೆತೆ; ಲಲಿತಾಂಗಿಯನ್ನಲ್ಲವೆ, ಹೀಗೆಂದು ಕೇಳುತ್ತಲೆ ಧರ್ಮದೇವನು ಲಜ್ಜೆಯಿಂದ ತಲೆಯನ್ನು ಬಾಗಿಸಿ ಸುಮ್ಮನಿದ್ದನು.

ಆಕೆಯು ಮೂರು ನಾಲ್ಕಾವೃತ್ತಿ ಜಯಲಕ್ಷ್ಮಿಯ ಆಗಮನವನ್ನು ತಿಳಿದುಕೊಳ್ಳಲು ನನ್ನಲ್ಲಿಗೆ ಬಂದಿದ್ದಳು. ಧರ್ಮದೇವ! ನೀನು ಒಳ್ಳೆಯ ಹುಡುಗಿಯನ್ನು ಸಂಪಾದಿಸಿದೆ.

ಸ್ವಾಮಿ, ಅವಳು ನನ್ನನ್ನು ಪತಿಯೆಂದೂ ನಾನು ಅವಳನ್ನು ಪತ್ನಿಯೆಂದೂ ಪರಸ್ಪರವಾಗಿ ವರಿಸಿದ್ದೇವೆ.

ಸಂತೋಷ, ಇನ್ನು ನಿನ್ನನ್ನು ನಿಲ್ಲಿಸಿಕೊಳ್ಳುವುದಿಲ್ಲ. ಕೆಲಸವನ್ನೆಲ್ಲಾ ತೃಪ್ತಿಕರವಾಗಿ ಮಾಡಿದ್ದೀಯೆ, ಆದುದರಿಂದ ನಿನ್ನ ಕೆಲಸಗಳನ್ನು ತೀರಿಸಿಕೊಂಡು ಬಾ. ನಿನಗೆ ಹಣವೇನಾದರೂ ಬೇಕೋ?

ಮೂರು ತಿಂಗಳ ಸಂಬಳ ಬಾಕಿ ಇದೆ, ಅದನ್ನು ಕೊಟ್ಟರೆ ಸಾಕು

ಅಷ್ಟೇಸಾಕೋ, ಇನ್ನೂ ಬೇಕೋ? ಅಷ್ಟೇ ಸಾಕು.

ನೀನು ಮಿತವ್ಯಯ ಮಾಡತಕ್ಕವನು.

ನನಗೆ ವೃದ್ಧರಾದ ತಂದೆಯು ಇದ್ದಾರೆ. ಮದುವೆಯನ್ನು ಬೇರೆ ಮಾಡಿಕೊಳ್ಳಬೇಕೆಂದಿದ್ದೇನೆ.

ಅದು ಸರಿ, ಹಾಗೆಯೇ ಇರಬೇಕು ನೀನು ಹೋಗಿ ಬಾ, ನನಗೂ ಒಬ್ಬ ಮಗನಿರುವನು. ದೂರದೇಶಪ್ರಯಾಣಮಾಡಿ ಊರಿಗೆ ಹಿಂದಿರುಗಿ ಬಂದು ಮನೆಯನ್ನು ಸೇರುವಲ್ಲಿ ಅವನನ್ನು ಆರಾದರೂ ನಿಲ್ಲಿಸಿಕೊಂಡಲ್ಲಿ ಅಂಥವರಲ್ಲಿ ನನಗೂ ಕೋಪವುಂಟಾಗುವುದು. ನೀನು ಹೋಗಿ ಬಾ.

ಸ್ವಾಮಿ, ನನ್ನ ತಂದೆಯ ಯೋಗಕ್ಷೇಮ ತಮಗೇನಾದರೂ ತಿಳಿದು ಇದೆಯೋ?

ಆತನನ್ನು ನಾನು ನೋಡಲಿಲ್ಲ; ಆದರೆ ಸೌಖ್ಯವಾಗಿದಾನೆಂದು ಕೇಳಿಬಲ್ಲೆ

ಅವರು ಮನೆಯನ್ನು ಬಿಟ್ಟು ಹೊರಗೆ ಹೊರಡುವುದೇ ಇಲ್ಲ.

ಆದುದರಿಂದಲೇ ಆತನಿಗೆ ಆವ ಕೊರತೆಯೂ ಇಲ್ಲವೆಂದು ಊಹಿಸಬಹುದು.

ಅವರ ಸ್ವಭಾವವು ತಮಗಾರಿಗೂ ಗೊತ್ತಿಲ್ಲ ದೇವರಿಂದ ವಿನಾ ಮತ್ತಾರಿಂದಲೂ ಆವುದನ್ನೂ ಅವರು ಅಪೇಕ್ಷಿಸತಕ್ಕವರಲ್ಲ.

ನೀನು ಕೆಲಸಕ್ಕೆ ಆವಾಗ ಬರುವೆ?

ಜಾಗ್ರತ ಮದುವೆಯನ್ನು ಮಾಡುತ್ತೇನೆ  ಅದಕ್ಕೆ ಮೊದಲು ಅಮರಪುರಕ್ಕೆ ಒಂದು ಸಾರಿ ಹೋಗಿ ಬರಬೇಕಾಗಿದ  ಇವುಗಳೆಲ್ಲ ತೀರಿದ ಮೇಲೆ ಕೆಲಸಕ್ಕೆ ಬರಲು ಸಿದ್ಧನಾಗಿರುವೆನು

ಈಗ ತಂದಿರುವ ಸರಕುಗಳನ್ನು ಹಡಗಿನಿಂದ ಇಳಿಸಿ, ಪುನಃ ಬೇರೆ ಸರಕುಗಳನ್ನು ತುಂಬಲು ಸುಮಾರು ಮೂರು ತಿಂಗಳುಗಳು ಆಗುವುವು, ಅಷ್ಟರ ವೇಳೆಗೆ ನೀನು ಬಂದರೆ ಸಾಕು  ಜಯಲಕ್ಷ್ಮಿಯು ನೌಕಾಧಿಪತಿಯಿಲ್ಲದೆ ಪ್ರಯಾಣಮಾಡಲಾಗದು

ನೌಕಾಧಿಪತಿಯಿಲ್ಲದೆ ಜಯಲಕ್ಷ್ಮಿಯು ಪ್ರಯಾಣಮಾಡಲಾಗದು ಎಂಬ ಮಾತುಗಳು ಧರ್ಮದೇವನ ಕಿವಿಗೆ ಬೀಳುತ್ತಲೆ, ಅವನು ಆನಂದಭರಿತನಾಗಿ ಸ್ವಾಮಿ, ತಾವು ಈಗ ಅಪ್ಪಣೆ ಕೊಡಿಸಿದುದು ನಿಜವಾದರೆ ನನ್ನ ಮನೋಭೀಷ್ಟವು ಪರಿಪೂರ್ತಿಯಾಗುವುದು. ತಮಗೆ ಆ ಅಭಿಪ್ರಾಯವಿದ್ದಲ್ಲಿ ನನಗೆ ಆ ಪದವಿಯನ್ನು ಕೊಡುವೆನೆಂದು ಅಭಯಪ್ರದಾನವನ್ನು ಮಾಡಬೇಕು ಎಂದನು.

ನಾನು ಒಬ್ಬನೇ ಯಜಮಾನನಾಗಿದ್ದಲ್ಲಿ ಈ ಕ್ಷಣವೇ ಹಡಗಿನ ಯಾಜಮಾನ್ಯಕ್ಕೆ ನಿನ್ನನ್ನು ನೇಮಿಸುತ್ತಲಿದ್ದೆನು . ಆದರೆ ನನಗೆ ಒಬ್ಬ ಪಾಲುದಾರನುಂಟು  ಅವನಿಗೆ ಪಾಲುದಾರನುಂಟೋ ಅವನಿಗೆ ಯಜಮಾನನುಂಟು ಎಂಬ ಮಾತನ್ನು ಕೇಳಿರುವೆಯಷ್ಟೆ  ಆದರೂ ಚಿಂತೆಯಿಲ್ಲ  ಅದಕ್ಕೆ ತಕ್ಕ ವ್ಯವಸಾಯವನ್ನು ನಾನು ಮಾಡುವೆನು . ನೀನು ಧೈರ್ಯವಾಗಿರು.

ಧರ್ಮದೇವನು ಆನಂದಬಾಷ್ಪಗಳನ್ನು ಸುರಿಸುತ್ತ ನಾನೂ ನನ್ನ ತಂದೆಯೂ ಲಲಿತಾಂಗಿಯೂ ಎಲ್ಲರೂ ತಮಗೆ ಬಹು ಕೃತಜ್ಞರಾಗಿರುವೆವು ಎಂದನು.

ತರುವಾಯ ಧನಕೋಟಿಯು ದುರ್ಮತಿಯ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ಎಂದು ಕೇಳಲು, ತಮ್ಮ ಪ್ರಶ್ನೆಯು ನನಗೆ ಸರಿಯಾಗಿ ಗೊತ್ತಾಗಲಿಲ್ಲ. ದುರ್ಮತಿಯು ಸಹವಾಸಕ್ಕೆ ಯೋಗ್ಯನೇ ಎಂದು ಕೇಳುವ ಪಕ್ಷದಲ್ಲಿ ನಾನು ಒಳ್ಳೆಯ ಅಭಿಪ್ರಾಯವನ್ನು ಕೊಡಲಾರೆ , ಕೆಲಸದಲ್ಲಿ ಹೇಗೆ ಎಂದು ಕೇಳುವಿರಾದರೆ ಅವನು ಕೆಲಸವನ್ನು ಸರಿಯಾಗಿ ಮಾಡುತ್ತಾನೆಂದು ಹೇಳಬಲ್ಲೆನು ಎಂದನು

ನೀನು ನೌಕಾಧಿಪತಿಯಾದರೆ ಅವನು ಜಯಲಕ್ಷ್ಮಿಯಲ್ಲಿರಲು ನಿನಗಿಷ್ಟವೋ ?

ಯಜಮಾನರಿಗೆ ಆರು ಅನುಕೂಲರೋ ಅವರು ನನಗೂ ಅನುಕೂಲರೇ.

ನೀನು ಗುಣವಂತ ಇನ್ನು ಹೋಗಿ ಬಾ, ನಾನು ಹೇಳಿದ ಕಾಲದೊಳಗಾಗಿ ಪುನಃ ಕೆಲಸಕ್ಕೆ ಬಂದು ಬಿಡು.

---

## ಎರಡನೆಯ ಅಧ್ಯಾಯವು

### ತಂದೆಯೂ ಮಗನೂ

ಪಾಠಕರೇ ! ದ್ವೇಷವೆಂಬ ಪಿಶಾಚನಿಂದ ಗ್ರಸ್ತನಾಗಿ ನಿರಪರಾಧಿಯಾದ ತನ್ನ ಜತೆಗಾರನನ್ನು ಯಜಮಾನನ ಸಂಗಡ ದೂಷಿಸುತ್ತಲಿರುವ ದುರ್ಮತಿಯನ್ನು ಹಡಗಿನಲ್ಲಿ ಬಿಟ್ಟು ಧರ್ಮದೇವನೊಡನೆ ಸ್ವಲ್ಪ ಹೊತ್ತು ಹೋಗಿ ನೋಡೋಣ.

ಧರ್ಮದೇವನು ಆ ಪಟ್ಟಣದ ಮೂಡಣ ಹೆಬ್ಬಾಗಿಲಿನಿಂದ ರಾಜಬೀದಿಯಲ್ಲಿ ಹೊರಟು ಮಧ್ಯಮಾರ್ಗದಲ್ಲಿ ಕಾಳಿಕಾಗುಡಿಯ ಅಡ್ಡ ಹಾದಿಗೆ ತಿರುಗಿ ಅಲ್ಲಿದ್ದ ಒಂದು ದೊಡ್ಡ ಮನೆಯನ್ನು ಹೊಕ್ಕನು. ಅದು ನಾಲ್ಕು ಅಂತಸ್ತಿನ ಮನೆ ಅತ್ಯಾತುರನಾಗಿ ನಾಲ್ಕನೆಯ ಮಾಳಿಗೆಗೆ ಹೋಗಲು ಉದ್ಯುಕ್ತನಾದನು. ಮೆಟ್ಟಲಿನ ಹಾದಿಯು ಕತ್ತಲೆಯಾಗಿದ್ದುದರಿಂದ ಒಂದು ಕೈಯಿಂದ ಕೈಪಿಡಿಯ ಕಂಬಿಯನ್ನು ಹಿಡಿದು ಮೇಲಕ್ಕೆ ದಡದಡನೆ ಹತ್ತುತ್ತಲಿದ್ದನು ನಾಲ್ಕನೆಯ ಅಂತಸ್ತು ಸಮೀಪಿಸಿದ ಹಾಗೆಲ್ಲಾ ಆತನ ಎದೆಯು ಬಡಿದುಕೊಳ್ಳುತ್ತಾ ಇದ್ದಿತು ಇದನ್ನು ತಡೆಯಲು ಮತ್ತೊಂದು ಕೈಯಿಂದ ಎದೆಯನ್ನು ಒತ್ತುತ್ತ ಹಂತವನ್ನು ಹತ್ತಿದನು. ಮೇಲಿನ ಅಂತಸ್ತಿನಲ್ಲಿದ್ದುದು ಒಂದೇ ಕೊಟ್ಟಡಿ, ಅದರಲ್ಲಿ ಅವನ ತಂದೆ ಭುಜಂಗಭೂಷಣನು ವಾಸವಾಗಿದ್ದನು.

ಜಯಲಕ್ಷ್ಮಿಯ ಆಗಮನವು ಭುಜಂಗಭೂಷಣನಿಗೆ ತಿಳಿದಿರಲಿಲ್ಲ. ಆತನು ಎಂದಿನಂತೆ ಬಾಗಿಲ ಇದಿರಿಗೆ ಇರುವ ಕಿಟಕಿಯ ಮುಖವಾಗಿ ಕುರ್ಚಿಯಲ್ಲಿ ಕುಳಿತು ಕಿಟಕಿಯಲ್ಲಿಟ್ಟಿದ್ದ ಹೂವಿನ ಗಿಡಗಳನ್ನು ಸರಿಮಾಡುತ್ತ ಹೂವುಗಳ ಬಣ್ಣ ವಾಸನೆಗಳನ್ನು ನೋಡಿ ಅನುಭವಿಸಿ ಸಂತೋಷಪಡುತ್ತಲಿದ್ದನು. ಕೋಣೆಯ ಬಾಗಿಲು ಅರ್ಧ ತೆರೆದಿದ್ದಿತು ಧರ್ಮದೇವನು ಕ್ಷಣಮಾತ್ರ ಬಾಗಿಲಲ್ಲಿ ನಿಂತು ಒಳಗಿನ ಸನ್ನಿವೇಶವನ್ನು ತಿಳಿದು, ಸದ್ದಿಲ್ಲದೆ ಭುಜಂಗಭೂಷಣನ ಹಿಂಭಾಗವನ್ನು ಸೇರಿ ಅವನ

ಕೊರಲನ್ನು ತನ್ನ ಎರಡು ಕೈಗಳಿಂದಲೂ ತಬ್ಬಿಕೊಂಡು ಅಪ್ಪಾ, ನಾನು ಬಂದೆ ಎಂದನು. ಭುಜಂಗಭೂಷಣನು ಹಿಂತಿರುಗಿ ಮಗನನ್ನು ಕಂಡು ಮೂರ್ಛಿತನಾದನು.

ಧರ್ಮದೇವನು ಗಾಬರಿಪಿದ್ದು ಅಪ್ಪಾ ಇದೇನು! ನಿನಗೆ ಮೆಯ್ ಸ್ವಸ್ಥವಿಲ್ಲದಿರುವಂತೆ ತೋರುತ್ತಲಿದೆ ಎಂದು ಕೂಗುತ್ತ, ತಂದೆಯ ಮುಖಕ್ಕೆ ತಣ್ಣೀರನ್ನು ಎರಚಿದ ಕೂಡಲೆ ಅವನು ಎಚ್ಚತ್ತನು

ಅಪ್ಪಾ ಏತಕ್ಕೆ ಮೂರ್ಛಿತನಾದೆ? ಎಂದು ಧರ್ಮದೇವನು ಕೇಳಲು "ಮಗನೇ, ನೀನು ಇಷ್ಟು ಜಾಗ್ರತೆಯಾಗಿ ಬರುವೆ ಎಂದು ನಾನು ಯೋಚಿಸಿರಲಿಲ್ಲ. ನೀನು ಹಠಾತ್ತಾಗಿ ಬಂದ ಸಂತೋಷದಿಂದ ನಾನು ಮೂರ್ಛಿತನಾದೆನು" ಎಂದನು

ಸಂತೋಷದಿಂದ ಮನುಷ್ಯರಿಗೆ ಹಾನಿಯುಂಟಾಗುವುದಿಲ್ಲವೆಂದು ನಾನು ಕೇಳಿದ್ದೆನು, ಆದುದರಿಂದ ನಾನು ಬಂದಿರುವುದನ್ನು ನಿನಗೆ ಮೊದಲು ತಿಳಿಸದೆ ನಿನ್ನನ್ನು ಆಲಿಂಗನಮಾಡಿದೆ ಏಳು, ಇನ್ನು ಮುಂದೆ ನಾವು ಸುಖವಾಗಿರೋಣ

ಮಗನೇ! ಸುಖವಾಗಿರೋಣ. ನೀನು ನನ್ನನ್ನು ಬಿಟ್ಟು ಪುನಃ ಎಲ್ಲಿಯೂ ಹೋಗುವುದಿಲ್ಲವೋ ಎಂದು ಕೇಳಿ, ಹಾಗೆಯೇ ಸ್ವಲ್ಪ ಆಲೋಚಿಸಿ ಅಯ್ಯಾ, ನಾನು ಎಂಥ ಮೂಢ, ಸ್ವಾರ್ಥಪರ, ನೀನು ನನ್ನನ್ನು ಬಿಟ್ಟು ಹೋಗದೆ ಇದ್ದರೆ ನಮ್ಮ ಜೀವನವು ಹೇಗೆ ಆಗುವುದು? ಒಳ್ಳೆಯದು, ಮಗನೇ, ನಿನ್ನ ಯೋಗಕ್ಷೇಮವನ್ನು ನನಗೆ ಸ್ವಲ್ಪ ತಿಳಿಸು.

ಅಪ್ಪಾ, ನಿನ್ನ ಆಶೀರ್ವಾದದ ಬಲದಿಂದ ನಾನು ಸುಖವಾಗಿದ್ದೇನೆ, ಜಯಲಕ್ಷ್ಮಿಯ ಅಧಿಪತಿಯು ಮೃತಪಟ್ಟನು, ಅದು ನನಗೆ ಬಹುಸಂಕಟಕರವಾಗಿದೆ. ಅವನ ಕೆಲಸವನ್ನು ನನಗೆ ಮಾಡಿಕೊಡುವುದಾಗಿ ನಮ್ಮ ಯಜಮಾನನು ಹೇಳಿರುವನು ಇಪ್ಪತ್ತು ವಯಸ್ಸಿನೊಳಗೆ ನೌಕಾಧಿಪತಿಯಾಗುವುದು ಅದೃಷ್ಟವಲ್ಲವೇ? ಆ ಕೆಲಸವಾದರೆ ನೂರು ವರಹಗಳ ಸಂಬಳವೂ ವ್ಯಾಪಾರದಿಂದ ಬರುವ ಲಾಭದಲ್ಲಿ ಒಂದು ಪಾಲೂ ಸಿಕ್ಕುವುದು. ಇದಕ್ಕಿಂತ ಭಾಗ್ಯ ಮತ್ತಾವುದು ಬೇಕು. ನನಗೆ ನೌಕಾಧಿಪತ್ಯವು ಸಿಕ್ಕಿತೆಂದು ಸಂತೋಷವಿದ್ದರೂ ಆತನ ಮರಣಕ್ಕಾಗಿ ಸಂಕಟವಾಗುತ್ತದೆ.

ಮಗನೇ, ದೈವಗತಿಯು ತಪ್ಪಲಾರದು. ಈ ಲೋಕದಲ್ಲಿ ಸುಖದುಃಖಗಳೆರಡೂ ಮಿಶ್ರವಾಗಿಯೇ ಇವೆ. ಪ್ರಾಪ್ತವಾದುದನ್ನು ಅನುಭವಿಸಲೇಬೇಕು.

ಅಪ್ಪಾ, ನೌಕಾಧಿಪತ್ಯವು ಸಿಕ್ಕಿದರೆ ಮೊದಲು ಒಂದು ಸ್ವಂತ ಮನೆಯನ್ನು ಮಾಡಿ, ಆ ಮನೆಯ ವರಾರದಲ್ಲಿ ಹೂವಿನ ತೋಟವೊಂದನ್ನು ಏರ್ಪಡಿಸಿ ಅದರಲ್ಲಿ ನಿನಗೆ ಇಷ್ಟವಾದ ಹೂವಿನ ಗಿಡಗಳನ್ನು ಹಾಕಿಸುತ್ತೇನೆ ಎಂದು ತಂದೆಯ ಮುಖವನ್ನು ನೋಡಿ ಹೇಳುತ್ತಲಿರುವಾಗ, ಭುಜಂಗಭೂಷಣನು ಪುನಃ ಮೂರ್ಛಿತನಾಗಿ ಕುರ್ಚಿಯ ಮೇಲೆ ಹಾಗೆಯೇ ಒರಗಿಕೊಂಡನು

ಅಯ್ಯೋ ಅಪ್ಪಾ ಇದೇನು! ನಿನಗೆ ಮೆಯ್ ಸ್ವಸ್ಥವಿಲ್ಲ; ಸ್ವಲ್ಪ ಹಾಲನ್ನಾದರೂ ಕುಡಿ ಎಂದು ಧರ್ಮದೇವನು ಕೂಗಿಕೊಂಡನು ಅಷ್ಟರಲ್ಲಿಯೇ ವೃದ್ಧನು ಎಚ್ಚತ್ತು ನನಗೆ ಹಾಲು ಬೇಕಿಲ್ಲ, ನೀನು ಅದನ್ನು ಹುಡುಕಲೂ ಬೇಡ ಎಂದನು.

ಸ್ವಲ್ಪ ಹಾಲು ತೆಗೆದುಕೊಂಡರೆ ಆಯಾಸಪರಿಹಾರವಾಗುವುದಲ್ಲದೆ ಬಲವೂ ಬರುವುದು. ಹಾಲು ಎಲ್ಲಿ ಇದ ಎಂದು ಆ ಕೊಟ್ಟಡಿಯ ಅಲಮಾರುಗಳನ್ನು ಹುಡುಕಲು ಹೊರಟನು.

ಅಪ್ಪಾ ಮಗೂ! ನೀನು ಹುಡುಕಿ ಪ್ರಯೋಜನವಿಲ್ಲ. ಮನೆಯಲ್ಲಿ ಹಾಲಿಲ್ಲ.

ದ್ರಾಕ್ಷಾರಸವೋ? — ಅದು ಮೊದಲೇ ಇಲ್ಲ.

ಏನು! ಅವುದೂ ಇಲ್ಲವೇ? ಎಂದುಕೊಂಡು ಧರ್ಮದೇವನು ಕಳೆಗುಂದಿ ನಿಂತನು

ಅಪ್ಪಾ ಮಗನೇ, ಹಗಲೂ ಇರುಳೂ ನಿನ್ನ ಯೋಚನೆಯಲ್ಲಿಯೇ ಇದ್ದುದರಿಂದ ನನಗೆ ಹಸಿವೇ ತೋರುತ್ತಿರಲಿಲ್ಲ ನೀನು ಊರಿಗೆ ಸುಖವಾಗಿ ಬಂದು ಸೇರಿದ ಸಂತೋಷದಿಂದ ಈಗ ನನಗೆ ಹಸಿವು ತೋರುತ್ತಲಿದೆ

ನೀನು ಹೇಳುವ ಮಾತುಗಳನ್ನು ಕೇಳಿದರೆ ಕಯ್ಯಲ್ಲಿ ದುಡ್ಡಿಲ್ಲದ ಆಹಾರಾದಿಗಳನ್ನು ಬಿಟ್ಟಂತೆ ತೋರುತ್ತಲಿದೆ ನಾನು ಪ್ರಯಾಣಮಾಡುವುದಕ್ಕೆ ಮೊದಲು ನಿನ್ನಲ್ಲಿ ವೆಚ್ಚಕ್ಕಾಗಿ ಇನ್ನೂರು ವರಹಗಳನ್ನು ಕೊಟ್ಟಿದ್ದೆನಲ್ಲಾ ಅದೇನಾಯಿತು? ಏತಕ್ಕೆ ಹೀಗೆ ಆಹಾರಾದಿಗಳನ್ನು ಬಿಟ್ಟಿರುವೆ?

ಮಗೂ, ನಮ್ಮ ಕೆಳಗಣ ಮಾಳಿಗೆಯುಲ್ಲಿರುವ ಕದರ್ಥಕನಿಗೆ ಕೊಡತಕ್ಕ

ಸಾಲವನ್ನು ನಾವು ಮರೆತಿದ್ದೆವು. ಆತನು ಅದನ್ನು ಜ್ಞಾಪಿಸಿ, ಕೂಡಲೇ ತೀರಿಸದಿದ್ದರೆ ಧನಕೋಟಿಗೆ ತಿಳಿಸಿ ಅವನಿಂದ ಹಣವನ್ನು ತಗೆದುಕೊಳ್ಳುವುದಾಗಿ ಹೇಳಿದನು. ಧನ ಕೋಟಿಗೆ ಈ ಸಂಗತಿಯು ತಿಳಿದರೆ ನಿನಗೇನಾದರೂ ತೊಂದರೆಯಾದೀತೋ ಎಂದು ಯೋಚಿಸಿ, ನೀನು ಕೊಟ್ಟಿದ್ದ ಹಣದಲ್ಲಿ ಆ ಸಾಲವನ್ನು ತೀರಿಸಿಬಿಟ್ಟೆನು.

ಅವನು ಕೊಟ್ಟಿದ್ದ ಸಾಲವು ನೂರ ತೊಂಬತ್ತು ವರಹಗಳಲ್ಲವೆ?— ಅಹುದು. ಅಷ್ಟನ್ನೂ ತೀರಿಸಿದೆಯಾ? ಭುಜಂಗಭೂಷಣನು ಅಹುದೆಂದು ತಲೆಯನ್ನು ಅಲುಗಿ ಸಿದನು.

ಅಯ್ಯೋ ದೇವರೇ, ಎಂದು ಧರ್ಮದೇವನು ನೆಲಕ್ಕೆ ಬಿದ್ದು ತಂದೆಯ ಪಾದ ಗಳನ್ನು ಹಿಡಿದುಕೊಂಡು ಕ್ಷಮಿಸು, ಕ್ಷಮಿಸು ಎಂದೆದ್ದು ತನ್ನ ಕವಚದಲ್ಲಿದ್ದ ಚಿನ್ನ, ಬೆಳಿ, ತಾಮ್ರದ ನಾಣ್ಯಗಳನ್ನು ಪಕ್ಕದಲ್ಲಿದ್ದ ಮೇಜಿನ ಮೇಲೆ ಸುರಿದು ಅಪ್ಪಾ, ಏಳು ಈ ಹಣವನ್ನು ತೆಗೆದುಕೊಂಡು ನಿನಗೆ ಬೇಕಾದ ಪದಾರ್ಥಗಳನ್ನೆಲ್ಲಾ ತರಿಸು ನಾಳೆ ನನ್ನ ಸಂಬಳವು ಬರುವುದು, ಅದನ್ನೂ ನಿನಗೆ ತಂದು ಕೊಡುವೆನು

ಮಗೂ! ಈ ಹಣವಾರದು? ಚಿನ್ನದ ನಾಣ್ಯಗಳೇ ಹೆಚ್ಚಾಗಿವೆ.

ಇದು ನನ್ನದು, ನಿನ್ನದು, ನಮ್ಮಿಬ್ಬರದು. ನನ್ನ ವೆಚ್ಚಕ್ಕೆ ಕೊಟ್ಟಿದ್ದ ಹಣವನ್ನು ಮಿತವಾಗಿ ವೆಚ್ಚಮಾಡಿ ಇದನ್ನು ಮಿಗಿಸಿಕೊಂಡೆನು ಅಯ್ಯೋ ಪಾಪ, ನೀನು ದುಡ್ಡಿಲ್ಲದೆ ಎಷ್ಟು ಕಷ್ಟಪಟ್ಟೆಯೋ! ಏಳು, ಪದಾರ್ಥಗಳನ್ನು ತರಿಸು

ಈಗ ನಾನು ಹೆಚ್ಚಾಗಿ ಪದಾರ್ಥಗಳನ್ನು ತರಿಸಿದರೆ 'ಇದುವರೆಗೆ ದುಡ್ಡಿಲ್ಲದೆ ಕಷ್ಟಪಡುತ್ತಿದ್ದನು, ಈಗ ಮಗನು ಊರಿಗೆ ಬಂದಮೇಲೆ ತನ್ನ ಕೈಗೆ ಎರಡು ಕಾಸು ಸಿಕ್ಕಿದೆ; ಅದರಿಂದ ಹೀಗೆ ಹೇರಳವಾಗಿ ಪದಾರ್ಥಗಳನ್ನು ತರಿಸಿಕೊಳ್ಳುತ್ತಿದ್ದಾನೆ' ಎಂದು ಜನಗಳು ಆಡಿಕೊಳ್ಳುವರು.

ಅಪ್ಪಾ, ಹಾಗಾದರೆ ನಿನ್ನ ಇಷ್ಟವಿದ್ದಂತೆ ಮಾಡು ಮೊದಲು ನಿನ್ನ ಉಪ ಚಾರಕ್ಕಾಗಿ ಒಬ್ಬ ಸೇವಕನನ್ನು ನೇಮಕಮಾಡಿಕೋ; ನೀನು ಒಬ್ಬನೇ ಇರುವುದು ಸರಿಯಲ್ಲ ಕೆಲವು ಅಪೂರ್ವವಾದ ಪದಾರ್ಥಗಳನ್ನು ಸುಂಕದವರ ಕಣ್ಣಿಗೆ ಬೀಳದ ಹಾಗೆ ಹಡಗಿನಲ್ಲಿಟ್ಟಿದ್ದೇನೆ ಅವುಗಳನ್ನು ನಾಳೆಯ ದಿನ ನಿನಗೆ ತಂದು ಕೊಡುವೆನು ಎಂದು ಹೇಳುತ್ತಿರುವಾಗ ಯಾರೋ ಮೇಲಕ್ಕೆ ಹತ್ತಿಬರುವಂತೆ ಮೆಟ್ಟಲು ಸದ್ದಾಗು

ವುದು ಕೇಳಿಸಿತು. ಆಗ ಧರ್ಮದೇವನು ಆರೋ ಬರುವಂತಿದೆ, ಸುಮಾರು ಹಜ್ಜೆಯ ಸದ್ದನ್ನು ನೋಡಿದರೆ ಕದರ್ಥಕನು ಬರುತ್ತಿರಬಹುದು. ಇವನಿಗೆ ಮನಸ್ಸಿನಲ್ಲೊಂದು, ಬಾಯಲ್ಲೊಂದು ; ಆದರೂ ಚಿಂತೆ ಇಲ್ಲ ನಮಗೆ ಒಂದು ಸಮಯದಲ್ಲಿ ಈತನು ಉಪಕಾರಮಾಡಿದಾನೆ, ಆದುದರಿಂದ ಇವನನ್ನು ನಾವು ಆದರದಿಂದ ಕಾಣೋಣ ಎಂದನು.

ಹೀಗೆಂದ ಭುಜಂಗಭೂಷಣನ ಮಾತನ್ನು ಧರ್ಮದೇವನು ಕೇಳಿ ಬಾಗಿಲಕಡೆಗೆ ತಿರುಗುವಷ್ಟರಲ್ಲಿಯೇ ಕದರ್ಥಕನು ಕೊಟ್ಟಡಿಯೊಳಗೆ ತಲೆಯನ್ನು ಹಾಕಿದನು. ಇವನಿಗೆ ಸುಮಾರು ಇಪ್ಪತ್ತಾರು ಇಪ್ಪತ್ತೇಳು ವಯಸ್ಸು ಕೈಯಲ್ಲಿ ಇದ್ದ ಬಟ್ಟೆಯ ಚೂರನ್ನೂ ವೇಷವನ್ನೂ ನೋಡಿದರೆ ಇವನು ಚಿಪ್ಪಿಗನ ಕೆಲಸವನ್ನು ಮಾಡಿ ಜೀವನ ಮಾಡುತ್ತಿರುವಂತೆ ತೋರುತ್ತಲಿದ್ದಿತು.

ಇವನು ಧರ್ಮದೇವನನ್ನು ನೋಡುತ್ತಲೆ ಹುಸಿನಗೆಯನ್ನು ಬೀರುತ್ತ ಓಹೋ, ಏನು ಧರ್ಮದೇವ ! ಸುಖವಾಗಿ ಊರಿಗೆ ಬಂದು ಸೇರಿದೆಯಾ ? ಎಂದು ಕುಶಲಪ್ರಶ್ನೆಯನ್ನು ಮಾಡಿದನು

ನಮ್ಮ ನೆರೆಹೊರೆಯವರಿಗೂ ಸ್ನೇಹಿತರಿಗೂ ಆವ ವಿಧದಲ್ಲಾದರೂ ಈ ಚೇತನನಿಂದ ಅನುಕೂಲವಾಗಲಿ ಎಂಬ ಅಭಿಲಾಷೆಯಿಂದ ಈಗತಾನೇ ಊರಿಗೆ ಬಂದು ಸೇರಿದೆ ನೀನು ಕ್ಷೇಮವಾಗಿದ್ದೀಯಾ ?

ನಿನ್ನ ಕೃಪೆಯಿಂದ ನನಗೇನೋ ದೇವರು ಕೊರತೆ ಮಾಡಿಲ್ಲ, ನೀನು ಅನುಕೂಲಸ್ಥಿತಿಯಲ್ಲಿರುವೆ ಎಂದು ಕೇಳಿ ನನಗೆ ಬಹುಸಂತೋಷವಾಯಿತು. ನನ್ನಿಂದ ಉಪಕಾರವನ್ನು ಹೊದ್ದುವ ಸ್ಥಿತಿಯಲ್ಲಿ ಬೇರೆ ಜನರು ಇದ್ದಾರೆಂಬುದು ನಿನಗೆ ಗೊತ್ತಿದಯಷ್ಟೆ ?

ಧರ್ಮದೇವನು ಈ ಮಾತನ್ನು ಕೇಳಿ ಖಿನ್ನನಾದನು. ಭುಜಂಗಭೂಷಣನು ತಲೆಯನ್ನು ತಗ್ಗಿಸಿಕೊಂಡನು. ಇದನ್ನು ನೋಡಿ ಕದರ್ಥಕನು ಇದು ನಿಮ್ಮನ್ನು ನಿರ್ದೇಶಿಸಿ ಹೇಳಿದ ಮಾತಲ್ಲ. ಕೊಟ್ಟ ಸಾಲವನ್ನು ಆಗಲೆ ತೀರಿಸಿದ್ದೀರಿ. ಅದರ ಹಂಗು ಆಗಲೆ ಹರಿಯಿತು ಎಂದನು.

ಹಾಗೆ ಹೇಳಬೇಡ  ಸಾಲವು ತೀರಿದರೂ ಸಮಯದಲ್ಲಿ ನೀನು ನಮಗೆ ಮಾಡಿದ ಉಪಕಾರವು ಎಲ್ಲಿಹೋದೀತು   ಅದನ್ನು ಮರೆಯಲು ಆಗುವುದಿಲ್ಲ.

ಅದು ಹಾಗಿರಲಿ.  ಅಂಗಡಿಯಿಂದ ಈ ಬಟ್ಟೆಯನ್ನು ನಾನು ತರುತ್ತಿರುವಾಗ ಹಾದಿಯಲ್ಲಿ ದುರ್ಮತಿಯು ಸಿಕ್ಕಿದನು  ನೀನು ಊರಿಗೆ ಬಂದ ವರ್ತಮಾನವನ್ನು ಹೇಳಿದುದರಿಂದ ನಿನ್ನನ್ನು ನೋಡಿಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆನು.

ನಮ್ಮನ್ನು ಕಂಡರೆ ನಿನಗೆ ಬಹುಅಭಿಮಾನ

ಈ ಕಾಲದಲ್ಲಿ ಸಜ್ಜನರು ಸಿಕ್ಕುವುದು ಅಪೂರ್ವ .  ಇದಲ್ಲದೆ ನೆರೆಹೊರೆಯವರಲ್ಲಿ ಒಬ್ಬರಿಗೊಬರು ಅಭಿಮಾನವಾಗಿರುವುದು ಏನು ವಿಶೇಷ, ಎಂದು ಮೇಜಿನ ಕಡೆ ತಿರುಗಿ ನೀನು ಪುಣ್ಯವಂತನಾದಂತೆ ತೋರುತ್ತಲಿದೆ ಎಂದು ಕೃಪಣದೃಷ್ಟಿಯಿಂದ ಹಣವನ್ನು ನೋಡಿದುದನ್ನು ಧರ್ಮದೇವನು ತಿಳಿದು ಈ ಹಣವು ನನ್ನದಲ್ಲ, ನಮ್ಮಪ್ಪನದು ; ನಾನೂರಲ್ಲಿ ಇಲ್ಲದಿದ್ದಾಗ ದುಡ್ಡಿಲ್ಲದೆ ತೊಂದರೆ ಪಟ್ಟೆಯೋ ಎಂದು ನನ್ನ ತಂದೆಯನ್ನು ಕೇಳಿದುದಕೆ ಅಂಥಾ ಸಂದರ್ಭವೇನೂ ಇಲ್ಲವೆಂದು ನನಗೆ ನಂಬಿಕೆಯನ್ನುಂಟುಮಾಡುವುದಕ್ಕಾಗಿ ತನ್ನ ಚೀಲದಲ್ಲಿದ್ದ ದುಡ್ಡನ್ನು ಮೇಜಿನ ಮೇಲೆ ಸುರಿದರು. ಎಂದು ತನ್ನ ತಂದೆಯ ಕಡೆಗೆ ತಿರುಗಿ ಅಪ್ಪಾ! ಈ ದುಡ್ಡಿನಲ್ಲಿ ಕದರ್ಥಕನಿಗೇನಾದರೂ ಬೇಕಾಗಿದ್ದಲ್ಲಿ ಕೊಟ್ಟು ಮಿಕ್ಕುದನ್ನು ಪುನಃ ಚೀಲದಲ್ಲಿ ಹಾಕು ಎಂದನು.

ನನಗೆ ದುಡ್ಡು ಈಗೇನೂ ಅವಶ್ಯಕವಿಲ್ಲ , ಬೇಕಾದಾಗ ಕೇಳುತ್ತೇನೆ  ದೇವರೇನೋ ನನಗೆ ಬೇಕಾದಷ್ಟನ್ನು ಕೊಟ್ಟಿದ್ದಾನೆ.  ನಿನ್ನ ವಿಷಯದಲ್ಲಿ ಧನಕೋಟಿಗೆ ಬಲು ಒಳ್ಳೆಯ ಅಭಿಪ್ರಾಯವಿರುವುದಂತೆ, ಅದು ನಿಜವೇ.

ನನ್ನ ಯಜಮಾನನು ಆವಾಗಲೂ ನನ್ನಲ್ಲಿ ವಿಶ್ವಾಸವುಳ್ಳವನಾಗಿದ್ದಾನೆ.

ಹಾಗಿರುವಲ್ಲಿ ಅವನು ನಿನ್ನನ್ನು ಭೋಜನಕ್ಕೆ ಕರೆದರೆ ನೀನು ಏತಕ್ಕೆ ಹೋಗಲಿಲ್ಲ ?

ಏನು ಮಗೂ! ಧನಕೋಟಿಯು ಭೋಜನಕ್ಕೆ ಕರೆದರೆ ನೀನು ಹೋಗಲಿಲ್ಲವೇ ? ಎಂದು ಭುಜಂಗಭೂಷಣನು ಕೇಳಿದುದಕ್ಕೆ, ಧರ್ಮದೇವನು ಅಪ್ಪಾ, ನಿನ್ನನ್ನು ನೋಡುವ ಆತುರದಿಂದ ಹೋಗಲಿಲ್ಲ ಎಂದನು

ಅದನ್ನು ಕೇಳಿ ಕದರ್ಥಕನು ಆತನು ನಿನಗೆ ನೌಕಾಧಿಪತ್ಯವನ್ನು ಕೊಡಲು ಉದ್ದೇಶಿಸಿರುವಾಗ ನೀನು ಭೋಜನಕ್ಕೆ ಹೋಗದೆ ಇದ್ದುದು ತಪ್ಪು ಎಂದನು.

ಇದರಿಂದಾತನು ಅಸಮಾಧಾನಗೊಳ್ಳಲಾರನು

ಆದರೂ ನಮಗೆ ಆರಿಂದ ಅನುಕೂಲವಾಗಬೇಕೋ ಅಂಥವರನ್ನು ಆಶ್ರಯಿಸಿ ಅವರು ಹೇಳಿದಂತೆ ಕೇಳಬೇಕು

ಹಾಗೆ ಮಾಡದೆಯೇ ನಾನು ನೌಕಾಧಿಪತಿಯಾಗಬಲ್ಲೆನೆಂದು ನನಗೆ ಭರವಸೆಯುಂಟು, ಎಂದು ಧರ್ಮದೇವನು ಹೇಳುತ್ತಲೆ, ಕದರ್ಥಕನು ಹಾಗಾದರೆ ಸರಿ ಈ ವರ್ತಮಾನವನ್ನು ಪಾಳೆಯದಲ್ಲಿರುವ ಯುವತಿಯು ಕೇಳಿದರೆ ಬಹು ಸಂತೋಷಪಡುವಳು ಎಂದನು

ಏನು ಲಲಿತಾಂಗಿಯೇ, ಎಂದು ಭುಜಂಗಭೂಷಣನು ಕೇಳಲು ಅಹುದಪ್ಪಾ, ಅಹುದು. ನಿನ್ನ ದರ್ಶನವನ್ನು ಮಾಡಿ ಯೋಗಕ್ಷೇಮವನ್ನು ತಿಳಿದು ಸಂತೋಷಪಟ್ಟೆನು. ಇನ್ನು ನೀನು ಅಪ್ಪಣೆಕೊಟ್ಟರೆ ಪಾಳೆಯಕ್ಕೆ ಹೋಗಿ ಲಲಿತಾಂಗಿಯ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರುತ್ತೇನೆ ಎಂದು ಧರ್ಮದೇವನು ಹೇಳಿದನು.

ಮಗನೇ! ಹೋಗಿ ಬಾ ನಿನ್ನಂಥ ಸತ್ಪುತ್ರನನ್ನು ದೇವರು ನನಗೆ ಕೊಟ್ಟುದಕ್ಕಾಗಿ ನಾನು ಎಷ್ಟು ಸಂತೋಷಪಡುತ್ತೇನೋ? ನೀನೂ ಸತ್ಪುತ್ರನನ್ನು ಪಡೆದು ಸಂತೋಷವಾಗಿರಬೇಕೆಂದು ದೇವರನ್ನು ಸರ್ವದಾ ಪ್ರಾರ್ಥಿಸುತಲಿರುವೆನು ನಿನಗೂ ನಿನ್ನ ಹೆಂಡಿತಿಗೂ ದೇವರು ಸುಖವನ್ನು ಕೊಡಲಿ

ಓಹೋ ವೃದ್ಧರೇ, ಇದೇನು! ಇನ್ನೂ ಮದುವೆಯಾಗುವುದಕ್ಕೇ ಮಾರ್ಗವಿಲ್ಲ, ಆಗಲೆ ಹೆಂಡಿತಿ ಎನ್ನುತ್ತೀರಿ ಮದುವೆಯಾಗಲಾಶೆಯುಳ್ಳ ಧರ್ಮದೇವನಿಗಿಂತಲೂ ನಿಮಗೆ ಆತುರ ಹೆಚ್ಚೆಂದು ತೋರುತ್ತದೆ ಎಂದು ಕದರ್ಥಕನೆಂದನು.

ನಮ್ಮ ಮದುವೆಯು ಜಾಗ್ರತೆಯಾಗಿಯೇ ಆಗುವುದರಿಂದ ನಮ್ಮಪ್ಪ ಈ ರೀತಿ ಹೇಳಿದರು.

ಹಾಗಾದರೆ ಶೀಘ್ರವಾಗಿ ನೀನು ಊರಿಗೆ ಬಂದುದು ಅನುಕೂಲವಾಯಿತು. ಇಲ್ಲವಾದರೆ ತೊಂದರೆಯಾಗುತ್ತಲಿದ್ದಿತು ಅದು ಏಕೆ?

ಲಲಿತಾಂಗಿಯು ಬಹುಸುಂದರಿ. ಸುಂದರಸ್ತ್ರೀಯರಿಗೆ ಅನೇಕವರಗಳು. ಅದರಲ್ಲಿ ಲಲಿತಾಂಗಿಯಂಥ ಗುಣವತಿಯಾದ ಸುಂದರಿಯನ್ನು ವರಿಸುವವರನ್ನು ಎಷ್ಟೆಂದು ಹೇಳಲಾದೀತು ?

ಇದು ನಿಶ್ಚಯವೋ ?—ನಿಶ್ಚಯ.

ಸಾಧಾರಣವಾಗಿ ಹೆಂಗುಸರ, ಅದರಲ್ಲೂ ಲಲಿತಾಂಗಿಯ, ವಿಷಯದಲ್ಲಿ ನನ್ನ ಅಭಿಪ್ರಾಯವ್ರು ಬೇರೆ

ಓಹೋ ! ಮರೆತೆ. ನೀನು ನೌಕಾಧಿಪತಿಯಾಗುವೆ ಆದುದರಿಂದ ನಿನ್ನನ್ನೇ ಅವಳು ವರಿಸುವಳು

ನೌಕಾಧಿಪತಿಯಾಗಲಿ ಆಗದೆ ಇರಲಿ ಅವಳು ನನ್ನನ್ನು ಬಿಟ್ಟು ಮತ್ತೊಬ್ಬರನ್ನೂ ವರಿಸಳು

ಯೌವನಸ್ಥರು ಈ ಅಭಿಪ್ರಾಯದಿಂದಿರುವುದೇ ಒಳ್ಳೆಯದು ಹೋಗಿ ಬಾ ಎಂದು ಕದರ್ಥಕನು ಹೇಳಿದ ಒಡನೆಯೇ ಧರ್ಮದೇವನು ಇಗೋ ಹೊರಟೆ ಎಂದು ಲಲಿತಾಂಗಿಯು ಇರುವ ಪಾಳೆಯಕ್ಕೆ ಹೊರಟನು. ಕೂಡಲೇ ಕದರ್ಥಕನು ಭುಜಂಗಭೂಷಣನ ಅಪ್ಪಣೆಯನ್ನು ಪಡೆದು ಅದೇ ಬೀದಿಯ ಕೊನೆಯಲ್ಲಿ ತಲೆಗೆ ಮುಸುಕು ಹಾಕಿಕೊಂಡು ಮರೆಯಾಗಿ ಕಾದಿದ್ದ ದುರ್ಮತಿಯ ಬಳಿಗೆ ಪುನಃ ಹೋದನು.

ಕದರ್ಥಕನನ್ನು ನೋಡಿದೊಡನೇ ದುರ್ಮತಿಯು ಧರ್ಮದೇವನನ್ನು ನೀನು ನೋಡಿದ್ದೆಯಾ ? ಅವನೊಡನೆ ಏನ ಮಾತನಾಡಿದೆ ? ನೌಕಾಧಿಪತಿಯಾಗುತ್ತೇನೆಂದು ಅವನೇನಾದರೂ ಹೇಳಿಕೊಂಡನೋ ?

ಈಗಲೇ ಆಗಿಬಿಟ್ಟಂತೆ ಹೇಳಿದನು.

ಅತ್ಯಾಶೆ, ಅತ್ಯಾತುರವಿರುವಂತೆ ತೋರುತ್ತಲಿದೆ

ಧನಕೋಟಿಯು ನೌಕಾಧಿಪತ್ಯವನ್ನು ಕೊಡುವುದಾಗಿ ವಾಗ್ದಾನಮಾಡಿದ್ದಾನೆಂದು ಹೇಳಿದನು.

ಆದರೂ ಬಲು ಜಂಭಗಾರ, ಅಹಂಕಾರದಿಂದ ಅವನಿಗೆ ತಲೆ ತಿರುಗಿ ಹೋಗಿರುವಂತೆ ತೋರುತ್ತಲಿದ

ಅಹುದಹುದು, ತಾನು ಒಬ್ಬ ದೊಡ್ಡ ಮನುಷ್ಯನಂತೆಯೂ ಸಾಹುಕಾರ ನಂತೆಯೂ ಭಾವಿಸಿಕೊಂಡು ನನಗೆ ಸಹಾಯವನ್ನು ಮಾಡುವುದಾಗಿ ಹೇಳಿದನು.

ನೀನು ಅದನ್ನು ಒಪ್ಪಿಕೊಳ್ಳಲಿಲ್ಲವಷ್ಟೆ ?

ನಾನು ಒಪ್ಪಿಕೊಳ್ಳಲಿಲ್ಲ. ನನ್ನಿಂದಲೇ ಒಂದು ಸಮಯದಲ್ಲಿ ಉಪಕಾರವನ್ನು ಹೊದ್ದಿದ್ದು ಈಗ ನನಗೇ ಉಪಕಾರಮಾಡುತ್ತೇನೆಂದು ಹೇಳುತ್ತಾನೆ. ಈಗಲೇ ಅವನಿಗೆ ಇಷ್ಟು ಜಂಭವಾದರೆ ಮುಂದೆ ನೌಕಾಧಿಪನಾದ ಮೇಲೆ ಕೇಳಬೇಕೇ.

ಇನ್ನೂ ನೌಕಾಧಿಪತಿಯಾಗಿಲ್ಲ, ದೇವರ ದಯವಿದ್ದರೆ ಆಗುವುದೂ ಇಲ್ಲ — ಆಗದೆ ಇದ್ದರೆ ಒಳ್ಳೆಯದಲ್ಲವೇ ?

ಅಹುದು. — ಹಾಗಾದರೆ ಅವನಿಗೆ ಆ ಕೆಲಸವನ್ನು ತಪ್ಪಿಸಿ, ಅವನನ್ನು ಹೀನ ಸ್ಥಿತಿಗೆ ತರಬಹುದು ಹಾ ! ಏನೆಂದೆ ?

ಏನೂ ಇಲ್ಲ , ನನಗೇನೋ ತೋರಿತು. ಅದೇನು ?

ಅವನು ಲಲಿತಾಂಗಿಯನ್ನು ಇನ್ನೂ ಪ್ರೀತಿಸುತ್ತಲಿದ್ದಾನೆಯೋ ?

ತನ್ನ ಪ್ರಾಣವನ್ನೇ ಅವಳಲ್ಲಿಟ್ಟಿರುವನು , ಆದರೆ ಇವನು ಅವಳನ್ನು ಮದುವೆ ಯಾಗುವುದು ಕಷ್ಟವೆಂದು ತೋರುತ್ತದೆ.

ಕಷ್ಟವೇನು ? — ನಾನು ಏತಕ್ಕೆ ಹೇಳಲಿ ಎಂದು ಕದರ್ಥಕನೆಂದುದಕೆ, ದುರ್ಮತಿಯು ಅದರಿಂದ ತುಂಬ ಕೆಲಸವಿದೆ, ಹೇಳು. ಧರ್ಮದೇವನನ್ನು ನೀನು ಪ್ರೀತಿಸುವೆಯೋ ?

ಈ ನಡುವೆ ಸ್ವಲ್ಪ ಗರಿಗಟ್ಟಿಕೊಂಡು ದುರಹಂಕಾರದಿಂದ ಮೆರೆಯುವ ಅವನನ್ನು ಆರು ತಾನೇ ಪ್ರೀತಿಸುವರು ?

ಹಾಗಾದರೆ ನಿನಗೆ ತಿಳಿದ ಸಂಗತಿಯನ್ನು ಹೇಳು.

ಲಲಿತಾಂಗಿಯಲ್ಲಿ ಅವಳ ಬಂಧುವಾದ ತರುಣನೊಬ್ಬನಿಗೆ ಅನುರಾಗವಿರುವುದು. ಅವರಿಬ್ಬರೂ ಆವಾಗಲೂ ಒಟ್ಟಿಗಿರುತ್ತಲಿದ್ದಾರೆ. ಅವಳು ಧರ್ಮದೇವನನ್ನು ವರಿಸಿದರೆ ಆತನು ಸುಮ್ಮನಿದ್ದಾನೆಯೇ ?

ಆತನಿಗೆ ಅವಳನ್ನು ಮದುವೆಯಾಗುವುದು ಇಷ್ಟವೋ ?

ಇಷ್ಟವಿಲ್ಲದಿದ್ದರೆ ಅವನೇಕೆ ಆವಾಗಲೂ ಅವಳನ್ನು ಎಡೆಬಿಡದೆ ಅನುಸರಿಸುತ್ತಿದ್ದಾನು?

ಧರ್ಮದೇವನು ಲಲಿತಾಂಗಿಯ ಮನೆಯ ಕಡೆಗೆ ಹೋದನೋ?

ನಾನು ಅವನ ಮನೆಯಿಂದ ಹೊರಡುವುದಕ್ಕೆ ಮೊದಲೇ ಅವನು ಅಲ್ಲಿಗೆ ಹೊರಟನು.

ಸರಿ, ಹಾಗಾದರೆ ಅವನು ಹೊರಟ ದಾರಿಯಲ್ಲಿಯೇ ನಾವೂ ಹೋಗೋಣ ಪಾಳೆಯದ ಹತ್ತಿರದಲ್ಲಿ ಒಂದು ಸತ್ರವಿದೆ. ಅಲ್ಲಿ ಬೇಕಾದ ತಿಂಡಿ ತೀರ್ಥಗಳು ಸಿಕ್ಕುತ್ತವೆ ಅದರ ಮುಂದೆ ಒಂದು ಸಣ್ಣ ತೋಟವಿದೆ. ನಾವಿಬ್ಬರೂ ಆ ತೋಟದಲ್ಲಿ ಕುಳಿತು ಪಾಳೆಯದಲ್ಲಿ ನಡೆಯುವ ಸಂಗತಿಗಳನ್ನು ನೋಡೋಣ

ಸತ್ರಗಳಲ್ಲಿ ದುಡ್ಡಿಲ್ಲದೆ ತಿಂಡಿ ತೀರ್ಥಗಳನ್ನು ಕೊಡುವುದಿಲ್ಲ. ನನ್ನಲ್ಲಿ ದುಡ್ಡಿಲ್ಲ. ನನ್ನ ತಿಂಡಿಯ ವೆಚ್ಚವನ್ನೂ ನೀನೇ ಸಲ್ಲಿಸುವುದಾದರೆ ಬರುತ್ತೇನೆ.

ಹಾಗೆಯೇ ಆಗಲಿ, ಬಾ, ಹೋಗೋಣ.

ಕೂಡಲೇ ಅವರಿಬ್ಬರೂ ಸತ್ರದ ಬಳಿಗೆ ಹೊರಟರು. ಹೋಗಿ ಸತ್ರದ ಯಜಮಾನನನ್ನು ಕಂಡು "ನಮ್ಮ ಊಟದ ಸಾಮಗ್ರಿಗಳನ್ನು ಈ ತೋಪಿನಲ್ಲಿರುವ ಮೇಜಿನ ಮೇಲೆ ಇರಿಸು" ಎಂದು ಹೇಳಿ, ತೋಪಿಗೆ ಬಂದು ಅಲ್ಲಿದ್ದ ಕುರ್ಚಿಗಳ ಮೇಲೆ ಕುಳಿತುಕೊಂಡರು ಪರಿಚಾರಕರು ತಿಂಡಿ ತೀರ್ಥಗಳನ್ನು ಅಲ್ಲಿಗೇ ತೆಗೆದುಕೊಂಡು ಬಂದು ಮೇಜಿನ ಮೇಲೆ ಇರಿಸುತ್ತಲಿದ್ದರು ಆಗ ದುರ್ಮತಿಯು ಕದರ್ಥಕನನ್ನು ನೋಡಿ "ಇಗೋ ನೋಡು, ಈ ಪ್ರದೇಶವು ಎಷ್ಟು ರಮಣೀಯವಾಗಿದೆ; ಬಿಸಿಲು ಚುರುಕಾಗಿದ್ದರೂ ದಟ್ಟವಾದ ಮರಗಳಿಂದ ಅದರ ವೇಗವು ತೋರುವುದಿಲ್ಲ ಈ ಬೀದಿಯೂ ಸಮುದ್ರವೂ ಎಷ್ಟು ಚೆನ್ನಾಗಿ ಕಾಣಬರುವುದು, ಇಲ್ಲಿಯ ಹೂಗಿಡುಗಳೂ, ಸುವಾಸನೆಯೊಡನೆ ಬೀಸುವ ತಂಗಾಳಿಯೂ, ಪಕ್ಷಿಗಳ ಗಾನವೂ ಮನಸ್ಸಿಗೆ ತುಂಬ ಆಹ್ಲಾದವನ್ನುಂಟುಮಾಡುತ್ತಲಿವೆ" ಎಂದನು.

ತಿಂಡಿಯನ್ನು ತಿಂದರೆ ಉಂಟಾಗುವ ಆನಂದಕ್ಕಿಂತ ಇದರಲ್ಲಿ ಏನು ಹೆಚ್ಚು ಆನಂದವಾಗುತ್ತದೆ?

ಅದಕ್ಕಾಗಿಯೇ ನಾನು ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆನು.

ಹಾಗಾದರೆ ಕಬಳಿಸೋಣ ಎಂದು ಹೇಳುತ್ತ ಕದರ್ಥಕನು ತಿನ್ನುವುದಕ್ಕೆ ಮೊದಲು ಮಾಡಿದನು

---

# ಮೂರನೆಯ ಅಧ್ಯಾಯ

## ಊರ ಹೊರಗಣ ಪಾಳೆಯ

ಕದರ್ಥಕನೂ ದುರ್ಮತಿಯೂ ಕುಳಿತಿದ್ದ ಸ್ಥಳಕ್ಕೆ ಸುಮಾರು ನೂರು ಗಜಗಳ ದೂರದಲ್ಲಿ ಪಾಳೆಯವೊಂದಿದ್ದಿತು ಅದು ಹಿಂದೆ ಜನಭರಿತವಾಗಿದ್ದು ಈಗ ಹೆಚ್ಚು ಕಡಮೆ ಅರೆವಾಸಿ ಪಾಳುಬಿದ್ದಿದೆ

ಇಲ್ಲಿ ವಾಸಮಾಡುವವರೆಲ್ಲರೂ ಪರದೇಶದವರು ಅವರು ಒಂದಾನೊಂದು ಕಾಲದಲ್ಲಿ ಸಮುದ್ರಮಾರ್ಗವಾಗಿ ಇಲ್ಲಿಗ ಬಂದು ಈ ದೇಶದ ರಾಜನ ಅಪ್ಪಣೆಯನ್ನು ಪಡೆದು ಇಲ್ಲಿಯೇ ನೆಲಸಿ, ಪ್ರತ್ಯೇಕವಾದ ಒಂದು ಪಾಳೆಯವನ್ನು ಕಟ್ಟಿಕೊಂಡು ವಾಸಮಾಡಿಕೊಂಡಿದ್ದರು ಬಹು ದಿವಸಗಳಿಂದ ಅವರು ಇಲ್ಲಿಯೇ ನೆಲೆಗೊಂಡಿದ್ದುದರಿಂದ ಈ ದೇಶೀಯರೊಡನೆ ಕಲೆತು ಬಂಧುತ್ವವನ್ನು ಬೆಳಸಿಕೊಂಡಿದ್ದರು. ಅವರು ಅಂಬಿಗರ ವೃತ್ತಿಯಿಂದ ಜೀವನವನ್ನು ಮಾಡುತ್ತಿದ್ದರು ಅವರು ಧೈರ್ಯಶಾಲಿಗಳು, ಸಾಧುಪ್ರಕೃತಿಗಳು, ದ್ವೇಷವಿಟ್ಟರೆ ಹಗೆಗಳನ್ನು ಹೇಗಾದರೂ ಮಾಡಿ ಕೊಲ್ಲದೆ ಬಿಡುತ್ತಿರಲಿಲ್ಲ. ಪ್ರತಿಯೊಬ್ಬನೂ ತನ್ನ ನಡುಕಟ್ಟಿನಲ್ಲಿ ಆವಾಗಲೂ ಒಂದು ಚೂರಿಯನ್ನೋ ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು

ಈ ಪಾಳೆಯದಲ್ಲಿ ಒಂದೇ ಬೀದಿ, ಅದರ ಇಕ್ಕೆಲಗಳಲ್ಲಿಯೂ ಎರಡು ಸಾಲು ಮನೆಗಳಿರುವುವು. ಬಿದ್ದುಹೋದ ಮನೆಗಳು ಹೊರತು ಮಿಕ್ಕುವೆಲ್ಲವೂ ಹುಲ್ಲಿನವು. ಅವುಗಳಲ್ಲಿ ಒಂದು ಶುಭ್ರವಾಗಿಯೂ ಶುಚಿಯಾಗಿಯೂ ಇದ್ದಿತು ಅದರ ತಲೆಬಾಗಿಲು ಹಾಕಿದ್ದಿತು; ಒಳಗೆ ಆರೋ ಇಬ್ಬರು ಮಾತನಾಡುತ್ತಿರುವಂತೆ ಸದ್ದು ಕೇಳಿಸುತ್ತಲಿದ್ದಿತು. ನಡುಮನೆಯಲ್ಲಿ ಒಂದು ಮೇಜೂ ಕೆಲವು ಕುರ್ಚಿಗಳೂ ಇದ್ದುವು. ಒಂದು ಕುರ್ಚಿಯನ್ನು ಒರಗಿಕೊಂಡು ಯುವತಿಯೊಬ್ಬಳು ನಿಂತಿದ್ದಳು. ಅವಳು ಎಡಗೈಯಲ್ಲಿ ದಪ್ಪನಾದ ಹೂವಿನ ಗೊಂಚಲನ್ನು ಹಿಡಿದುಕೊಂಡು ಬಲಗೆ

ಯಿಂದ ಒಂದೊಂದಾಗಿ ಹೂವನ್ನೆಲ್ಲ ಕಿತ್ತು ಎಸೆಯುತ್ತಲಿದ್ದಳು ಆವಳಿಗೆ ಸುಮಾರು ಹದಿನೆಂಟು ವಯಸ್ಸು . ಅವಳ ರೂಪಲಾವಣ್ಯಗಳನ್ನು ನೋಡಿ ಅಪ್ಸರಸ್ತ್ರೀಯರೂ ನೋಲುತ್ತಲಿದ್ದರು ಕೋಮಲವಾದ ಪಾದಗಳಿಂದ ಅವಳು ಅಡಿಗಡಿಗೆ ನೆಲವನ್ನು ತಾಡನಮಾಡುತ್ತಿದ್ದಳು. ಆಕೆಯಿದ್ದ ಸ್ಥಳಕ್ಕೆ ಮೂರು ನಾಲ್ಕು ಮಾರು ದೂರದಲ್ಲಿ ಒಂದು ಕುರ್ಚಿಯ ಮೇಲೆ ಒಬ್ಬ ಯುವಕನು ಕುಳಿತುಕೊಂಡು ಅವಳ ಮುಖವನ್ನೇ ನೋಡುತ್ತ ಅವಳ ಮಾತುಗಳಿಂದ ತನಗೆ ಉಂಟಾದ ಅಸಮಾಧಾನವನ್ನು ಸೂಚಿಸುತ್ತ ಲಿದ್ದನು.

ಲಲಿತಾಂಗೀ, ಚೈತ್ರವೈಶಾಖವೂ ಬಂದಿತು ಇದು ಲಗ್ನಕಾಲವಲ್ಲವೇ ?

ನಿನಗೆ ಎಷ್ಟು ಸಾರಿ ಹೇಳಲಿ

ತಿರಿಗಿ ಹೇಳು ; ಮತ್ತೊಮ್ಮೆ ಹೇಳು . ಪುನಃ ಹೇಳು . ನೀನು ಎಷ್ಟು ಸಲ ಹೇಳಿದರೂ ನನಗೆ ನಂಬುಗೆಯುಂಟಾಗುವುದಿಲ್ಲ ನನ್ನ ಪ್ರಾಣವು ನಿನ್ನ ಕೈಯಲ್ಲಿದೆ. ನಿನಗೆ ನನ್ನ ಮೇಲೆ ಇನ್ನೂ ಕರುಣೆ ಬಾರದೇ ? ನನ್ನ ಆಸೆಯನ್ನು ಏಕೆ ಭಂಗ ಪಡಿಸುತ್ತೀಯೆ ? ಹತ್ತು ವರ್ಷಗಳಿಂದಲೂ, ನೀನುಂಟಾದರೆ ಲೋಕವುಂಟೆಂದು ನಂಬಿ ಕೊಂಡಿದ್ದ ನಾನು ಈಗ ನಿನ್ನಿಂದ ತಿರಸ್ಕೃತನಾದರೆ ಬದುಕುವುದು ಹೇಗೆ !

ವಿಷಯಲಂಪಟ, ನಾನು ಆವಾಗಲೂ ನಿನಗ ಇತರವಿಧವಾದ ಆಸೆಯನ್ನು ತೋರಿ ಸಲಿಲ್ಲ ನೀನು ನನಗೆ ಒಡಹುಟ್ಟಿದವನು ಎಂದು ಎಷ್ಟೋ ಸಾರಿ ಹೇಳಿದ್ದೇನೆ. ಒಡ ಹುಟ್ಟಿದವಳು ಎಷ್ಟು ಮಟ್ಟಿಗೆ ಪ್ರೀತಿಯನ್ನು ತೋರಿಸಬಹುದೋ ಅಷ್ಟು ಮಟ್ಟಿಗೆ ನಾನು ತೋರಿಸಿರುತ್ತೇನೆ ನೀನು ನನ್ನನ್ನು ಮದುವೆಯಾಗಬೇಕೆಂದು ಬಯಸುವುದು ಸರಿಯಲ್ಲ.

ಅಹುದು, ಆದರೆ ನಿನ್ನ ಮೃದುವಾದ ಮುಖದಿಂದ ಇಂಥ ಕಠಿಣವಾದ ಮಾತು ಗಳು ಹೊರಡುವುವೆಂದು ನಾನು ತಿಳಿದಿರಲಿಲ್ಲ ನಾವಿಬ್ಬರೂ ಒಂದೇ ದೇಶದವರು. ಈ ದೇಶದವರನ್ನು ನಾವು ಮದುವೆಯಾಗಬಾರದೆಂಬ ಕಟ್ಟಳೆಯು ನಿನಗೆ ಗೊತ್ತಿ ದೆಯೋ ಇಲ್ಲವೋ ?

ಇದು ಶಾಸ್ತ್ರವಲ್ಲ , ಬರೆಯ ಆಚಾರ. ಈ ಆಚಾರವೂ ಹಿಂದಿನಿಂದಲೇ ಮಲಿನ ವಾಗುತ್ತ ಬಂದಿದೆ. ಈ ಮಾತು ಪ್ರಯೋಜನವಿಲ್ಲ ಇದಲ್ಲದೆ ನಾನು ನಿನ್ನನ್ನು ಮದುವೆಯಾಗುವುದರಲ್ಲಿ ಹಲವು ತೊಂದರೆಗಳುಂಟು. ಸರ್ಕಾರದವರು ನಿನ್ನನ್ನು ಸೈನ್ಯಕ್ಕೆ

ಸೇರಿಸಿಕೊಂಡಿದಾರೆ ಆವ ನಿಮಿಷದಲ್ಲಿ ಅವರು ನಿನ್ನನ್ನು ಕರೆದರೂ ನೀನು ಯುದ್ಧಕ್ಕೆ ಹೊರಡಬೇಕು ನೀನು ಯುದ್ಧಕ್ಕೆ ಹೊರಟು ಹೋದರೆ ನನ್ನ ಗತಿ ಏನಾಗ ಬೇಕು? ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೂಂಡು ತಿರುಪೆಮಾಡಿ ಜೀವಿ ಸುತ್ತಲಿದ್ದು ಮದುವೆಯಾದ ಗಂಡನೂ ದೇಶಾಂತರಕ್ಕೆ ಹೊರಟು ಹೋದರೆ, ಏನ ಮಾಡಲಾವೆನು? ಈಗ ನೀನು ಮೀನುಗಳನ್ನು ಹಿಡಿದು ಸೋದರಿಯೆಂಬ ಅಭಿಪ್ರಾಯ ದಿಂದ ನನಗೆ ತಂದುಕೊಡುತ್ತಿದ್ದೀಯೆಂದು ತೆಗೆದುಕೊಳ್ಳುತ್ತಿದ್ದೇನೆ ಹಾಗಲ್ಲದೆ ಬೇರೆ ಅಭಿಪ್ರಾಯದಿಂದ ಕೊಡುವೆಯಾದರೆ ತೆಗೆದುಕೊಳ್ಳಲು ನನಗೆ ಸ್ವಲ್ಪವೂ ಇಷ್ಟವಿಲ್ಲ.

ನಾವಿಬ್ಬರೂ ತಬ್ಬಲಿಗಳು, ಬಡವರು. ನೀನು ನನ್ನನ್ನು ಮದುವೆಯಾದರೆ ನಾವು ಅನ್ಯೋನ್ಯವಾಗಿದ್ದುಕೊಂಡು ಸುಖವಾಗಿರಬಹುದು ದೇವರು ನನಗೆ ಶಕ್ತಿ ಯನ್ನೂ ಬುದ್ಧಿಯನ್ನೂ ಕೊಟ್ಟಿದ್ದಾನೆ. ಆವ ಕಷ್ಟವಾದರೂ ದ್ರವ್ಯವನ್ನು ಸಂಪಾದಿಸಿ ನಿನ್ನನ್ನು ಸುಖವಾಗಿಡಬಲ್ಲೆನೆಂಬ ಧೈರ್ಯವು ನನಗೆ ಉಂಟು. ಹೆಂಗುಸಿಗೆ ಗಂಡನಲ್ಲಿ ವಿಧೇಯತೆಯೂ ಸಂಸಾರವನ್ನು ನಡೆಸುವ ಶಕ್ತಿಯೂ ಇರಬೇಕು. ಇವೆರಡೂ ನಿನ್ನಲ್ಲಿ ಪೂರ್ಣವಾಗಿದೆ

ಒಬ್ಬನನ್ನು ಪ್ರೀತಿಸುತ್ತಲಿದ್ದವಳು ಮತ್ತೊಬ್ಬನನ್ನು ಮದುವೆಯಾದರೆ ಅವಳಿಗೆ ಅವನಲ್ಲಿ ಹೇಗೆ ತಾನೇ ಅನುರಾಗಪಿದೀತು? ಅವಳು ಹೇಗೆ ತಾನೇ ಸಂಸಾರವನ್ನು ಸರಿಯಾಗಿ ನಡೆಸುವಳು? ನೀನು ದ್ರವ್ಯವನ್ನು ಸಂಪಾದಿಸಿ ನಾನು ಸುಖಪಡುವೆನೆಂಬ ನಂಬುಗೆಯು ನನಗಿಲ್ಲ

ನೀನು ನನ್ನನ್ನು ವರಿಸುವುದಕ್ಕೆ ನನ್ನ ಬಡತನವೇ ಅಡ್ಡಿಯಾಗಿರುವಂತಿದೆ ನಾನು ನಿನ್ನನ್ನು ನನ್ನ ಭಾಗ್ಯಲಕ್ಷ್ಮಿಯೆಂದು ಎಣಿಸಿದ್ದೇನೆ ನೀನು ನನ್ನ ಕೈ ಹಿಡಿದರೆ ಎಲ್ಲವೂ ಕೈಗೂಡಿ ನಾನು ಭಾಗ್ಯವಂತನಾಗುವುದರಲ್ಲಿ ಸಂದೇಹವಿಲ್ಲ

ಸದ್ಯದಲ್ಲಿ ಯುದ್ಧವಿಲ್ಲದಿರುವುದರಿಂದ ನೀನು ಇಲ್ಲಿ ಇರುತ್ತಿದ್ದೀಯೆ. ಯುದ್ಧ ಪ್ರಾರಂಭವಾದರೆ ನೀನೆಲ್ಲೋ, ನಾನೆಲ್ಲೋ? ಆದುದರಿಂದ ಮದುವೆಯ ಯೋಚನೆ ಯನ್ನು ಬಿಟ್ಟುಬಿಡು. ನಾನುನಿನ್ನನ್ನು ಮದುವೆಯಾಗುವಳಲ್ಲ

ನಾನು ನಾವಿಕನ ವೇಷದಿಂದ ಬಂದರೆ ನನ್ನನ್ನು ಮದುವೆಯಾಗುತ್ತೀಯೋನೋ ಎಂದು ವಿಷಯಲಂಪಟನು ಹೇಳಲು, ಲಲಿತಾಂಗಿಗೆ ಕೋಪಬಂದು ಏನೆಂದೆ? ಎಂದಳು.

ನೀನು ನಾವಿಕನನ್ನು ವರಿಸಿರುವುದರಿಂದಲ್ಲವೇ ನನ್ನನ್ನು ಹೀಗೆ ತಿರಸ್ಕರಿಸುತ ಲಿದ್ದೀಯೆ. ನಾವಿಕರು ಸಮುದ್ರದಂತೆ ಚಂಚಲಬುದ್ಧಿಯುಳ್ಳವರು. ಇದಲ್ಲದೆ ಸಮು ದ್ರಯಾನವು ತುಂಬ ಅಪಾಯಕರ

ವಿಷಯಲಂಪಟನೇ, ನೀನು ಹೆರರಿಗೆ ಕೇಡನ್ನು ಬಯಸಿ ಸುಖಪಡಬೇಕೆಂಬ ದುರ್ಬುದ್ಧಿಯುಳ್ಳವನು ಇದುವರೆಗೂ ಇದು ನನಗೆ ತಿಳಿದಿರಲಿಲ್ಲ ನಾನು ಧರ್ಮ ದೇವನನ್ನು ವರಿಸಿರುವುದೇನೋ ನಿಜ, ಅವನನ್ನೇ ಮದುವೆಯಾಗುತೇನೆ. ಆತನು ಯೋಗ್ಯನು, ಸುಶೀಲನು; ದೇವರು ಅಂಥವನನ್ನು ಎಂದಿಗೂ ಕೈಬಿಡುವುದಿಲ್ಲ. ಒಂದು ವೇಳೆ ಗ್ರಹಚಾರಕಡಿಮೆಯಾಗಿ ಅವನು ಸಮುದ್ರದಲ್ಲಿ ಸತ್ತರೂ ನನ್ನನ್ನೇ ಸ್ಮರಿಸಿ ಕೊಂಡು ಸಾಯುವನು ಎಂದು ಹೇಳಿ ಲಲಿತಾಂಗಿಯು ಕೋಪದಿಂದ ವಿಷಯಲಂಪ ಟನ ಮುಖವನ್ನು ದುರದುರನೆ ನೋಡುತ್ತ ಕಯ್ಯಲ್ಲಿದ್ದ ಹೂವಿನ ಗೊಂಚಲನ್ನು ನೆಲದ ಮೇಲೆ ಬಿಸುಟು ನಿನ್ನನ್ನು ನೋಡಿದರೆ ಅವುದೋ ಒಂದು ಕಾರಣದಿಂದ ಧರ್ಮದೇವ ನನ್ನು ಕೆಣಕಿ ಅವನ ಸಂಗಡ ಯುದ್ಧವನ್ನು ಮಾಡಿ ಅವನನ್ನು ಕೊಲ್ಲುವ ಪ್ರಯತ್ನ ವನ್ನು ಮಾಡುವೆಯೆಂದು ತೋರುತ್ತಲಿದೆ ಹಾಗೇನಾದರೂ ಯುದ್ಧ ನಡೆದು ನೀನು ಪರಾಜಿತನಾದರೆ ಅನ್ಯಾಯವಾಗಿ ನನ್ನ ಸ್ನೇಹವನ್ನು ಕಳೆದುಕೊಳ್ಳುತ್ತೀಯೆ ; ಅವನು ಪರಾಜಿತನಾದರೆ ನನ್ನ ದ್ವೇಷವನ್ನು ಸಂಪಾದಿಸಿಕೊಳ್ಳುತ್ತೀಯೆ ಯುದ್ಧದಲ್ಲಿ ಅವನು ಮೃತಪಟ್ಟರೆ ನಾನು ಜೀವದೊಂದಿಗೆ ಇರತಕ್ಕವಳಲ್ಲ ; ಇದು ನಿಶ್ಚಯ ನಾನು ಪ್ರೀತಿಸುತ್ತಲಿರುವ ಧರ್ಮದೇವನೊಡನೆ ನೀನು ಜಗಳವಾಡುವುದರಿಂದ ನಿನಗೆ ಏನೂ ಪ್ರಯೋಜನವಾಗಲಾರದು ನಿನಗೆ ಬುದ್ಧಿಯಿದ್ದರೆ ನನ್ನ ಸ್ನೇಹವನ್ನು ಉಳಿಸಿಕೋ ಎಂದು ಹೇಳುತ್ತ, ಅಷ್ಟರಲ್ಲಿಯೇ ಧರ್ಮದೇವನನ್ನು ಸ್ಮರಿಸಿಕೊಂಡು, ಅಹಹಾ ! ನನ್ನ ಮನೋವಲ್ಲಭನು ಇಲ್ಲಿಂದ ಪ್ರಯಾಣಮಾಡಿ ಮೂರು ತಿಂಗಳಿಗೆ ಮೇಲಾಯಿತು, ಇನ್ನೂ ಊರಿಗೆ ಬರಲಿಲ್ಲವಲ್ಲ! ಬಿರುಗಾಳಿ ಮಳೆಗಳ ದೆಸೆಯಿಂದ ಸಮುದ್ರದಲ್ಲಿ ಅನೇಕ ಅನಾಹುತಗಳಾದುವೆಂದು ತಿಳಿಯಬರುತ್ತಿದ. ದೇವಾಧಿದೇವನೇ ! ಧರ್ಮದೇವನನ್ನು ಕಾಪಿಟ್ಟು ನನ್ನೊಡನೆ ಕೂಡಿಸು ಎಂದು ಮನಸ್ಸಿನಲ್ಲಿ ದೇವರನ್ನು ಪ್ರಾರ್ಥಿಸುತ್ತ ಕಣ್ಣು ಗಳಲ್ಲಿ ನೀರನ್ನು ತಂದುಕೊಂಡಳು.

ಲಲಿತಾಂಗಿಯು ತನಗಾಗಿ ಕಂಬನಿಗರೆದಿದ್ದ ಪಕ್ಷದಲ್ಲಿ ವಿಷಯಲಂಪಟನು ಮನ

ಗರಗಿ ಅವಳನ್ನು ಸಮಾಧಾನಗೊಳಿಸಲು ಪ್ರಯತ್ನಪಡುತ್ತ ಅವಳಿಗಾಗಿ ತನ್ನ ಪ್ರಾಣವನ್ನು ಅರ್ಪಿಸುವುದಕ್ಕೂ ಸಿದ್ಧನಾಗುತ್ತಿದ್ದನು. ಈಗ ಅವಳು ಮತ್ತೊಬ್ಬನನ್ನು ಕುರಿತು ಹಂಬಲಿಸುತಿದ್ದುದರಿಂದ ಅವನ ಮನಸ್ಸು ಕರಗದೆ ಕೋಪವು ಉಕ್ಕಿಬಂದು ಕಣ್ಣುಗಳು ಕೆಂಪೇರಿದುವು ಕುರ್ಚಿಯಿಂದ ಅವನು ಎದ್ದು ತಲೆಯನ್ನು ತಗ್ಗಿಸಿಕೊಂಡು ಸ್ವಲ್ಪಕಾಲ ಶತಪಥವಂ ಮಾಡುತ್ತ ತಟ್ಟನೆ ಲಲಿತಾಂಗಿಯ ಇದಿರಿನಲ್ಲಿ ನಿಂತು, ಅವಳ ಮುಖವಂ ನೋಡಿ ಕಡೆಗೆ ನಿನ್ನ ಅಭಿಪ್ರಾಯವೇನು, ಹೇಳಿಬಿಡು ಎಂದನು

ಧರ್ಮದೇವನೇ ನನ್ನ ಪತಿಯು, ಉಳಿದವರು ಸೋದರರು

ನಿನಗೆ ಅವನಲ್ಲಿಯೇ ಅನುರಾಗವೋ?—ಅಹುದು

ಆ ಮಾತನ್ನು ಕೇಳುತ್ತಲೇ ವಿಷಯಲಂಪಟನು ತಲೆಯನ್ನು ಬಾಗಿಸಿ ನಿಟ್ಟುಸಿರಂ ಬಿಟ್ಟು ಹಲ್ಲನ್ನು ಕಡಿಯುತ್ತ, ಒಂದು ವೇಳೆ ಅವನು ಸತ್ತಿದ್ದರೋ? ಎಂದು ಕೇಳಲು, ಅವನು ಸತ್ತ ಸುದ್ದಿಯನ್ನು ಕೇಳಿದ ಕೂಡಲೇ ಈ ಸಮುದ್ರತೀರದಲ್ಲಿರುವ ಉನ್ನತವಾದ ಶಿಲೆಯ ಮೇಗಣಿಂದ ಸಮುದ್ರಕ್ಕೆ ದುಮ್ಮಿಕ್ಕಿ ಪ್ರಾಣವನ್ನು ಬಿಡುವೆನು ಎಂದಳು.

"ಅವನು ನಿನ್ನನ್ನು ಮರೆತು ಮತ್ತಾವಳನ್ನಾದರೂ— "

ಈ ಮಾತು ಮುಗಿವುದರೊಳಗಾಗಿಯೇ ಲಲಿತಾಂಗಿ! ಲಲಿತಾಂಗಿ! ಬಾಗಿಲ ತೆಗೆ, ನಾನು ನಾನು, ಎಂದು ಯಾರೋ ಬಾಗಿಲನ್ನು ತಟ್ಟಿದರು. ಆ ಸದ್ದನ್ನು ಕೇಳಿದ ಕೂಡಲೇ ಅವಳ ಮೈಯೆಲ್ಲವೂ ರೋಮಾಂಚಿತವಾಯಿತು ನಗೆಮೊಗದಿಂದ ಆಕೆಯು ವಿಷಯಲಂಪಟನನ್ನು ನೋಡಿ ಇಗೋ, ಅವನು ನನ್ನನ್ನು ಮರೆತಿಲ್ಲ ಕಂಡೆಯಾ ಎಂದು ಹೇಳಿ, ಬಾಗಿಲನ್ನು ತೆಗೆದಳು ಕಾಳಸರ್ಪನ ಶಬ್ದವಂ ಕೇಳಿದ ಮನುಷ್ಯನು ಹೇಗೆ ದೂರಕ್ಕೆ ಓಡುವನೋ ಆ ರೀತಿ ಧರ್ಮದೇವನ ಧ್ವನಿಯಂ ಕೇಳಿ ವಿಷಯಲಂಪಟನು ಕುಳಿತಿದ್ದ ಕುರ್ಚಿಯಿಂದದ್ದು ಕತ್ತಲಾಗಿದ್ದ ಮೂಲೆಯ ಮಂಚದ ಮೇಲೆ ಬಿದ್ದು ಕೊಂಡನು.

ಧರ್ಮದೇವನೂ ಲಲಿತಾಂಗಿಯೂ ಒಬ್ಬರನ್ನೊಬ್ಬರು ನೋಡಿದರು. ಸಂತೋಷಾತಿಶಯದಿಂದ ಮಾತು ಹೊರಡದ ಇಬ್ಬರೂ ಕೆಲವು ಕಾಲ ಸ್ತಂಭೀಭೂತರಾಗಿದ್ದು, ಅನಂತರ ಗದ್ಗದಸ್ವರದಿಂದ ಕೂಡಿ ಮಾತುಗಳನ್ನು ಆಡಿದರು. ಅವುಗಳ ಅಭಿಪ್ರಾಯವು ಅವರಿಗೇ ಗೊತ್ತು ಸ್ವಲ್ಪ ಹೊತ್ತಾದ ಮೇಲೆ ಧರ್ಮದೇವನು ವಿಷಯಲಂಪಟನನ್ನು

ಹಠಾತ್ತಾಗಿ ನೋಡಿದನು. ದುಃಖಸಮುದ್ರದಲ್ಲಿ ಸ್ನೇಹಾಸೂಯೆಗಳೆಂಬ ಅಲೆಗಳಿಂದ ಸುತ್ತಲ್ಪಟ್ಟ ಮೂಲೆಯ ಮಂಚದ ಮೇಲೆ ಬಿದ್ದಿದ್ದ ವಿಷಯಲಂಪಟನು ಧರ್ಮದೇವನ ಮುಖವಂ ನೋಡುತ್ತ ತನ್ನ ನಡುಕಟ್ಟಿನ ಕಠಾರಿಗೆ ಕೈಯಿಕ್ಕಿದನು.

ಓಹೋ! ಇಲ್ಲಿ ನಾವಿಬ್ಬರೇ ಇರುವೆವೆಂದಿದ್ದೆ. ಮತ್ತೊಬ್ಬರು ಇರುವರೆಂದು ತಿಳಿದಿರಲಿಲ್ಲ. ಆ ಮೂಲೆಯಲ್ಲಿರುವವರಾರು? ಎಂದು ಕೇಳಲು, ಆತನು ನನ್ನ ಸ್ನೇಹಿತನು, ಸಹೋದರನು. ನಿಮಗೂ ಇಷ್ಟನಾದವನು. ಈ ಲೋಕದಲ್ಲಿ ನನಗೆ ನೀವೊಬ್ಬ ರಪ್ತರು, ನಿಮ್ಮನ್ನು ಬಿಟ್ಟರೆ ಇವನೊಬ್ಬ. ಇವನ ಹೆಸರು ವಿಷಯಲಂಪಟನು ಎಂದು ಲಲಿತಾಂಗಿಯು ಉತ್ತರವನ್ನಿತ್ತಳು.

ಹಾಗೋ! ಎಂದು ಧರ್ಮದೇವನು ಲಲಿತಾಂಗಿಯ ಕೈಯನ್ನು ಹಿಡಿದುಕೊಂಡು ಅವನಿದ್ದೆಡೆಗೆ ಹೋಗಿ ಅಭಿವಂದಿಸಿದನು. ವಿಷಯಲಂಪಟನು ಆ ಆದರವನ್ನಂಗೀ ಕರಿಸದೆ ಕೋಪಾವೇಶದಿಂದ ದುರದುರನೆ ಧರ್ಮದೇವನ ಮುಖವನ್ನು ನೋಡುತ್ತ ಲಿದ್ದನು. ಇದನ್ನು ನೋಡಿ ಲಲಿತಾಂಗಿಯು ಕಳವಳಗೊಂಡಳು. ಈ ಅವಸ್ಥೆಯಂ ಕಂಡು ಧರ್ಮದೇವನು ಲಲಿತಾಂಗಿಯನ್ನು ನೋಡಿ ನಾನು ನಿನ್ನನ್ನು ನೋಡುವುದಕ್ಕೆ ಬರುವಾಗ ಇಲ್ಲಿ ನನಗೆ ಒಬ್ಬ ಹಗೆಯಿರುವನೆಂದು ಅರಿತಿರಲಿಲ್ಲವೆಂದನು.

ನನ್ನ ಮನೆಯಲ್ಲಿಯೂ ನಿಮಗ ಹಗೆಯೊಬ್ಬನುಂಟೆ? ನಿಮ್ಮ ಸಂಗಡಲೇ ಬರುತ್ತೇನೆ ನಡೆಯಿರೆಂದು ಹೇಳಿ ವಿಷಯಲಂಪಟನ ಕೋಪಾಟೋಪವನ್ನು ಕಂಡು ತನ್ನ ಪ್ರಾಣ ಕಾಂತನಿಗೆ ಏನಾದರೂ ಅಪಾಯವು ಉಂಟಾದೀತೆಂಬ ಭೀತಿಯಿಂದ ಧರ್ಮದೇವನನ್ನು ಕುರಿತು, ನಾಥ, ನಿಮಗೇನಾದರೂ ಅಪಾಯವುಂಟಾದರೆ ನಾನು ಸಮುದ್ರದಲ್ಲಿ ಬಿದ್ದು ಪ್ರಾಣವಂ ಕಳೆದುಕೊಳ್ಳುವೆನು ಎಂದಳು. ಆ ಮಾತನ್ನು ಕೇಳಿ ವಿಷಯಲಂಪಟನ ಮುಖವು ಕಳೆಗುಂದಿತು. ಬಳಿಕ ಲಲಿತಾಂಗಿಯು ಇಲ್ಲಿ ನಿಮಗಾರೂ ಹಗೆಗಳಿಲ್ಲ, ಈತನು ಗೆಳೆಯನು, ನನ್ನ ಸೋದರನು, ನೀವು ಆದರದಿಂದ ಅಭಿವಂದಿಸಿದುದನ್ನು ಇವನು ಆನಂದದಿಂದ ಸ್ವೀಕರಿಸುವನು ಎಂದು ವಿಷಯಲಂಪಟನ ಮೇಲೆ ತನ್ನ ನೋಟ ವನ್ನು ಸುಳಿಸಲು ಒಡನೆಯೇ ಧರ್ಮದೇವನ ಮೇಲೆ ಅವನಿಗೆ ಉಂಟಾಗಿದ್ದ ಕೋಪವು ಶಿಲೆಯ ಮೇಲೆ ಬಿದ್ದ ಅಲೆಯು ಛಿನ್ನಭಿನ್ನವಾಗಿ ಹೋಗುವಂತೆ ಛಿನ್ನಭಿನ್ನವಾಗಿ ಹೋಯಿತು. ಬಳಿಕವನು ಮಂಚದಿಂದೆದ್ದು ಧರ್ಮದೇವನಿಗೆ ಪ್ರತಿಯಾಗಿ ವಂದನೆ

ಮಾಡುವುದಕ್ಕಾಗಿ ಬಂದು ಸರ್ಪದಷ್ಟನಾದವನಂತೆ ಕೂಡಲೆ ಆ ಸ್ಥಳವಂ ಬಿಟ್ಟು ಬೀದಿಗೆ ಬಂದು, ಅಯ್ಯೋ! ಅಯ್ಯೋ! ಈತನಿಂದ ನನ್ನನ್ನು ಉದ್ಧರಿಸುವರಾರೂ ಇಲ್ಲವೇ? ಎಂದು ಕೂಗಿಕೊಂಡು ಓಡಿಹೋಗುತ್ತ ಸತ್ರದ ತೋಪಿನಲ್ಲಿದ್ದ ಕದರ್ಥಕನನ್ನೂ ದುರ್ಮತಿಯನ್ನೂ ಕಂಡು ನಿಂತನು. ಅವನು ಹಾಗೆ ನಿಂತುದನ್ನು ಕಂಡು ಕದರ್ಥನು ಏನಯ್ಯಾ, ನಿನಗೇಕೆ ಇಷ್ಟು ಆತುರ? ಗೆಳೆಯರನ್ನು ಕಂಡು ಅವರೊಡನೆ ಮಾತನ್ನಾಡದಿರಬಹುದೋ! ಹೀಗೆ ಹುಚ್ಚನಂತೆ ಓಡಿಹೋಗಬಹುದೇ? ಇಲ್ಲಿ ಬಂದು ಸ್ವಲ್ಪ ಕುಳಿತುಕೋ ಎಂದು ಕೂಗಿದನು

ವಿಷಯಲಂಪಟನು ಪಿತ್ತಹತ್ತಿದವನಂತೆ ಅವರಿಬ್ಬರ ಮುಖವಂ ನೋಡುತ್ತ ನಿಂತುಕೊಂಡನು ಆಗ ದುರ್ಮತಿಯು ಕದರ್ಥಕನನ್ನು ಚುಚ್ಚಿ ಈತನಿಗೆ ಅಮಲು ಏರಿದಂತಿದೆ. ನಮ್ಮ ದೌರ್ಭಾಗ್ಯಕ್ಕೆ ಸರಿಯಾಗಿ ಧರ್ಮದೇವನಿಗೆ ಎಲ್ಲಾ ಕಡೆಯಲ್ಲಿಯೂ ಅನುಕೂಲವಾಗುವ ಹಾಗೆ ಕಾಣಬರುತ್ತದೆ. ಇವನು ಹೀಗೆ ಹುಚ್ಚನಂತೆ ಆಡುವುದಕ್ಕೆ ಕಾರಣವೇನು, ವಿಚಾರಿಸಿ ತಿಳಿದುಕೊಳ್ಳೋಣವೆಂದನು.

ಕದರ್ಥಕನು ವಿಷಯಲಂಪಟನನನ್ನು ನೋಡಿ ಏನಯ್ಯಾ! ಇಲ್ಲಿಗೆ ಬಂದು ಕುಳಿತುಕೊಳ್ಳುವುದಕ್ಕೆ ಇನ್ನೂ ನಿನಗೆ ಮನಸ್ಸು ಬಾರದೋ ಎನ್ನಲು, ಅವನು ತನ್ನ ಮುಖದಿಂದ ಸುರಿಯುತ್ತಲಿದ್ದ ಬೆವರನ್ನೊರಸಿಕೊಂಡು ಮೆಲ್ಲನೆ ಆ ತೋಪಿಗೆ ಬಂದು ಒಂದು ಕುರ್ಚಿಯಲ್ಲಿ ಕುಳಿತನು. ಅವನ ಕೋಪವು ಬೀಸುತಲಿದ್ದ ತಂಗಾಳಿಯಿಂದ ಸ್ವಲ್ಪ ತಗ್ಗಿತು. ಅನಂತರ ಅವನು ಇವರಿಬ್ಬರನ್ನು ನೋಡಿ ನೀವು ನನ್ನನ್ನು ಏಕೆ ಕೂಗಿದಿರಿ ಎಂದು ಕೇಳುತ್ತಾ ಮುಂಗಡೆಯಿದ್ದ ಮೇಜಿನಮೇಲೆ ಮೊಳಕೈಗಳನ್ನೂರಿ ಎರಡು ಕೈಗಳನ್ನೂ ತಲೆಯಮೇಲೆ ಇಟ್ಟುಕೊಂಡನು.

ನೀನು ಹುಚ್ಚನ ಹಾಗೆ ಕಣ್ಣುಕಾಣದ ಓಡಿಹೋಗಿ ಸಮುದ್ರದಲ್ಲಿ ಬಿದ್ದು ಪ್ರಾಣ ಬಿಡುವುದಕ್ಕಿಂತ ಇಲ್ಲಿಗೆ ಬಂದು ಉಲ್ಲಾಸಕರವಾದ ಈ ಮಧುವನ್ನು ಪಾನಮಾಡಿ ನೆಮ್ಮದಿಯಾಗಿರಲೆಂದು ಕರೆದೆವು ಎಂದು ದುರ್ಮತಿಯು ಹೇಳಿದನು ಆಗ ಕದರ್ಥಕನು ನಿನ್ನ ಸ್ಥಿತಿಯನ್ನು ನೋಡಿದರೆ ಆವಳೋ ಯುವತಿಯಿಂದ ಧಿಕ್ಕೃತನಾದವನಂತೆ ತೋರುತ್ತದೆ ಎಂದನು ಅದಕ್ಕೆ ದುರ್ಮತಿಯು, ಅವನನ್ನು ಏಕೆ ಹಾಸ್ಯಮಾಡುತ್ತೀಯೆ! ಪ್ರಾಯಃ ಅವನಿಗೆ ಆ ತರುಣಿಯಲ್ಲಿ ಅಷ್ಟಾಗಿ ಪ್ರೀತಿಯಿರಲಾರದು ಹಾಗಿದ್ದಿದ್ದರೆ

ಅವನು ನಿಮಿಷಮಾತ್ರದಲ್ಲಿ ಹಗೆಯನ್ನು ಕೊಂದು ಅವಳನ್ನು ತನ್ನ ಕೈವಶಮಾಡಿ ಕೊಳ್ಳುತ್ತಿದ್ದನು ಎನಲು, ಕದರ್ಥಕನು ಏನಯ್ಯಾ ವಿಷಯಲಂಪಟನೆ, ನಾವು ನಿನ್ನ ಯೋಗಕ್ಷೇಮವನ್ನು ಕುರಿತು ಮಾತನಾಡುತ್ತಲಿರುವಾಗ ನೀನು ತಲೆಯೆತ್ತಿಕೂಡ ನೋಡದಿರುವೆಯಲ್ಲ! ಸ್ವಸ್ಥವಾಗಿರುವೆಯೋ ಇಲ್ಲವೋ? ಎಂದು ಕೇಳಿದನು.

ನನಗೇನೂ ದೇಹದಲ್ಲಿ ಆಲಸ್ಯವಿಲ್ಲ ಮನಸ್ಸಿನಲ್ಲಿ ದಾರುಣವಾದ ತಾಪವೊಂದುಂಟಾಗಿದೆ ಎಂದು ವಿಷಯಲಂಪಟನು ಹೇಳಿದನು ಕೂಡಲೇ ಕದರ್ಥಕನು ಎಲಾ ದುರ್ಮತಿ, ಇವನ ಸಮಾಚಾರವು ಈಗ ನನಗೆ ಗೊತ್ತಾಯಿತು. ಇವನು ಲಲಿತಾಂಗಿಯನ್ನು ಪ್ರೀತಿಸುತ್ತಲಿದ್ದನು. ಜಯಲಕ್ಷ್ಮಿಯೆಂಬ ನೌಕನ್ನು ಇಲ್ಲಿಗೆ ಬಂದುದರಿಂದ ಅವಳು ಇವನನ್ನು ತಿರಸ್ಕರಿಸಿಬಿಟ್ಟಳು ಎಂದನು.

ತನ್ನ ಕೋಪವನ್ನು ಹೇಗೆ ತೀರಿಸಿಕೊಳ್ಳೋಣವೆಂದಿದ್ದ ವಿಷಯಲಂಪಟನು ಕದರ್ಥಕನನ್ನು ದುರದುರನೆ ನೋಡಿ ಲಲಿತಾಂಗಿಯು ಸ್ವತಂತ್ರಳು, ಇಷ್ಟಬಂದವರನ್ನು ಮದುವೆಯಾಗುತ್ತಾಳೆ, ಅದರ ಚಿಂತೆ ನಿನಗೇಕೆ ಎಂದನು ದುರ್ಮತಿಯು ಎಲಾ ಕದರ್ಥಕ! ನಾನು ಆಗಲೇ ಹೇಳಲಿಲ್ಲವೇ? ಈತನಿಗೆ ಅವಳಲ್ಲಿ ಪ್ರೀತಿಯಿಲ್ಲ; ಅವಳನ್ನು ಮದುವೆಯಾಗುವ ಅಭಿಪ್ರಾಯವೂ ಇಲ್ಲ. ಈ ಜನರು ತಮ್ಮ ಆಸೆಗಳನ್ನು ಭಂಗಪಡಿಸಲು ಆರಾದರೂ ಉದ್ಯುಕ್ತರಾದರೆ ಅವರನ್ನು ಜೀವಸಹಿತ ಬಿಡುವರಲ್ಲ, ಇವನು ಅಂಥವನಲ್ಲವೆಂದು ತೋರುತ್ತದೆಯೆಂದನು. ಅದನ್ನು ಕೇಳಿ ಕದರ್ಥಕನು ಅದು ಸರಿ ನಮಗೇಕೆ ಈ ಚಿಂತೆ ಲಲಿತಾಂಗಿಯು ಧರ್ಮದೇವನನ್ನು ಮದುವೆಯಾಗುತ್ತಾಳೆಂದು ಕೇಳಿದ್ದೆನು. ವಿಷಯಲಂಪಟ, ಮದುವೆಯೆಂದಾಗುವುದು ಬಲ್ಲೆಯೋ ಎಂದು ಕೇಳಿದನು ಅದಕ್ಕೆ ವಿಷಯಲಂಪಟನು ಇವರ ಮೇಲೆ ತನ್ನ ಕೋಪವನ್ನು ತೋರಿಸಿ ಪ್ರಯೋಜನವಿಲ್ಲವೆಂದು ತಿಳಿದು ಇನ್ನೂ ಗೊತ್ತಾಗಿಲ್ಲವೆಂದನು.

ಇಷ್ಟು ಹೊತ್ತಿಗೆ ಕದರ್ಥಕನು ಮಧುಪಾನದ ದೆಸೆಯಿಂದ ಸ್ವಲ್ಪ ಮತ್ತನಾದನು. ಆಗ ಅವನ ಅಸೂಯಾಗುಣವು ತಗ್ಗಿ ಸಾತ್ವಿಕಗುಣವು ತಲೆಯೆತ್ತಿತು ದುರ್ಮತಿಯನ್ನು ನೋಡಿ, ಧರ್ಮದೇವನು ಜಯಲಕ್ಷ್ಮಿಯ ಅಧಿಪತಿಯಾದರೆ ಕೆಲವರಿಗೆ ಮನಃಕ್ಲೇಶವಾಗುವುದಿಲ್ಲವೇ ಎಂದನು.

ಆ ಮಾತನ್ನು ಕೇಳಿ ದುರ್ಮತಿಯು ಇವನಿಗೆ ಬುದ್ಧಿವಿಕಾರವಾಗಿದೆ, ಇದು ಅಪಾಯುಕರವೆಂದು ಯೋಚಿಸಿ ಅವನಿಗೆ ಮತ್ತಷ್ಟು ಮದ್ಯಪಾನವನ್ನು ಮಾಡಿಸಿದನು ಪಾನವಂ ಮಾಡುತ್ತ ಮಾಡುತ್ತ ಕದರ್ಥಕನಿಗೆ ಸತ್ವಗುಣವು ಹಚ್ಚಾಗಿ ತಲೆಯೆತ್ತುತ್ತ ಧರ್ಮದೇವನು ನೌಕಾಧಿಪತಿಯೂ ಆಗುವನು, ಲಲಿತಾಂಗಿಯನ್ನು ಮದುವೆಯೂ ಆಗುವನು ಎಂದು ಗಟ್ಟಿಯಾಗಿ ಕೂಗಿಕೊಂಡನು

ಅದನ್ನು ಕೇಳುತ್ತ ದುರ್ಮತಿಯು ಕದರ್ಥಕನಿಗ ಮತ್ತೊಂದು ಸಾರಿ ಪಾನವನ್ನು ಮಾಡಿಸಿದನು

ಈ ಸಮಯಕ್ಕೆ ಸರಿಯಾಗಿ ಧರ್ಮದೇವನೂ ಲಲಿತಾಂಗಿಯೂ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಆ ಹಾದಿಯಲ್ಲಿ ಬರುತಲಿದ್ದರು ಅವರು ಸಮೀಪಕ್ಕೆ ಬಂದ ಕೂಡಲೆ ಕದರ್ಥಕನು ಎಲೈ ವಿಷಯಲಂಪಟ! ಅಗೋ ನೋಡು, ನನ್ನ ಕಣ್ಣುಗಳು ಮಂಕಾಗಿವೆ, ಆದರೂ ನಾಯಕನಾಯಿಕೆಯರಿಬ್ಬರೂ ಕೈ ಹಿಡಿದುಕೊಂಡು ಇತ್ತ ಕಡೆ ಬರುತ್ತಿದ್ದಾರೆಯೆಂದನು ಅದನ್ನು ಕೇಳುತ್ತಲೆ ವಿಷಯಲಂಪಟನ ಎದೆಯಲ್ಲಿ ಶೂಲವನ್ನು ನಟ್ಟಂತಾಯಿತು. ಆಗ ದುರ್ಮತಿಯು ವಿಷಯಲಂಪಟನನ್ನು ನೋಡಿ ಇವರಾರು ಬಲ್ಲೆಯೋ? ಎಂದನು ಅದಕ್ಕೆ ಅವನು ಸಂಕಟದೊಂದಿಗೆ ಬಲ್ಲೆನೆಂದು ಬದಲು ಹೇಳಿದನು.

ಈ ವೇಳೆಗ ಲಲಿತಾಂಗಿಯೂ ಧರ್ಮದೇವನೂ ಇವರಿದ್ದಡೆಗೆ ಬಂದರು ಕದರ್ಥಕನು ಧರ್ಮದೇವ, ನಿನಗ ಶುಭವಾಗಲಿ. ನೀನು ಕೈ ಹಿಡಿದಿರುವ ಯುವತಿಯು ಬಹು ಸುಂದರಿ ನಿಮ್ಮಿಬ್ಬರಿಗೂ ಮದುವೆ ಯಾವಾಗ? ವಿಷಯಲಂಪಟನನ್ನು ಕೇಳಿದರೆ ಅವನು ಹೇಳುವುದಿಲ್ಲ ಇತ್ತ ಬನ್ನಿರಿ ಎಂದು ಅವರ ಇದಿರಿಗೆ ಹೊರಟನು ಆಗ ದುರ್ಮತಿಯು ಅವನನ್ನು ಎಳೆದು ಕುರ್ಚಿಯಲ್ಲಿ ಕುಳ್ಳಿರಿಸಿ ಎಲಾ, ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ಅವರಿಬ್ಬರೂ ಆತ್ಮಾನಂದದಲ್ಲಿರುವರು, ಅವರನ್ನು ನೀನು ಏತಕ್ಕೆ ತೊಂದರೆ ಮಾಡುತ್ತೀಯೆ, ವಿಷಯಲಂಪಟನು ಗಂಭೀರವಾಗಿಲ್ಲವೇ? ನೀನೂ ಏಕೆ ಇರಬಾರದು ಎಂದನು

ವಿಷಯಲಂಪಟನು ಕೋಪದಿಂದ ಪೂರ್ಣನಾಗಿ ದುರ್ಮತಿಯ ಮಾತುಗಳೆಂಬ ಶಲಾಕೆಗಳಿಂದ ಚುಚ್ಚಲ್ಪಟ್ಟು ತನ್ನ ಹಗೆಯಾದ ಧರ್ಮದೇವನನ್ನು ಕೊಲ್ಲಬೇಕೆಂದು

ಎದ್ದನು ಅಷ್ಟರಲ್ಲಿಯೇ ಲಲಿತಾಂಗಿಯು ಮಾತನ್ನು ಜ್ಞಾಪಿಸಿಕೊಂಡು ಮರಳಿ ಕುರ್ಚಿಯಲ್ಲಿ ಕುಳಿತನು.

ಇದನ್ನು ನೋಡುತ್ತಲಿದ್ದ ದುರ್ಮತಿಯು ಕದರ್ಥಕನು ! ಕುಡುಕನು, ವಿಷಯ ಲಂಪಟನು ಹೇಡಿ. ಈ ಇಬ್ಬರು ಮುಟ್ಠಾಳರಿಂದಲೂ ನನ್ನ ಕೆಲಸವಾಗದು ಧರ್ಮದೇವನ ಅದೃಷ್ಟವು ಬಲವಾಗಿರುವಂತೆ ತೋರುತ್ತಲಿದ. ಇದಕ್ಕೆ ಬೇರೆ ಉಪಾಯವನ್ನು ಮಾಡಬೇಕೆಂದು ತನ್ನೊಳು ತಾನೇ ಹೇಳಿಕೊಂಡನು

ಅಷ್ಟು ಹೊತ್ತಿಗೆ ಲಲಿತಾಂಗಿಯೂ ಧರ್ಮದೇವನೂ ಸತ್ರದ ಮುಂಗಡೆಗೆ ಬಂದರು ಕದರ್ಥಕನು ಸ್ವಲ್ಪ ಎಚ್ಚತ್ತು ಧರ್ಮದೇವ ! ನಿನಗೆ ಶುಭವಾಗಲಿ, ಮದುವೆಯಾವಾಗ ? ನನ್ನನ್ನು ಮರೆಯಬೇಡವಪ್ಪಾ ಎಂದನು.

ನಾಳೆ ಮದುವೆಯು ನಡೆಯುವುದು ಈದಿನ। ಅದಕ್ಕೆ ಬೇಕಾದ ಪದಾರ್ಥಗಳನ್ನು ಸೇರಿಸಿಕೊಳ್ಳುತ್ತೇನೆ ನೀವೆಲ್ಲರೂ ಮದುವೆಗೆ ಅಗತ್ಯವಾಗಿ ಬರಬೇಕು ಎಂದನು ಇದನ್ನು ಕೇಳಿ ಕದರ್ಥಕನು ವಿಷಯಲಂಪಟ, ಧರ್ಮದೇವನು ನಿನ್ನನ್ನು ಮದುವೆಗೆ ಕರೆಯುತ್ತಾನೆ ಎಂದು ಹೇಳಿದನು

ನನ್ನ ಹೆಂಡತಿಯ ಸಹೋದರನು ನನಗೂ ಸಹೋದರನೇ ಅವನನ್ನು ಮುಖ್ಯವಾಗಿ ಕರೆಯಬೇಕಲ್ಲವೆ ? ಎಂದು ಧರ್ಮದೇವನೆನ್ನಲು ವಿಷಯಲಂಪಟನು ಬದಲು ಹೇಳಬೇಕೆಂದು ಬಾಯಿ ತೆರೆದನು ಮಾತೇ ಹೊರಡಲಿಲ್ಲ

ದುರ್ಮತಿಯು ಧರ್ಮದೇವನನ್ನು ನೋಡಿ ಇದೇನು ಇಷ್ಟು ಆತುರ ? ಈ ದಿನ ಏರ್ಪಾಡು, ನಾಳೆ ಮದುವೆ, ಜಯಲಕ್ಷ್ಮಿಯು ಪ್ರಯಾಣ ಹೊರಡುವುದಕ್ಕೆ ಇನ್ನೂ ಮೂರು ತಿಂಗಳು ಬೇಕಲ್ಲವೆ ಎನ್ನಲು, 'ಶುಭಸ್ಯ ಶೀಘ್ರಂ' ಎಂಬಂತೆ ಶುಭಕಾರ್ಯಗಳು ಬೇಗ ನಡೆದರೆ ಅನುಕೂಲ, ಇದೂ ಅಲ್ಲದೆ ಮದುವೆಯಾದ ಮೇಲೆ ನಾನು ಅಮರಪುರಕ್ಕೆ ಬೇಗ ಹೋಗಬೇಕಾಗಿದ

ಅಮರಪುರಕ್ಕೇ ?—ಹೂಂ.

ಏತಕ್ಕೆ ?—ನೌಕಾಧಿಪನು ಹೇಳಿದ್ದ ಕೆಲಸಕ್ಕೆ

ಗೊತ್ತಾಯಿತು ಎಂದು ಗಟ್ಟಿಯಾಗಿ ಹೇಳಿ, ಆ ಪತ್ರವನ್ನು ಕೊಡುವುದಕ್ಕೆ ಹೋಗುತ್ತಾನೆ ಒಳ್ಳೆಯ ಸುಳಿವು ಸಿಕ್ಕಿತು. ಇನ್ನು ಇವನು ನೌಕಾಧಿಪತಿಯಾಗುವ

ದನ್ನು ನಾನು ನೋಡುತ್ತೇನೆ ಎಂದುಕೊಂಡು ದುರ್ಮತಿಯೂ ಆಗಬಹುದು, ಸಂತೋಷ ಎಂದನು.

ಲಲಿತಾಂಗಿಯೂ ಧರ್ಮದೇವನೂ ಅಲ್ಲಿಂದ ಮುಂದೆ ಪಟ್ಟಣದ ಕಡೆಗೆ ಹೊರಟು ಹೋದರು

---

## ನಾಲ್ಕನೆಯ ಅಧ್ಯಾಯ

### ಒಳಸಂಚು

ನಾಯಕನಾಯಿಕೆಯರು ಅತ್ಯಾನಂದದಿಂದ ಪಟ್ಟಣದ ದಾರಿಯಂ ಹಿಡಿದು ಹೋಗುತ್ತಿರಲು, ಇತ್ತ ದುರ್ಮತಿಯು ಕದರ್ಥಕನು ಜ್ಞಾನಶೂನ್ಯನಾಗಿ ಬಿದ್ದಿರುವು ದನ್ನು ಕಂಡು, ಈ ಮದುವೆಯ ವಿಚಾರದಲ್ಲಿ ವಿಷಯಲಂಪಟನ ಅಭಿಪ್ರಾಯವು ಏನಿರ ಬಹುದು ಅದನ್ನು ತಿಳಿದುಕೊಳ್ಳಬೇಕೆಂದು ಯೋಚಿಸಿ, ಎಲೈ ವಿಷಯಲಂಪಟನೆ ! ಈ ಮದುವೆಯು ಅನೇಕರ ದುಃಖಕ್ಕೆ ಕಾರಣವೆಂದು ತೋರುತ್ತದೆಯೆಂದನು.

ಅದು ನನ್ನ ಆಶಾಭಂಗವಂ ಮಾಡಿ ನನಗೆ ಸಂಪೂರ್ಣವಾದ ದುಃಖವನ್ನುಂಟು ಮಾಡುತ್ತಲಿದೆ.

ನೀನು ಲಲಿತಾಂಗಿಯನ್ನು ಪ್ರೀತಿಸುವೆಯೋ ?—ನನ್ನ ಪ್ರಾಣವೇ ಅವಳು.

ಹಾಗಾದರೆ ನೀನೇಕೆ ಹೀಗೆ ತಲೆಯ ಮೇಲೆ ಕೈಯಿಟ್ಟುಕೊಂಡು ಸುಮ್ಮ ನಿರುವೆ ?—ಮತ್ತೇನ ಮಾಡಲಿ ?

ನಾನೇನ ಬಲ್ಲೆ. ನಾನು ಅವಳನ್ನು ಪ್ರೀತಿಸುತಲಿಲ್ಲವಲ್ಲಾ ? ಹುಡುಕಿದರೆ ಮಾರ್ಗವು ದೊರಕುವುದಿಲ್ಲವೇ ?

ನನಗೊಂದು ಮಾರ್ಗ ಆವಾಗಲೆ ಸಿಕ್ಕಿದೆ — ಅದು ಅವುದು ?

ಅವನ ಪ್ರಾಣವನ್ನು ತೆಗೆಯುವುದು. ಆದರೆ ಲಲಿತಾಂಗಿಯು ತನ್ನ ಪ್ರಿಯನಿ ಗೇನಾದರೂ ಅಪಾಯ ಸಂಭವಿಸಿದಲ್ಲಿ ತನ್ನ ಪ್ರಾಣವನ್ನು ಬಿಡುವುದಾಗಿ ಹೇಳಿದ್ದಾಳೆ.

ಹೆಂಗುಸರ ಗುಣವನ್ನು ನೀನರಿಯೆ. ಅವರು ಬಾಯಲ್ಲಿ ಹಾಗೆ ಹೇಳುವರೇ ಹೊರತು ನಿಜವಾಗಿಯೂ ಎಂದಿಗೂ ಪ್ರಾಣವಂ ಬಿಡರು.

ಸಾಮಾನ್ಯವಾದ ಹೆಂಗುಸರು ಹಾಗಿರಬಹುದು; ಆದರೆ ಲಲಿತಾಂಗಿಯ ರೀತಿ ಬೇರೆ; ಅವಳು ಆಡಿದಂತೆ ನಡೆಯುವಳು. ಅವಳು ಪ್ರಾಣವನ್ನು ಬಿಡುವುದಾದರೆ ಅವಳಿಗಿಂತ ಮುಂಚೆ ನಾನು ಪ್ರಾಣವನ್ನು ಬಿಡುವೆನು

ಇವನು ಜಾತಮೂರ್ಖ ಅವಳಿದ್ದರೇನು ಸತ್ತರೇನು? ಧರ್ಮದೇವನಿಗೆ ಸೌಕಾಧಿಪತ್ಯವಾಗದೆ ಇದ್ದರೆ ಸಾಕು ಎಂದು ದುರ್ಮತಿಯು ಮನದೊಳಾಲೋಚಿಸಿಕೊಂಡನು.

ಅನುರಾಗವೆಂದರೆ ಹೀಗಿರಬೇಕು ಎಂದು ಕದರ್ಥಕನು ತೊದಲುತಿದ್ದನು.

ದುರ್ಮತಿಯು ವಿಷಯಲಂಪಟನನ್ನು ನೋಡಿ ನೀನು ಯೋಗ್ಯನಂತೆ ತೋರುತ್ತದೆ ಆದುದರಿಂದ ನಿನಗೆ ನಾನು ಸಹಾಯವಂ ಮಾಡಲಿಚ್ಛೆಯುಳ್ಳವನಾಗಿದೇನೆ. ಆದರೆ

ಆದರೆ—ಏನು ಹೇಳು ಎಂದು ಕದರ್ಥಕನೆಂದನು.

ಎಲೈ ಕದರ್ಥಕ! ಈಗ ನಿನಗೆ ಮುಕ್ಕಾಲುಪಾಲು ಜ್ಞಾನ ತಪ್ಪಿ ಹೋಗಿದೆ. ಉಳಿದಿರುವ ಮದ್ಯವನ್ನು ಕುಡಿದು ಮುಗಿಸಿ ಬಿಡು, ಆ ಮೇಲೆ ಸರಿಹೋಗುತ್ತದೆ. ನಾವು ಚರ್ಚಿಸುವ ವಿಷಯದಲ್ಲಿ ಮಧ್ಯೆ ಮಧ್ಯೆ ನೀನು ಬಾಯಿ ಹಾಕುತ್ತಿರಬೇಡ ಎಂದು ದುರ್ಮತಿಯೆಂದನು.

ನಾನೇನೋ ಜ್ಞಾನವಿಲ್ಲದವನು, ಈಗ ಇರುವ ಪಾತ್ರೆ ಸಣ್ಣದು, ಇಂಥಾದು ನಾಲ್ಕಾದರೂ ಕುಡಿದು ಬಿಡುವ ಶಕ್ತಿಯು ನನಗುಂಟು. ಕೊಡಿಸಿ ನೋಡು

ದುರ್ಮತಿಯು ಮತ್ತೊಂದು ಪಾತ್ರೆ ಮದ್ಯವನ್ನು ತರಿಸಿಕೊಡಲು ಕದರ್ಥಕನು ಅದರಲ್ಲಿ ಸ್ವಲ್ಪ ಪಾನಮಾಡಿ ಮತ್ತನಾದನು ದುರ್ಮತಿಯು ಪ್ರಾರಂಭಮಾಡಿದ ಪ್ರಸ್ತಾಪವನ್ನು ಕೇಳಿ ತಿಳಿಯಲು ಅತ್ಯಾಸಕ್ತನಾಗಿ ವಿಷಯಲಂಪಟನು ಅವನನ್ನು ನೋಡಿ ನೀನು ಆವುದನ್ನೋ ಹೇಳುತ್ತಿದ್ದೆಯಲ್ಲಾ! ಎಂದು ಕೇಳಿದನು

ನಾನು ಆವುದನ್ನು ಹೇಳುತ್ತಲಿದ್ದೆ? ಈ ಕುಡುಕನ ಅವಾಂತರದಲ್ಲಿ ಆ ಮಾತು ಅಲ್ಲಿಗೇ ನಿಂತು ಹೋಯಿತು. ಇವನಿಗೆ ಇನ್ನೂ ಚೆನ್ನಾಗಿ ಅಮಲು ಏರಿಲ್ಲ.

ನನಗೆ ಅಮಲೇರಿತೋ? ಆಹುದಹುದು, ಅಮಲೇರಿತು ಮದ್ಯಪಾಯಿಗೆ ಅಮಲೇರಿ ಮನಸ್ಸಿನಲ್ಲಿರುವುದು ಬಾಯಿನಲ್ಲಿ ಬರುವುದು ಆದುದರಿಂದಲೇ ದುರಾಲೋಚನಾಪರರು ಮದ್ಯವೆಂದರೆ ಹೆದರುವರು ನನಗೆ ಅಂಥಾ ಭಯವಿಲ್ಲ. ಮತ್ತಷ್ಟು

ಕುಡಿಯುತ್ತೇನೆ ನೋಡು ಎಂದು ಕದರ್ಥಕನು ಗಟ್ಟಿಯಾಗಿ ಕೂಗುತ್ತ ಪಾತ್ರೆಯನ್ನು ಬಾಯೊಳಿಟ್ಟು ಅರ್ಧಭಾಗವಂ ಕುಡಿದು ಪುನಃ ಮತ್ತನಾಗಿ ಬಿದ್ದನು

ಬಳಿಕ ವಿಷಯಲಂಪಟನು ದುರ್ಮತಿಯನ್ನು ನೋಡಿ ನೀನು ನನಗೆ ಸಹಾಯವಂ ಮಾಡುವುದಾಗಿ ಹೇಳುತಲಿದ್ದ ಅದನ್ನು ಮಾಡುವೆಯೋ ಎಂದು ಕೇಳಿದನು

ಅವಶ್ಯಕವಾಗಿ ಮಾಡುವೆನು ಧರ್ಮದೇವನನ್ನು ಕೊಲ್ಲದೆಯೇ ಲಲಿತಾಂಗಿಗೂ ಅವನಿಗೂ ಆಗುವ ಮದುವೆಯನ್ನು ತಪ್ಪಿಸಬಹುದು

ಅಷ್ಟಾದರೆ ಸಾಕು ಆದರೆ ಅವರಿಬ್ಬರೂ ಜೀವಿತರಾಗಿರುವವರೆಗೂ ಅವರ ಮದುವೆಯು ತಪ್ಪುವುದಿಲ್ಲ

ಈ ಮಾತನ್ನು ಕದರ್ಥಕನು ಕೇಳಿ ವಿಷಯಲಂಪಟನೆಲ್ಲೋ ಹುಚ್ಚಪ್ಪ, ದುರ್ಮತಿಯು ಬಹು ಬುದ್ಧಿಮಂತ, ಅಗಾಧವಾದ ಆಲೋಚನೆಯಂ ಮಾಡಬಲ್ಲನು ಅನ್ಯಾಯವಾಗಿ ಧರ್ಮದೇವನನ್ನು ಏಕೆ ಕೊಲ್ಲುವಿರಿ ನಾನು ಅದಕ್ಕೆ ಸಮ್ಮತಿಸೆನು ಅವನು ಸಂಪನ್ನನು. ಅವನನ್ನು ನಾನು ಪ್ರೀತಿಸುತ್ತೇನೆ ದುರ್ಮತೀ! ಇವನಿಗೆ ಸ್ವಲ್ಪ ಬುದ್ಧಿಹೇಳು ಎಂದು ತಿರಿಗಿ ತೂದಲಿದನು

ಅದನ್ನು ಕೇಳಿ ವಿಷಯಲಂಪಟನು ಅಲ್ಲಿಂದ ಹೊರಡಲು ಪ್ರಯತ್ನನಾದನು ಆಗ ದುರ್ಮತಿಯು ಅವನನ್ನು ತಡೆದು ಕದರ್ಥಕನು ಪೂರ್ತಿಯಾಗಿ ಕುಡಿದಿದ್ದರೂ ಅವನಿಗ ಇನ್ನೂ ಸ್ವಲ್ಪ ಜ್ಞಾನವಿದೆ ಅವನು ಹೇಳುವುದು ನ್ಯಾಯ ಧರ್ಮದೇವನನ್ನು ಕೊಲ್ಲುವ ಅವಶ್ಯಕವಿಲ್ಲ ಕಾರಾಗೃಹವೂ ಸ್ಮಶಾನದಂತೆ ಅಲ್ಲಿಗೆ ಹೋದವರನ್ನು ಹಿಂತಿರುಗಿಸದು, ಆದುದರಿಂದ ಅದೂ ನಮ್ಮ ಕೆಲಸಕ್ಕೆ ಅನುಕೂಲವಾಗುವುದು ಎಂದನು

ಕಾರಾಗೃಹದಿಂದ ಹೊರಗೆ ಬಂದವರನೇಕರನ್ನು ಕಂಡಿರುವೆವು, ಸ್ಮಶಾನದಿಂದ ಹೊರಗೆ ಬಂದವರಾರನ್ನೂ ಕಾಣೆವು ಎಂದು ವಿಷಯಲಂಪಟನು ಹೇಳಲು, ದುರ್ಮತಿಯು ಲಲಿತಾಂಗಿಯ ಮಾತನ್ನು ಮರೆತೆಯೋ ಎಂದನು ಅದನ್ನು ಕೇಳಿ ವಿಷಯಲಂಪಟನು ಕಾರಾಗೃಹವೇ ಸರಿ ಎಂದು ಒಪ್ಪಿಕೊಂಡನು

ಧರ್ಮದೇವನು ಕಳವು, ಕೊಲೆ ಮುಂತಾದ ಅವ ಕೆಟ್ಟಕೆಲಸಗಳನ್ನೂ ಮಾಡಿದವನಲ್ಲ, ಅವನನ್ನು ಏಕೆ ಸೆರೆಯಲ್ಲಿಡಿಸಬೇಕು? ನೀವು ಅವನನ್ನು ಅನ್ಯಾಯವಾಗಿ

ಇಡಿಸಿದರೆ, ಅವನು ಸೆರೆಯಿಂ ಜಡಿಸಿಕೊಂಡು ಬಂದು ನಿಮಗೆ ಪ್ರತಿಕ್ರಿಯೆಯನ್ನು ಮಾಡ ದಿರನು ಎಂದು ಕದರ್ಧಕನು ತನಗಿದ್ದ ಅಲ್ಪಸ್ವಲ್ಪ ಜ್ಞಾನದಿಂದ ಕೂಗಿಕೊಂಡನು. ಆಗ ದುರ್ಮತಿಯು ಎಲೋ, ನೀನು ಬಾಯಿ ಮುಚ್ಚು ಎಂದು ಗದ್ದರಿಸಿಕೊಂಡನು.

ನಾನೇಕೆ ಬಾಯಿ ಮುಚ್ಚಲಿ? ಧರ್ಮದೇವನು ಕೆಟ್ಟಕೆಲಸವಾವುದನ್ನೂ ಮಾಡಿಲ್ಲ ಅವನನ್ನು ಏತಕ್ಕೆ ಸುಮ್ಮನೆ ಸೆರೆಯಲ್ಲಿಡಬೇಕು “ಧರ್ಮದೇವ! ನಿನಗೆ ಶುಭವಾಗಲು ಮತ್ತೊಂದು ಸಾರಿ ಮದ್ಯವನ್ನು ಕುಡಿದು ಆನಂದಪಡುವೆನು” ಎಂದು ಹೇಳುತ್ತ ತಿರಿಗಿ ಪಾತ್ರೆಯನ್ನು ತೆಗೆದು ಬಾಯೊಳಿಟ್ಟು ಕುಡಿದನು.

ಕದರ್ಧಕನ ದೃಷ್ಟಿಯು ಮಂಕಾದುದನ್ನು ಕಂಡು ದುರ್ಮತಿಯು ಇವನಿಗೆ ಪೂರಾ ಅಮಲು ಏರಿತೆಂದು ತಿಳಿದು, ವಿಷಯಲಂಪಟ, ಧರ್ಮದೇವನನ್ನು ಕೊಲ್ಲುವ ಅವಶ್ಯಕವಿಲ್ಲ ನಿನಗೆ ಗೊತ್ತಾಯಿತೋ? ಎಂದನು.

ಕಾರ್ಯಸಾಧನೆಗೆ ಬೇರೆ ಯಾವುದಾದರೂ ಉಪಾಯವಿದ್ದರೆ ಅವನನ್ನು ಕೊಲ್ಲ ಬೇಕಾದುದಿಲ್ಲ.

ಹುಡುಕಿದರೆ ಉಪಾಯವು ಸಿಕ್ಕದಿರದು ಈ ಕೆಲಸಕ್ಕೂ ನನಗೂ ಏನು ಸಂಬಂಧ? ನಾನು ಏಕೆ ಇದಕ್ಕೆ ಕೈಹಾಕಲಿ?

ಈ ಕಾರ್ಯದಲ್ಲಿ ನಿನಗೇನು ಸಂಬಂಧವೋ ನಾನರಿಯೆ; ಆದರೆ ಧರ್ಮದೇವ ನನ್ನು ನೀನು ಒಲುಮಟ್ಟಿಗೆ ದ್ವೇಷಿಸುವಂತೆ ತೋರುತ್ತಿದ.

ಹೇಗೆ?

ಹಗೆಗಳು ಹಗೆಗಳ ಮನಸ್ಸನ್ನರಿಯುವುದು ಸುಲಭ. ನಾನು ಧರ್ಮದೇವನನ್ನು ದ್ವೇಷಿಸುತ್ತೇನೆ ಅವನಲ್ಲಿ ನಿನಗೆ ದ್ವೇಷವಿರುವುದೆಂಬುದು ನನಗೆ ಚೆನ್ನಾಗಿ ಕಂಡು ಬರುವುದು

ಅವನ ವಿಷಯದಲ್ಲಿ ನಿನ್ನಾಣೆ ನನಗೆ ದ್ವೇಷವಿಲ್ಲ ನಿನ್ನ ಸಂಕಟವನ್ನು ಕಂಡು ನಿನಗೆ ಸಹಾಯಮಾಡಲು ಪ್ರಯತ್ನಮಾಡಿದೆ. ನೀನು ಅನ್ಯಥಾ ಭಾವಿಸುವುದಾದರೆ, ಇಗೋ ನಾನು ಹೊರಟೆ ಎಂದೆದ್ದನು

ನಿಲ್ಲು ನಿಲ್ಲು ನಿನ್ನ ಹಗೆಗೆ ಕಾರಣವಾವುದಾದರೂ ಆಗಲಿ; ನಾನೇನೋ ಅವ ನನ್ನು ಪೂರ್ಣವಾಗಿ ದ್ವೇಷಿಸುತ್ತೇನೆ ನೀನು ಮಾರ್ಗವನ್ನು ತೋರಿಸಿದರೆ ನಾನು ಕೆಲಸವನ್ನು ಮಾಡಿ ಪೂರೈಸುವೆನು.

ಅಮಲೇರಿ ಮೇಜಿನ ಮೇಲೆ ತಲೆಹಾಕಿದ್ದ ಕದರ್ಥಕನು ಸ್ವಲ್ಪ ತಲೆಯನ್ನೆತ್ತಿ ಧರ್ಮದೇವನ ಮರಣವನ್ನು ಬಯಸುವವರಾರು ? ಅವನು ನನಗೆ ಆಪ್ತನು ಎಂದನು

ಅವನನ್ನು ಕೊಲ್ಲಬೇಕೆಂದವರಾರು ? ಇದು ಹಾಸ್ಯದ ಮಾತು. ಅವನ ಸ್ವಾಸ್ಥ್ಯಕ್ಕೆ ನಾವೆಲ್ಲರೂ ಪಾನಮಾಡಿ ಸಂತೋಷವಾಗಿರೋಣ ಎಂದು ದುರ್ಮತಿಯು ಕದರ್ಥಕನಿಗೆ ಮತ್ತಷ್ಟು ಮದ್ಯವನ್ನು ತರಿಸಿ ಕುಡಿಸಿದನು.

ನೀನು ಇನ್ನೂ ಆವ ಉಪಾಯವನ್ನೂ ಹೇಳಲಿಲ್ಲವಲ್ಲಾ ಎಂದು ವಿಷಯಲಂಪಟನು ದುರ್ಮತಿಯನ್ನು ಕೇಳಿದನು.

ನಿನಗಾವುದೂ ತೋಚುವುದಿಲ್ಲವೋ ?

ಇಲ್ಲ. ನೀನು ಉಪಾಯವನ್ನು ಹೇಳುವುದಾಗಿ ಒಪ್ಪಿಕೊಂಡೆಯಲ್ಲವೆ ?

ಅಹುದು. ಅನ್ಯದೇಶದವರಿಗಿಂತ ಈ ದೇಶೀಯರೇ ಬುದ್ಧಿಮಂತರು ಅವರು ಯೋಚನೆ ಮಾಡುತ್ತಿರುವಾಗಲೇ, ಇವರು ಕೆಲಸವನ್ನು ಮಾಡಿಬಿಡುವರು. ನನ್ನ ಆಯುಧಗಳು ಕಡ್ಡಿ, ಮಸಿ, ಕಾಗದ. ಅವುಗಳನ್ನು ಬೇಗ ತರಿಸು ಎಂದು ದುರ್ಮತಿಯು ಹೇಳಲು ಕೂಡಲೇ ವಿಷಯಲಂಪಟನು ಕಾಗದ, ಮಸಿ, ಕಡ್ಡಿಗಳನ್ನು ತೆಗೆದುಕೊಂಡು ಬಾ ಎಂದು ಸತ್ರದ ಆಳಿಗೆ ಹೇಳಿದನು

ಆಗ, ತಲೆಯೆತ್ತದೆ ಬಿದ್ದಿದ್ದರೂ ಸ್ವಲ್ಪ ಜ್ಞಾನವಿದ್ದುದರಿಂದ ಕದರ್ಥಕನು " ಮನುಷ್ಯರು ದುಷ್ಕರ್ಮಗಳನ್ನು ಮಾಡುವ ಪ್ರಯತ್ನ ಪಟ್ಟರೆ ಎಷ್ಟು ಮನೆಗಳನ್ನು ತಾನೇ ಹಾಳುಮಾಡಲಾರರು ? ಕತ್ತಿ, ಕಠಾರಿ, ಈಟಿಗಳಿಗಿಂತಲೂ ಕಾಗದ, ಕಡ್ಡಿ, ಮಸಿಗಳು ಭಯಂಕರವಾದುವು " ಎಂದನು.

ಅದನ್ನು ಕೇಳಿ ದುರ್ಮತಿಯು ಇವನಿಗೆ ಅಮಲು ಇನ್ನೂ ಚೆನ್ನಾಗಿ ಏರಿಲ್ಲ ; ಮತ್ತಷ್ಟು ಮದ್ಯವಂ ಕುಡಿಸು ಎಂದು ವಿಷಯಲಂಪಟನಿಗೆ ಹೇಳಲು, ಅವನು ಹಾಗೆಯೇ ಮಾಡಿದನು. ಆಗ ದುರ್ಮತಿಯು ಇನ್ನು ನಾವು ನಮ್ಮ ಕೆಲಸವನ್ನು ನಿರಾತಂಕವಾಗಿ ಮಾಡಬಹುದು ಎಂದನು.

ವಿಷಯಲಂಪಟನೇ ಕೇಳು ಧರ್ಮದೇವನು ಏಲಾದ್ವೀಪಕ್ಕೆ ಹೋಗಿ ಅಲ್ಲಿರುವ ಚಕ್ರವರ್ತಿಗೆ ಇಲ್ಲಿಯ ರಾಜತಂತ್ರದ ವರ್ತಮಾನಗಳನ್ನು ತಿಳಿಸಿ, ಇಲ್ಲಿರುವ ಚಕ್ರವರ್ತಿಯ ಪಕ್ಷದವನೊಬ್ಬನಿಗೆ ಚಕ್ರವರ್ತಿಯಿಂದ ಒಂದು ಲೇಖನವನ್ನು ತಂದಿರುವನು.

ಇದು ರಾಜದ್ರೋಹಕಾರ್ಯ. ಇದನ್ನು ಸರ್ಕಾರಕ್ಕೆ ತಿಳಿಸಿದರೆ ಅವನನ್ನು ಯಾವಜ್ಜೀವವೂ ಸೆರೆಯಲ್ಲಿಡುವರು ಸರ್ಕಾರಕ್ಕೆ ಇದನ್ನು ತಿಳಿಸುವರಾರು?

ಯಾವಜ್ಜೀವವೂ ಇಡುವರೇ? ಹಾಗಾದರೆ ನಾನೇ ಅದನ್ನು ಸರ್ಕಾರಕ್ಕೆ ತಿಳಿಸುತ್ತೇನೆ.

ಅದು ಪ್ರಯೋಜನವಿಲ್ಲ ನೀನು ತಿಳಿಸಿದೆಯಾದರೆ ನಿನ್ನನ್ನೂ ಅವನನ್ನೂ ಎದುರಿಗೆ ನಿಲ್ಲಿಸಿ ವಿಚಾರಣೆ ಮಾಡುವರು. ಅವನ ಮೇಲೆ ಅಪರಾಧವನ್ನು ಹೊರಿಸುವುದಕ್ಕೆ ಸಾಕಾದಷ್ಟು ಸಾಮಗ್ರಿಗಳಿದ್ದರೂ, ನ್ಯಾಯಾಧಿಪನೇನು ಮಾಡುವನೋ? ಒಂದು ವೇಳೆ ಧರ್ಮದೇವನನ್ನು ಬಿಟ್ಟು ಬಿಟ್ಟರೂ ಅಥವಾ ಅವನು ಶೀಘ್ರವಾಗಿಯೇ ಸೆರೆಯನ್ನು ಬಿಟ್ಟು ಬಂದರೂ ನಿನ್ನನ್ನು ಹತಮಾಡದೇ ಬಿಡನು.

ಆಗ ನನ್ನ ಕರಾರಿ ಇರುವುದಷ್ಟೆ.

ಲಲಿತಾಂಗಿಯು ಆಮೇಲೆ ನಿನ್ನನ್ನು ಪ್ರೀತಿಸುವಳೋ?

ನಿಜ ಅದನ್ನು ಮರೆತೆ

ದುರ್ಮತಿಯು ಅದಕ್ಕೆ ತಕ್ಕ ಉಪಾಯವು ಇದೇ ಎಂದು ತನ್ನ ಎಡಗೈಯಲ್ಲಿ ಲೇಖಿನಿಯನ್ನು ಪಿಡಿದು ತನ್ನ ಅಕ್ಷರಗಳನ್ನು ಮರೆಸಿ ಈ ತೆರದಿಂ ಬರೆದನು—

ಮಹಾಸ್ವಾಮಿಯವರ ವಕೀಲರ ಸಮಕ್ಷಮಕ್ಕೆ—

ಸರ್ಕಾರದ ಅಭಿಮಾನಿಯಾದವನೊಬ್ಬನು ವಿನಯಪೂರ್ವಕವಾಗಿ ತಿಳಿಯಪಡಿಸುವುದೇನೆಂದರೆ — ಈ ದಿನ ರೇವಿಗೆ ಬಂದ ಜಯಲಕ್ಷ್ಮಿಯೆಂಬ ನಾವೆಯಲ್ಲಿ ನೌಕಾಧಿಪತಿಯ ಸಹಾಯಕನಾದ ಧರ್ಮದೇವನೆಂಬುವನು ಏಲಾದ್ವೀಪಕ್ಕೆ ಹೋಗಿ ಅಲ್ಲಿಯ ರಾಕ್ಷಸನಿಗೆ ಒಂದು ಲೇಖನವನ್ನು ಕೊಟ್ಟು, ಮಲಯಪುರದಲ್ಲಿರುವ ಆ ರಾಕ್ಷಸನ ಗೂಢಚಾರನೊಬ್ಬನಿಗೆ ಮತ್ತೊಂದು ಲೇಖನವನ್ನು ತಂದಿರುವನು. ಈ ಲೇಖನವು ಅವನಲ್ಲಿಯೋ, ಅವನ ಮನೆಯಲ್ಲಿಯೋ, ಅಥವ ನಾವೆಯಲ್ಲಿಯೋ ಇರುವುದು. ಆ ಧರ್ಮದೇವನನ್ನು ಸೆರೆ ಹಿಡಿದು ಹುಡುಕಿದರೆ ಲೇಖನವು ಸಿಕ್ಕುವುದು.

ಈ ರೀತಿ ಬರೆದ ಪತ್ರಿಕೆಯನ್ನು ದುರ್ಮತಿಯು ವಿಷಯಲಂಪಟನಿಗೆ ಮೆಲ್ಲಗೆ ಓದಿ "ಹೇಳಿ ಹೀಗೆ ಬರೆದಿರುವುದು ಸರಿಯಲ್ಲವೇ? ಇದರಲ್ಲಿ ಆರೂ ಸಿಕ್ಕಿಬೀಳುವುದಿಲ್ಲ. ಇದನ್ನು ಈ ರೀತಿಯಾಗಿ ಮಡಿಸಿ ಹೀಗೆ ಮೇಲುವಿಲಾಸವನ್ನು ಬರೆದು ಟಪಾಲಿನಲ್ಲಿ

ಹಾಕಿದರೆ ಮುಂದೆ ಅದರ ಕೆಲಸವನ್ನು ಅದೇ ಮಾಡಿಕೊಳ್ಳುವುದು" ಎಂದು ಆ ಕಾಗದ ವನ್ನು ಕ್ರಮವಾಗಿ ಮಡಿಸಿ ವಕೀಲನ ಹೆಸರಿಗೆ ವಿಲಾಸವನ್ನು ಬರೆದು ವಿಷಯಲಂಪ ಟನ ಕೈಯಲ್ಲಿ ಕೊಟ್ಟನು

ಕದರ್ಥಕನು ಸ್ವಲ್ಪ ತಲೆಯನ್ನೆತ್ತಿ ನಿರಪರಾಧಿಯಾದ ಧರ್ಮದೇವನ ವಿಷಯದಲ್ಲಿ ನೀವು ಹೀಗೆ ಮಾಡುವುದು ಸರಿಯೆ? ಎಂದನು ಅದನ್ನು ಕೇಳಿ ದುರ್ಮತಿಯು ಸ್ವಲ್ಪ ಭಯಪಟ್ಟು ಧರ್ಮದೇವನ ವಿಷಯದಲ್ಲಿ ಆರು ಏನು ಮಾಡಿದರು ಇಗೋ ನೋಡು ಹಾಸ್ಯಕ್ಕಾಗಿ ಬರೆದ ಲೇಖನವನ್ನು ಮುದುಡಿ ಬಿಸುಡುವೆನು ಎಂದು ವಿಷಯಲಂಪಟನ ಕೈಯಿಂದ ಆ ಲೇಖನವನ್ನು ಕಿತ್ತುಕೊಂಡು ಪಿಂಡಾಕಾರವಂ ಮಾಡಿ ಬಿಸುಟನು ಆಗ ಕದರ್ಥಕನು ಅದು ಸರಿ ನನ್ನ ಆಪ್ತನಾದ ಧರ್ಮದೇವನಿಗೆ ನೀವು ಕೇಡುಕು ಮಾಡು ವುದು ಸರಿಯಲ್ಲ ಎಂದನು.

ಬಳಿಕ ದುರ್ಮತಿಯು ಊರಿಗೆ ಹೋಗೋಣ ಬಾ ಎಂದು ಕದರ್ಥಕನನ್ನು ಕರೆಯಲು ಅವನು ಅಲುಗಾಡುತ್ತ ಎದ್ದು ನಿಂತು, ವಿಷಯಲಂಪಟನನ್ನು ನೋಡಿ ನೀನು ಪಟ್ಟಣಕ್ಕೆ ಬರುವುದಿಲ್ಲವೋ? ಎಂದು ಕೇಳಲು, ಅವನು ನಾನು ಊರಿಗೆ ಬರುವುದಿಲ್ಲ. ಪಾಳೆಯಕ್ಕೆ ಹೋಗುತ್ತೇನೆ ಎಂದು ಹೇಳಿ ಅಲ್ಲಿಯೇ ಕುಳಿತಿರ್ದನು

ದುರ್ಮತಿಯೂ ಕದರ್ಥಕನೂ ಪಟ್ಟಣದ ಹಾದಿಯನ್ನು ಹಿಡಿದು ಹೊರಟರು. ಅವರು ಸ್ವಲ್ಪ ದೂರ ಹೋದ ಮೇಲೆ ವಿಷಯಲಂಪಟನು ನೆಲದ ಮೇಲೆ ಮುದುಡಿ ಬಿಸುಟಿದ್ದ ಆ ಲೇಖನವನ್ನು ತೆಗೆದು ಪೂರ್ವದಂತೆಯೇ ಮಡಿಸಿ ಸರಿಮಾಡಿ ಅದನ್ನು ತನ್ನ ಕವಚದಲ್ಲಿ ಸೇರಿಸಿ ಮತ್ತೊಂದು ಮಾರ್ಗವಾಗಿ ಪಟ್ಟಣದ ಕಡೆಗೆ ಓಡಿ ಹೋಗುತ್ತ ಲಿದ್ದನು. ದುರ್ಮತಿಯು ಇದನ್ನೆಲ್ಲಾ ಚೆನ್ನಾಗಿ ನೋಡುತಲಿದ್ದನು. ಆದರೆ ಕದರ್ಥ ಕನು ದುರ್ಮತಿಯನ್ನು ನೋಡಿ ಅವನು ಪಾಳೆಯಕ್ಕೆ ಹೋಗುತ್ತೇನೆಂದು ನನ್ನೊಂದಿಗೆ ಸುಳ್ಳು ಹೇಳಿ ಈಗ ಊರಿಗೆ ಹೋಗುತ್ತಾನೆ ನೋಡು ಎಂದನು

ನಿನಗೆ ಕಣ್ಣು ಸರಿಯಾಗಿ ಕಾಣುವುದಿಲ್ಲ. ಅವನು ಪಾಳೆಯದ ಕಡೆಗೀಗ ಓಡಿ ಹೋದನು

ಹಾಗೋ? ಮದ್ಯವು ಜ್ಞಾನವನ್ನು ತಲೆಕೆಳಗುಮಾಡುತ್ತದೆ

ಅಹುದು; ಎಂದು ದುರ್ಮತಿಯು ಹೇಳುತ್ತಾ "ಆ ಲೇಖಸವು ನನ್ನ ಇಷ್ಟದಂತೆ ವಕೀಲನನ್ನು ಸೇರುವುದು ಧರ್ಮದೇವ! ನೀನು ಜಯಲಕ್ಷ್ಮಿಯ ಅಧಿಪತಿಯಾಗುವುದು ಹೇಗೋ ನೋಡೋಣ" ಎಂದು ತನ್ನೊಳು ತಾನೇ ಹೇಳಿಕೊಳ್ಳುತ್ತ ಮಾಡಿದ ಕೆಲಸದಲ್ಲಿ ತೃಪ್ತನಾಗಿ ಊರನ್ನು ಪ್ರವೇಶಿಸಿದನು

---

# ಐದನೆಯ ಅಧ್ಯಾಯ

## ಮದುವೆಯ ಔತಣ

ಮಲಯದೇಶದಲ್ಲಿ ಮದುವೆಗೆ ಮೊದಲು ಔತಣವನ್ನು ಮಾಡಿಸುವ ಪದ್ಧತಿ. ಧರ್ಮದೇವನ ಮದುವೆಯೂಟವು ಮರುದಿನ ಪ್ರಾತಃಕಾಲ ಹತ್ತು ಗಂಟೆಗೆ ಆಗಬೇಕೆಂದು ಏರ್ಪಾಡಾಗಿದ್ದಿತು ಭುಜಂಗಭೂಷಣನಿಗೆ ಒಬ್ಬನೇ ಮಗನಾದುದರಿಂದ ಇವನ ಮದುವೆಯನ್ನು ಸಾಲಮಾಡಿಯಾದರೂ ಸಂಭ್ರಮವಾಗಿ ನಡೆಸಬೇಕೆಂಬ ಕುತೂಹಲವಿದ್ದಿತು ಅದಕ್ಕಾಗಿ ಅವನು ಹಿಂದೆ ನಾವು ವಿವರಿಸಿದ್ದ ಸತ್ರದ ವಿಸ್ತಾರವಾದ ಮಾಳಿಗೆಯಲ್ಲಿ ಊಟಕ್ಕೆ ಸ್ಥಳವನ್ನು ಮಾಡಿದ್ದನು ಗೊತ್ತಾದಕಾಲಕ್ಕೆ ಮೊದಲೇ ಅಲ್ಲಿಗೆ ಅನೇಕರು ಅತಿಥಿಗಳು ಬಂದು ಸೇರಿದ್ದರು ಜಯಲಕ್ಷ್ಮಿಯ ಅಧಿಕಾರಿಗಳೂ, ನಾವಿಕರೂ, ಸೈನಿಕರೂ ಬಂದು ಸೇರಿದರು ಧರ್ಮದೇವನಿಗೆ ಮರ್ಯಾದೆ ಮಾಡಲೋಸುಗ ಧನಕೋಟಿಯೂ ಅಲ್ಲಿಗೆ ಬರುತ್ತಾನೆಂದು ವರ್ತಮಾನವಿದ್ದಿತು, ಆದರೆ ಆ ವರ್ತಮಾನವು ನಿಶ್ಚಯವೆಂದು ತಿಳಿದಿರಲಿಲ್ಲವಾದುದರಿಂದ ಅವನು ಊಟಕ್ಕೆ ಬರುವನೋ ಇಲ್ಲವೋ ಎಂದು ಜನರು ಒಬ್ಬರನ್ನೊಬ್ಬರು ಕೇಳುತ್ತಲಿರುವ ಸಮಯಕ್ಕೆ ಸರಿಯಾಗಿ ದುರ್ಮತಿಯೂ ಕದರ್ಥಕನೂ ಬಂದು ಧನಕೋಟಿಯು ಬರುವುದಾಗಿ ಹೇಳಿದನೆಂದು ತಿಳುಹಿದರು ಅಲ್ಲಿದ್ದವರೆಲ್ಲರೂ ಧರ್ಮದೇವನಲ್ಲಿ ವಿಶ್ವಾಸವುಳ್ಳವರಾಗಿದ್ದುದರಿಂದ, ಈ ವರ್ತಮಾನವನ್ನು ಕೇಳುತಲೆ ಧನಕೋಟಿಯ ಆಗಮನವು ಧರ್ಮದೇವನ ನೌಕಾಧಿಪತ್ಯಕ್ಕೆ ಸೂಚನೆಯೆಂದು ಸಂತೋಷಪಡುತ್ತಲಿದ್ದರು. ಆ ವೇಳೆಗೆ ಧನಕೋಟಿಯೂ ಅಲ್ಲಿಗೆ ಬಂದನು ಹಡಗಿನ ಅಧಿಕಾರಿಗಳೆಲ್ಲರೂ ತಮ್ಮ ಇಷ್ಟದಂತೆ ಧರ್ಮದೇವನೇ ನೌಕಾಧಿಪನಾಗುವನೆಂದು ಚಪ್ಪಾಳೆಯನ್ನು ತಟ್ಟಿ ಕೋಲಾಹಲ ಧ್ವನಿಯನ್ನು ಮಾಡಿದರು.

ಧನಕೋಟಿಯು ಅಲ್ಲಿಗೆ ಬಂದೊಡನೆ, ಅವನ ಬಳಿಗೆ ವಧೂವರರನ್ನು ಕರೆತರುವುದಕ್ಕಾಗಿ ದುರ್ಮತಿಯೂ ಕದರ್ಥಕನೂ ಹೊರಟರು. ಇವರಿಬ್ಬರೂ ಹಂತವನ್ನಿಳಿದು ಸತ್ರದ ಬಾಗಿಲನ್ನು ಸೇರುತಲೆ, ವಧೂವರರೂ ಭುಜಂಗಭೂಷಣನೂ ಪರಿಜನರೊಡನೆ ಒರುತಲಿರುವುದನ್ನು ಕಂಡರು. ಇವರ ಹಿಂದೆ ವಿಷಯಲಂಪಟನು, ಲಲಿತಾಂಗಿಯು ಧರ್ಮದೇವನನ್ನು ಮದುವೆಯಾಗುವಳಲ್ಲಾ ಎಂಬ ಸಂಕಟದಿಂದ ಕೂಡಿ, ಆಗಾಗ್ಯೆ ಹಿಂದಿರುಗಿ ಯಾರನ್ನೋ ನಿರೀಕ್ಷಿಸುತ್ತ ತಾನು ಬಂದ ದಾರಿಯನ್ನು ನೋಡುತ್ತ ಬರುತ್ತಲಿದ್ದನು.

ಕದರ್ಥಕನಿಗೆ ಆವಾಗಲೂ ಊಟವೆಂದರೆ ಆಸೆ ಅದರಲ್ಲಿ ಮದುವೆಯೂಟವೆಂದರೆ ಕೇಳಬೇಕೇ! ಇವನು ಮದುವೆಯೂಟಕ್ಕೆ ಅನುಕೂಲಪಡಿಸಿಕೊಳ್ಳುವುದಕ್ಕಾಗಿ ಭುಜಂಗಭೂಷಣನ ಸಮೀಪವನ್ನು ಸೇರಿ ಇಚ್ಛಕವಾಡತೊಡಗಿದನು. ಭುಜಂಗಭೂಷಣನೂ ವಧೂವರರೂ ಆನಂದವೆಂಬ ಸಮುದ್ರದಲ್ಲಿ ಮುಳುಗಿದ್ದರು. ಅಲ್ಲಿ ಸೇರಿದ್ದ ಮಿಕ್ಕವರು ಊಟಮಾಡಲು ಆತುರರಾಗಿದ್ದರು ವಿಷಯಲಂಪಟನ ಮುಖದಲ್ಲಿ ತೋರುತ್ತಲಿದ್ದ ಭಯವೂ ಸಂಕಟವೂ ಅವನ ಮುಖವನ್ನು ದೃಷ್ಟಿಸಿ ನೋಡುತ್ತಲಿದ್ದ ದುರ್ಮತಿಗೆ ವಿನಾ ಮತ್ತಾರಿಗೂ ಗೊತ್ತಾಗಲಿಲ್ಲ

ವಧೂವರರಿಬ್ಬರೂ ಸತ್ರದ ಬಾಗಿಲಿಗೆ ಬರಲು, ಧನಕೋಟಿಯು ಅವರನ್ನು ಮಾಳಿಗೆಗೆ ಕರೆದುಕೊಂಡು ಹೋಗಲೋಸುಗ ಇದಿರುಗೊಂಡು ಬಂದನು. ವಧೂವರರು ಮರ್ಯಾದೆಯೊಡನೆ ಅವನಿಗೆ ನಮಸ್ಕಾರ ಮಾಡಿ ಅವನನ್ನು ಮುಂದಿಟ್ಟುಕೊಂಡು ಮಾಳಿಗೆಯನ್ನು ಸೇರಿದರು. ಇವರನ್ನು ಹಿಂಬಾಲಿಸಿ ಎಲ್ಲರೂ ಹೋದರು. ಆಗ ಭುಜಂಗಭೂಷಣನು ಅವರವರ ಯೋಗ್ಯತೆಗೆ ತಕ್ಕ ಸ್ಥಾನಗಳಲ್ಲಿ ಎಲ್ಲರನ್ನೂ ಕುಳ್ಳಿರಿಸಿ, ಎಲೆಗಳನ್ನು ಹಾಕಿ ಬಡ್ಡಿಸುವಂತೆ ಪರಿಚಾರಕರಿಗೆ ಅಪ್ಪಣೆಯನ್ನು ಮಾಡಿದನು. ಬಡ್ಡಿಸಿದ ಕೂಡಲೆ ಭೋಜನವು ಪ್ರಾರಂಭವಾಯಿತು

ಊಟವು ಆಗುತ್ತ ಆಗುತ್ತ ಜನಗಳ ಸಂತೋಷವು ಹೆಚ್ಚಾಗುತಲಿದ್ದಿತು. ಆಗ ಭುಜಂಗಭೂಷಣನು ಈ ದಿವಸ ಇಲ್ಲಿ ಇಷ್ಟು ಜನಗಳು ಸೇರಿ ಈ ಶುಭ ಪ್ರಸ್ತವನ್ನು ನಡೆಸುವೆವೆಂದು ಆರಿಗಾದರೂ ತಿಳಿದು ಇದ್ದಿತೇ? ದೈವಕೃಪೆ ಎಂದನು

ಅದನ್ನು ಹೇಳುತ್ತಲೆ ಕದರ್ಥಕನು ಮದುವೆಯಾಗುವುದಕ್ಕೆ ಮೊದಲೇ ಅದು ಸುಖಕರವೆಂದು ಭಾವಿಸಲು ಆಗುವುದಿಲ್ಲ ಎಂದು ಹೇಳಿ, ಧರ್ಮದೇವನ ಮುಖ ವನ್ನು ನೋಡಲು, ಅವನು ಕದರ್ಥಕನ ಅಭಿಪ್ರಾಯ ನನಗೆ ಗೊತ್ತಾಗಲಿಲ್ಲ ಈಗ ನನ್ನ ಆನಂದವು ಅಪರಿಮಿತವಾಗಿರುವುದರಿಂದ ಸುಖವಾವುದೋ ದುಃಖವಾವುದೋ ಹೇಳಲಾಗುವುದಿಲ್ಲ, ಆದರೆ, ಕೆಲವು ವೇಳೆಗಳಲ್ಲಿ ಸಂತೋಷವು ಕೂಡ ದುಃಖದಂತೆ ಮನುಷ್ಯನನ್ನು ಪೀಡಿಸುವುದು, ಎಂದನು

ಆಗ ದುರ್ಮತಿಯು ಧರ್ಮದೇವನನ್ನು ನೋಡಿ, ಅಯ್ಯಾ ! ನೀನು ಈಗ ಆಡಿದ ಮಾತಿನಿಂದ ಅದುದೋ ಒಂದು ಅಶುಭವು ಸನ್ನಿಹಿತವಾಗಿ ನೀನು ಭಯಪಡುವಂತೆ ತೋರುತ್ತಿದೆ. ಅಂಥಾ ಸಂದರ್ಭವಾವುದೂ ಇಲ್ಲವಲ್ಲಾ ? ಎಂದುದಕ್ಕೆ, ಧರ್ಮದೇ ವನು ನನಗೇನೋ ಆ ಭಯವುಂಟು ಲೋಕದಲ್ಲಿ ಸುಖದುಃಖಗಳು ಕಲತೇ ಇರು ವುವು. ದುಃಖಮಿಶ್ರವಾಗದ ಸುಖವು ಮನುಷ್ಯನಿಗೆ ಸಿಕ್ಕದು. ಈ ಸುಂದರಿಯಾದ ಲಲಿತಾಂಗಿಯು ನನ್ನ ಪತ್ನಿಯಾಗುವ ಭಾಗ್ಯವು ಎಲ್ಲಿ ತಪ್ಪಿಹೋಗುವುದೋ ಎಂದು ಭಯಪಡುತಲಿದ್ದೇನೆ, ಎಂದು ಹೇಳಿದನು.

ಧರ್ಮದೇವನಾಡಿದ ಮಾತನು ಕೇಳಿ ಕದರ್ಥಕನು, ಏನಯ್ಯಾ ಧರ್ಮದೇವ ! ಲಲಿತಾಂಗಿಯು ಇನ್ನೂ ನಿನ್ನ ಪತ್ನಿಯಾಗಲಿಲ್ಲ, ಆಗಲೇ 'ಪತ್ನಿ' ಎಂದು ಹೇಳುತ್ತ ಲಿದ್ದೀಯೆ ? ಅವಳನ್ನು ನೋಡಿ 'ಪತ್ನಿ ಎಂದು ಕೂಗು, ಎಷ್ಟು ಸಿಟ್ಟುಬರುವುದು, ಎಂದು ಹಾಸ್ಯಮಾಡಲು, ಲಲಿತಾಂಗಿಯು ನಸುನಗುತ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡಳು

ಈ ಮಾತುಗಳನ್ನು ಕೇಳುತ್ತಲಿದ್ದ ವಿಷಯಲಂಪಟನ ಮುಖದಿಂದ ಬೆವರು ಸುರಿಯುವುದಕ್ಕೆ ಆರಂಭವಾಯಿತು.

ಅಯ್ಯಾ ! ಕದರ್ಥಕನೇ ! ನೀನು ಹೇಳುವುದು ಸರಿ, ಲಲಿತಾಂಗಿಯು ಇನ್ನೂ ನನ್ನ ಪತ್ನಿಯಾಗಿಲ್ಲ, ಇನ್ನೊಂದು ಘಂಟೆಯೊಳಗೆ ವಿವಾಹವು ನಡೆಯುವುದು. ಎಂದು ಧರ್ಮದೇವನು ಹೇಳಲು, ದುರ್ಮತಿಯ ಮುಖವು ಬೆಳ್ಳಗಾಯಿತು; ವಿಷಯ ಲಂಪಟನಿಗೆ ಹೊಟ್ಟೆಯಲ್ಲಿ ಕೆಂಡವನ್ನು ಸುರಿದಂತಾಯಿತು. ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿ ನರಳಿದರು

ಕದರ್ಥಕನು ಧರ್ಮದೇವನನ್ನು ನೋಡಿ ನಮಗೆ ಈ ಊಟವಲ್ಲದೆ ಮದುವೆಯೂಟ ಬೇರೆ ಸಿಕ್ಕುವುದೆಂದು ಯೋಚಿಸಿಕೊಂಡಿದ್ದೆವು , ನೀನು ಇದನ್ನೇ ಮದುವೆಯೂಟವನ್ನಾಗಿ ಮಾಡುವಂತೆ ತೋರುತಲಿದೆ ಎಂದನು

ನಾನು ಹಾಗೇನೂ ಅನ್ಯಾಯ ಮಾಡುವುದಿಲ್ಲ, ಮದುವೆಯಾದ ಕೂಡಲೆ ಒಂದು ವಾರ ಅಮರಪುರಕ್ಕೆ ಹೋಗಿ ಬಂದು, ಬಳಿಕ ಮದುವೆಯೂಟಕ್ಕೆ ಏರ್ಪಾಡು ಮಾಡುವೆನು, ಎಂದ ಧರ್ಮದೇವನ ಮಾತಕೇಳಿ ಅಲ್ಲಿ ಸೇರಿದ್ದವರೆಲ್ಲರೂ ಸಂತೋಷಪಟ್ಟರು.

ಕದರ್ಥಕನ ಸಂತೋಷವು ಎಲ್ಲರ ಸಂತೋಷಕ್ಕಿಂತ ಹೆಚ್ಚಾಗಿದ್ದಿತು ಆಗ ದುರ್ಮತಿಯು ಸಮೀಪಕ್ಕೆ ಬರಲು, ಅವನನ್ನು ನೋಡಿ ಅಯ್ಯಾ ದುರ್ಮತಿ ! ಧರ್ಮದೇವನು ಬಹಳ ಒಳ್ಳೆಯವನು, ಧಾರಾಳಿ, ಲಲಿತಾಂಗಿಗೆ ತಕ್ಕ ವರನು ಹೀಗಿರಲು ನೀವು ಅವನ ವಿಷಯದಲ್ಲಿ ನೆನ್ನೆಯ ದಿನ ಮಾಡಿದ ಕೃತ್ರಿಮವು ಸರಿಯೇ ? ಎನ್ನಲು, ದುರ್ಮತಿಯು ಅಯ್ಯಾ ಕದರ್ಥಕ ! ಅದು ದುರಾಲೋಚನೆಯಿಂದ ಮಾಡಿದುದಲ್ಲ. ವಿಷಯಲಂಪಟನು ನೆನ್ನೆಯ ದಿನ ನಮ್ಮೊಡನೆ ಇದ್ದುದನ್ನು ನೋಡಿ ಅವನು ಧರ್ಮದೇವನಿಗೇನು ತೊಂದರೆ ಮಾಡುವನೋ ಎಂಬ ಭಯವಿದ್ದಿತು , ಅದಕ್ಕೋಸ್ಕರ ನಾನು ಅವನೊಡನೆ ಆ ರೀತಿಯಾಗಿ ವಿನೋದವಾದ ಮಾತುಗಳನ್ನು ಆಡಿದೆನು. ನಾನು ಅವನಿಗೆ ಹಾಗೆ ಹೇಳಿದುದರಿಂದಲೇ ವಿಷಯಲಂಪಟನು ತನ್ನ ಮನಃಕ್ಲೇಶವನ್ನು ತಾಳಿ ಈ ಮದುವೆಯ ಊಟಕ್ಕೆ ಬರುವಂತಾದನು. ಎಂದನು

ಕದರ್ಥಕನಿಗೆ ಈ ಮಾತುಗಳಲ್ಲಿ ಪೂರಾ ನಂಬುಗೆಯು ಹುಟ್ಟದೆ, ವಿಷಯಲಂಪಟನ ಮುಖವನ್ನೇ ನೋಡುತಲಿದ್ದನು ಈ ವೇಳೆಗೆ ಭೋಜನವು ಮುಗಿಯಿತು.

ಬಳಿಕ ಭುಜಂಗಭೂಷಣನು ಎದ್ದು ಲಗ್ನಕಾಲವು ಸಮೀಪಿಸಿತು; ಎಲ್ಲರೂ ಮದುವೆಯ ಮಂಟಪಕ್ಕೆ ಬಿಜಯಮಾಡಬೇಕು ಎಂದು ಪ್ರಾರ್ಥಿಸಿದ ಒಡನೆಯೇ ಎಲ್ಲರೂ ಹೊರಡಲು ಯತ್ನಿಸಿದರು

ಇಷ್ಟರಲ್ಲಿ ಮಾಳಿಗೆಯ ಒಂದು ದೊಡ್ಡ ಗವಾಕ್ಷದ ಬಳಿ ನಿಂತು ಪಟ್ಟಣದ ದಾರಿಯನ್ನೇ ನೋಡುತ್ತಲಿದ್ದ ವಿಷಯಲಂಪಟನು ಅದುರು ರೋಗಬಂದವನಂತೆ ಕೈ ಕಾಲುಗಳನ್ನು ಬಡಿಯುತ್ತ ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಧೊಪ್ಪೆಂದು ಬಿದ್ದನು ಇದನ್ನು ದುರ್ಮತಿ ಮಾತ್ರ ನೋಡಿದನು. ಆ ಕ್ಷಣವೇ ಪೋಲೀಸಿನವರ ಕತ್ತಿಗಳ ಖಣಿ ಖಣಿ

ಶಬ್ದವೂ ಹೇತಗಳನ್ನು ಹತ್ತುತಲಿರುವ ಹಜ್ಜೆಗಳ ಶಬ್ದವೂ ದುರ್ಮತಿಯ ಕಿವಿಗೆ ಬಿದ್ದವು, ಒಡನೆಯೇ ಅವನು ಇದನ್ನು ಕೇಳಿದುದರಿಂದಲೇ ವಿಷಯಲಂಪಟನು ಈ ರೀತಿ ಅಂಗ ವಿಕಾರಗಳನ್ನು ಮಾಡಿ ಕುರ್ಚಿಯ ಮೇಲೆ ಬಿದ್ದನೆಂದು ತಿಳಿದನು

ಪೋಲೀಸಿನವರ ಹಜ್ಜೆಯ ಸದ್ದೂ ಕತ್ತಿಗಳ ಖಣಿಖಣಿಧ್ವನಿಯೂ ಪ್ರತಿ ಕ್ಷಣ ದಲ್ಲಿಯೂ ಸಮೀಪಿಸುತಲಿದ್ದವು ಕೊನೆಗೆ ಐದು ಜನ ಪೋಲಿಸಿನವರೊಡನೆ ಆ ಪಟ್ಟಣದ ನ್ಯಾಯಾಧ್ಯಕ್ಷನು ಒಳಗೆ ಒಂದು, ಇಲ್ಲಿ ಧರ್ಮದೇವನೆಂಬವನು ಆರು? ಎಂದು ಕೇಳಲು, ನಾನೇ ಎಂದು ಧರ್ಮದೇವನು ಇದಿರಿಗೆ ಒಂದು ನಿಂತು, ನನ್ನಿಂದ ಏನಾಗಬೇಕು ಎಂದು ಕೇಳಿದನು. ಅದಕ್ಕೆ ಆ ನ್ಯಾಯಾಧ್ಯಕ್ಷನು ಅವ್ಯದೋ ಒಂದು ತಪ್ಪಿಗಾಗಿ ನಿನ್ನನ್ನು ಸರೆಗೆ ಹಿಡಿದುಕೊಂಡು ಬರುವಂತೆ ಸರ್ಕಾರದವರು ಅಪ್ಪಣೆಯನ್ನು ಮಾಡಿದ್ದಾರೆ ಎಂದನು

ಅದನ್ನು ಕೇಳಿ ಧನಕೋಟಿಯೂ ಧರ್ಮದೇವನೂ ಏಕಕಾಲದಲ್ಲಿಯೇ ಆವ ತಪ್ಪು ಎಂದು ಕೇಳಲು, ನ್ಯಾಯಾಧ್ಯಕ್ಷನು ನನಗೆ ಅದೇನೂ ತಿಳಿಯದು; ವಿಚಾ ರಣೆಯ ಕಾಲದಲ್ಲಿ ನ್ಯಾಯಾಧಿಪತಿಯು ತಪ್ಪು ಇಂಥದೆಂಬುದನ್ನು ತಿಳಿಸುವನು ಎಂದು ಹೇಳಿ ಧರ್ಮದೇವನನ್ನು ನೋಡಿ ಹೊರಡು ಎಂದನು

ಆಗ ಭುಜಂಗಭೂಷಣನು ಅಯ್ಯಾ ನ್ಯಾಯಾಧ್ಯಕ್ಷರೇ! ಮದುವೆಗೆ ಏರ್ಪಾಡು ಮಾಡಿಕೊಂಡು ಇನ್ನೊಂದು ಘಂಟೆಯೊಳಗೆ ಮದುವೆಯಾಗುತಲಿರುವ ನನ್ನ ಮಗನನ್ನು ಏತಕ್ಕೆ ಸೆರೆ ಹಿಡಿಯುವಿರಿ? ಎಂದು ಕಣ್ಣೀರನ್ನು ಸುರಿಸುತ ಬಹುವಿಧವಾಗಿ ಗೋಳಾ ಡಲು, ಅವನಿಗೆ ಕರುಣೆಯುಂಟಾಗಿ ಅಯ್ಯಾ ವೃದ್ಧನೇ! ಸ್ವಲ್ಪ ಸಮಾಧಾನವನ್ನು ತಾಳು, ನಿನ್ನ ಮಗನು ಹಡಗಿನ ಸರಕುಗಳ ಸಮಾಚಾರ ಅಥವಾ ಹಡಗಿನಲ್ಲಿದ್ದವರ ಆರೋಗ್ಯದ ವಿಷಯದಲ್ಲಿ ಅವ್ಯದನ್ನೋ ಸರ್ಕಾರಕ್ಕೆ ತಿಳಿಸಲು ಮರೆತಿರಬಹುದು; ಅದನ್ನು ತಿಳಿಸಿದ ಕೂಡಲೆ ಅವನನ್ನು ಬಿಟ್ಟು ಬಿಡುವರು ನೀನು ಭಯಪಡಬೇಡ ಎಂದನು

ಈ ಮಾತನ್ನು ಕೇಳಿ ಧರ್ಮದೇವನು ಸ್ವಾಮಿ! ನ್ಯಾಯಾಧ್ಯಕ್ಷನೇ! ಸರ್ಕಾ ರಕ್ಕೆ ನಾನು ತಿಳಿಸಬೇಕಾದುದನ್ನೆಲ್ಲಾ ಮೊದಲೇ ತಿಳಿಸಿದ್ದೇನೆ; ಅವ್ಯದನ್ನೂ ಬಿಡಲಿಲ್ಲ ಎಂದು ಹೇಳಲು. ನ್ಯಾಯಾಧ್ಯಕ್ಷನು ನಿನ್ನ ತಪ್ಪು ನನಗೆ ತಿಳಿಯದು ಎಂದು ಮೊದಲೇ

ಹೇಳಿದ್ದೆನು ನಿನ್ನನ್ನು ಸೆರೆ ಹಿಡಿದು ನ್ಯಾಯಾಧಿಪತಿಯಲ್ಲಿ ಬಿಡುವುದು ಮಾತ್ರ ನನ್ನ ಕೆಲಸ ಎಂದನು

ಈ ಮಧ್ಯೆ ಕದರ್ಥಕನು ದುರ್ಮತಿಯನ್ನು ನೋಡಿ ಈ ಕಾರ್ಯದ ಅರ್ಥವೇನು ? ಎಂದು ಕೇಳಲು ಅದಕ್ಕವನು ನಾನೇನ ಬಲ್ಲೆ? ನಿನ್ನ ಹಾಗೇ ನಾನೂ ಎಂದು ಉತ್ತರವಂ ಕೊಟ್ಟನು.

ನೀನೂ ವಿಷಯಲಂಪಟನೂ ಸೇರಿ ಮಾಡಿದ ಕೆಲಸದ ಫಲವಿದು, ಇಂಥ ಕೆಟ್ಟ ಕೆಲಸಗಳನ್ನು ಮಾಡುವವರಿಗೆ ದೇವರು ಶಿಕ್ಷೆಯನ್ನು ಇಮ್ಮಡಿ ಮಾಡುವನು.

ನಾನೇನ ಮಾಡಿದೆ ? ನಿನಗೆ ತಿಳಿದ ಹಾಗೆಯೇ ನಿನ್ನೆ ನಾನು ವಿನೋದಕ್ಕಾಗಿ ಬರೆದ ಕಾಗದವನ್ನು ಅಲ್ಲಿ ಹರಿದು ಬಿಸುಟೆನಲ್ಲಾ

ನೀನು ಕಾಗದವನ್ನು ಹರಿಯಲಿಲ್ಲ; ಸುಮ್ಮನೆ ಮುದುಡಿ ಬಿಸುಟೆ

ಅಯ್ಯೋ ಹುಚ್ಚಪ್ಪ! ಬಾಯಿ ಮುಚ್ಚಿಕೊಂಡಿರು

ಅದು ಏತಕ್ಕೆ ?

ನೀನು ಆ ಕಾಲದಲ್ಲಿ ಕುಡಿದು ಇದ್ದೆ, ನಿನಗೆ ಜ್ಞಾನವು ಸರಿಯಾಗಿರಲಿಲ್ಲ, ಆದುದರಿಂದ ಅಲ್ಲಿ ನಡೆದಿದ್ದುದೇ ಒಂದು, ನೀನು ತಿಳಿದುಕೊಂಡುದೇ ಒಂದು ಕುಡುಕನಿಗೆ ಜ್ಞಾನವು ತಲೆಕೆಳಗಾಗುವುದು ಎಂದು ನೀನೇ ನೆನ್ನೆಯ ದಿನ ಹೇಳಲಿಲ್ಲವೇ ?

ವಿಷಯಲಂಪಟನೆಲ್ಲಿ ? ಅವನನ್ನು ಕೇಳೋಣ

ಬುದ್ಧಿಮಂತರಂತೆ ತನ್ನ ಕೆಲಸವನ್ನು ನೋಡಿಕೊಳ್ಳಲು ಅವನು ಹೊರಟು ಹೋದನು

ಅವನನ್ನು ಹುಡುಕಿಕೊಂಡು ಬರೋಣ, ಬಾ

ಅದು ಏನು ಪ್ರಯೋಜನ ? ಅದಕ್ಕಿಂತ ನಮ್ಮ ಆಪ್ತಸ್ನೇಹಿತನಾದ ಧರ್ಮದೇವನಿಗೆ ಸಹಾಯವನ್ನು ಮಾಡಿದರೆ ಉಪಯೋಗವುಂಟು

ನಾವು ಏನು ಸಹಾಯವನ್ನು ಮಾಡಬಲ್ಲೆವು ?

ನಿಮ್ಮ ಕೈಯಲ್ಲಾಗುವ ಸಹಾಯ.

ಇವರಿಬ್ಬರೂ ಈ ರೀತಿ ಮಾತನಾಡುತ್ತಿರುವಲ್ಲಿ, ಧರ್ಮದೇವನು ಅಲ್ಲಿ ಸೇರಿದ್ದ ಜನಗಳಿಗೆಲ್ಲಾ ನಮಸ್ಕಾರವನ್ನು ಮಾಡಿ ನಾನು ಹೋಗಿ ಜಾಗ್ರತೆಯಾಗಿ ಬರುವೆನು,

ಅಲ್ಲಿಯ ವರೆಗೆ ನೀವೆಲ್ಲರೂ ದಯಮಾಡಿ ಇಲ್ಲಿಯೇ ಇರಬೇಕು ಎಂದು ಹೇಳಿ ನ್ಯಾಯಾಧ್ಯಕ್ಷನ ಹಿಂದೆ ಹೊರಟನು ಆಗ ದುರ್ಮತಿಯು ಅವನ ಇದಿರಿಗೆ ಬಂದು ಏನೋ ಅಲ್ಪ ಸಮಾಚಾರಕ್ಕಾಗಿ ಸರ್ಕಾರದವರು ಇಷ್ಟು ಅವಾಂತರವನ್ನು ಮಾಡಿರುವರು. ನೀನು ಅವ ತಪ್ಪನ್ನೂ ಮಾಡಿಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆ; ಆದರೂ ಸರಕಾರದವರ ಅಪ್ಪಣೆಯನ್ನು ನಡೆಸಲು ಹೋಗಿ ಜಾಗ್ರತೆಯಾಗಿ ಬಾ ಎಂದನು

ನ್ಯಾಯಾಧ್ಯಕ್ಷನು ಧರ್ಮದೇವನನ್ನೂ ಅವನ ಜತೆಯಲ್ಲಿ ಮೂವರು ಪೋಲಿಸಿನವರನ್ನೂ ತಾನು ತಂದಿದ್ದ ಬಂಡಿಯೊಳಗೆ ಕುಳ್ಳಿರಿಸಿ, ಬಂಡಿಯ ಹಿಂದೆ ಒಬ್ಬನನ್ನೂ ಮುಂದೆ ಒಬ್ಬನನ್ನೂ ನಿಲ್ಲಿಸಿ, ಪೋಲೀಸಿನವರಿಗೆ ಮಾಡಬೇಕಾದ ಅಪ್ಪಣೆಯನ್ನು ಮಾಡುತ್ತಿರಲು, ಲಲಿತಾಂಗಿಯು ಅಳುತ್ತ ಬಂಡಿಯ ಸಮೀಪದಲ್ಲಿ ಬಂದು ನಿಂತಳು. ಆಗ ಧರ್ಮದೇವನು ಎಲೌ ಪ್ರಿಯೇ! ಏತಕ್ಕೆ ಅಳುತ್ತೀಯೆ? ನಾನು ಜಾಗ್ರತೆಯಾಗಿಯೇ ಬಂದು ಬಿಡುವೆನು ಎಂದ ಕೂಡಲೆ ಬಂಡಿಯು ಹೊರಟಿತು. ಅಲ್ಲಿದ್ದವರೆಲ್ಲರೂ ವಿಸ್ಮಿತರಾಗಿ ಒಬ್ಬರ ಮುಖವನ್ನು ಒಬ್ಬರು ನೋಡುತ್ತ ನಿಂತಿದ್ದರು ಬಂಡಿಯು ಕಣ್ಣು ಮರೆಯಾಗುವ ವರೆಗೂ ಲಲಿತಾಂಗಿಯು ಅಲ್ಲಿಯೇ ನಿಂತಿದ್ದು, ಸತ್ರದ ಒಳಕ್ಕೆ ಬರಲು ಮುಖವು ಕಳೆಗುಂದಿ ಕಣ್ಣಿನ ಹೊಳಪು ಮಂಕಾಗಿ ಮೂರ್ಛಿತಳಾಗಿ ನೆಲದ ಮೇಲೆ ಬಿದ್ದಳು ದೈವಾನುಗ್ರಹದಿಂದ ಆಗ ಧನಕೋಟಿಯು ಅವಳ ಪಕ್ಕದಲ್ಲಿದ್ದುದರಿಂದ ಅವಳನ್ನೆತ್ತಿ ಅಲ್ಲಿದ್ದ ಒಂದು ಮಂಚದ ಮೇಲೆ ಮಲಗಿಸಿ, ತನ್ನ ಕಡೆಯವರಿಬ್ಬರನ್ನು ನೋಡಿ ನೀವು ಇವಳಿಗೆ ಪ್ರಜ್ಞೆ ಬರುವ ವರೆಗೆ ಇವಳ ಸಮೀಪದಲ್ಲಿಯೇ ಇರಿ ಎಂದು ನೇಮಿಸಿದನು

ಆದುವರೆಗೆ ತಲೆತಪ್ಪಿಸಿಕೊಂಡು ಹೋಗಿದ್ದ ವಿಷಯಲಂಪಟನು ಆ ಕಾಲಕ್ಕೆ ಸರಿಯಾಗಿ ಸತ್ರವನ್ನು ಸೇರಿ ಲಲಿತಾಂಗಿಯು ಎಲ್ಲಿರುವಳೆಂದು ಹುಡುಕಿ ಅವಳಿದ್ದ ಮಂಚದ ಸಮೀಪದಲ್ಲಿ ಒಂದು ಕುರ್ಚಿಯನ್ನು ಹಾಕಿಕೊಂಡು ಕುಳಿತನು

ಧನಕೋಟಿಯು ನೀವೆಲ್ಲರೂ ಇಲ್ಲಿಯೇ ಇರಿ, ನಾನು ಹೋಗಿ ಏನು ಸಮಾಚಾರವೆಂಬುದನ್ನು ವಿಚಾರಿಸಿಕೊಂಡು ಬರುತ್ತೇನೆ ಎಂದು ಅಲ್ಲಿದ್ದವರೆಲ್ಲರಿಗೂ ಹೇಳಿ, ನ್ಯಾಯಸ್ಥಾನಕ್ಕೆ ಹೊರಟನು

ಆಗ ಕದರ್ಥಕನು ದುರ್ಮತಿಗೆ ವಿಷಯಲಂಪಟನನ್ನು ತೋರಿಸಿ ಈ ವಿಪತ್ತಿಗೆ

ಆ ದುರಾತ್ಮನೇ ಕಾರಣ ಎನ್ನಲು ದುರ್ಮತಿಯು ವಿಷಯಲಂಪಟನಿಗೆ ಅಷ್ಟು ಕೆಟ್ಟ ಬುದ್ಧಿ ಇರುವಂತೆ ತೋರುವುದಿಲ್ಲವೆಂದನು.

ಆದರೆ ಆವನಿಗೆ ಬುದ್ಧಿಮಂತನಾದವನು ಒಬ್ಬನೂ ಸಹಾಯಕ್ಕೆ ಇರಲಿಲ್ಲವೇ? ಅದನ್ನು ನೀನು ಮರೆತೆಯೋ?

ನಾನು ಹಾಸ್ಯಕ್ಕಾಗಿ ಹೇಳಿದ ಸಂಗತಿಯು ನಿಜವಾಗಿರುವಂತೆ ತೋರುತಲಿದ. ನೀನು ಆ ಸಂಗತಿಗೂ ಧರ್ಮದೇವನಿಗೂ ಗಂಟು ಹಾಕಿದುದು ತಪ್ಪು

ನೀನು ಆ ದುರ್ವ್ಯಾಪಾರವನ್ನು ಮಾಡದೆ ಇದ್ದಿದ್ದರೆ ಅವನಿಗೆ ಈ ಗತಿ ಬರುತ್ತಿರಲಿಲ್ಲ.

ಇಷ್ಟರಲ್ಲಿಯೇ ಧನಕೋಟಿಯು ನ್ಯಾಯಸ್ಥಾನದಿಂದ ಹಿಂತಿರಿಗಿ ಬಂದನು. ಧರ್ಮದೇವನ ಸಮಾಚಾರವನ್ನು ಕೇಳಲು ಎಲ್ಲರೂ ಅತ್ಯಾತುರರಾಗಿದ್ದುದರಿಂದ ಧನಕೋಟಿಯನ್ನು ಕಂಡ ಕೂಡಲೆ ಎಲ್ಲರೂ ಏಕಕಾಲದಲ್ಲಿಯೇ ಸ್ವಾಮೀ! ವರ್ತಮಾನವೇನು? ಅಪ್ಪಣೆ ಕೊಡಬೇಕು ಎಂದು ಕೇಳಿದರು ಅದಕ್ಕೆ ಅವನು ನಾವೇನೋ ಅವನ ತಪ್ಪು ಅಲ್ಪವಾದುದೆಂದು ಇದ್ದೆವು; ಅಲ್ಲಿ ವಿಚಾರಿಸಿದುದರಲ್ಲಿ ಅವನು ಮಹತ್ತಾದ ರಾಜದ್ರೋಹಕಾರ್ಯವನ್ನು ಮಾಡಿದ್ದಾನೆಂದು ತಿಳಿಯಬಂದಿತು ಎಂದನು

ಲಲಿತಾಂಗಿಯು ಅಷ್ಟು ಹೊತ್ತಿಗೆ ಎಚ್ಚತ್ತಿದ್ದಳು. ಭುಜಂಗಭೂಷಣನು ಅವಳ ಯೋಗಕ್ಷೇಮವನ್ನು ವಿಚಾರಿಸಲು ಅವಳ ಸಮೀಪಕ್ಕೆ ಬಂದಾಗ ವಿಷಯಲಂಪಟನು ಎದ್ದು ದೂರದಲ್ಲಿ ನಿಂತನು ಧನಕೋಟಿಯು ಹೇಳಿದ ಮಾತು ಭುಜಂಗಭೂಷಣ ಲಲಿತಾಂಗಿಯವರ ಕಿವಿಗಳಿಗೆ ಬೀಳಲು ಅವರ ದುಃಖವನ್ನು ಇಷ್ಟಿಷ್ಟೆಂದು ಹೇಳಲು ಅಸಾಧ್ಯವಾಯಿತು

ಕದರ್ಥಕನು ಅವರ ದುಃಖವನ್ನು ನೋಡಿ ಸಹಿಸಲಾರದ ದುರ್ಮತಿಯನ್ನು ಕುರಿತು ಎಲೋ ದುರ್ಮತೀ! ನೀನೂ ವಿಷಯಲಂಪಟನೂ ನೆನ್ನೆಯ ದಿನ ಮಾಡಿದ ಕೃತ್ಯವನ್ನು ನಾನು ಭುಜಂಗಭೂಷಣನಿಗೂ ಲಲಿತಾಂಗಿಗೂ ತಿಳಿಸುವನು ಎಂದು ಅವರಿಬ್ಬರೂ ಇರುವ ಸ್ಥಳಕ್ಕೆ ಹೊರಡಲು, ದುರ್ಮತಿಯು ಅವನ ಕೈಯನ್ನು ಹಿಡಿದು ನಿಲ್ಲಿಸಿಕೊಂಡು ನೀನು ತಿಳಿಗೇಡಿ, ಧರ್ಮದೇವನು ರಾಜದ್ರೋಹವನ್ನು ಮಾಡಿಲ್ಲವೆಂದು ನೀನು ಬಲ್ಲೆಯೋ? ಒಂದು ವೇಳೆ ಆ ತಪ್ಪನ್ನು ಅವನು ಮಾಡಿದ್ದರೆ ನೀನು

ಈಗ ಯತ್ನಿಸಿರುವ ಕೆಲಸದಿಂದ ನೀನಾಗಿಯೇ ನಿನ್ನನ್ನು ಸಿಕ್ಕುಹಾಕಿಕೊಳ್ಳುವೆ ಆ ಮೇಲೆ ನಿನ್ನನ್ನು ಬಿಡಿಸಿಕೊಳ್ಳುವರಾರು ? ನೀನು ಬುದ್ಧಿಮಂತನಾದರೆ ಸುಮ್ಮನೆ ಇರು ಎಂದನು

ಈ ಮಾತನ್ನು ಕೇಳಿದ ಕೂಡಲೆ ಕದರ್ಥಕನಿಗೆ ಉದಾರತ್ವವು ಅಡಗಿ ಸ್ವಾರ್ಥ ಪರತೆಯು ತಲೆಯೆತ್ತಿ ದುರ್ಮತೀ ! ನೀನು ಹೇಳುವುದು ನಿಜ, ಈ ಗೋಜು ನಮ ಗೇತಕ್ಕೆ ಎಂದು ಸುಮ್ಮನಿದ್ದನು

ಲಲಿತಾಂಗಿಯು ತನ್ನ ವಿಪತ್ತನ್ನು ನೆನಸಿಕೊಂಡು ಇಂತಹ ಆಪತ್ಕಾಲದಲ್ಲಿ ತನ್ನಂತೆ ದುಃಖಸಮುದ್ರದಲ್ಲಿ ಮುಳುಗಿ ತನ್ನ ಸಮೀಪದಲ್ಲಿರುವ ಭುಜಂಗಭೂಷಣನನ್ನು ನೋಡಿ ಸ್ವಾಮೀ, ನಮಗೆ ಇಲ್ಲಿನ್ನೇನು ಕೆಲಸ? ಏಳಿ, ಮನೆಗೆ ಹೋಗೋಣ ಎಂದು ಆ ವೃದ್ಧನ ಕೈಯನ್ನು ಹಿಡಿದು ಅವನ ಮನೆಯಲ್ಲಿ ಅವನನ್ನು ಬಿಟ್ಟು ತಾನು ತನ್ನ ಮನೆಗೆ ಹೋದಳು ವಿಷಯಲಂಪಟನು ಅವಳ ಹಿಂದೆಯೇ ಹೊರಟನು. ಮಿಕ್ಕವರೆಲ್ಲರೂ ತಮ್ಮತಮ್ಮ ಮನೆಗಳನ್ನು ಸೇರಿದರು.

ದುರ್ಮತಿಯೂ ಕದರ್ಥಕನೂ ಜತೆಯಲ್ಲಿ ಹೊರಟರು ಧನಕೋಟಿಯು ಮುಂದೆ ಹೋಗುತ್ತಲಿರುವುದನ್ನು ಕಂಡು ದುರ್ಮತಿಯು ಸ್ವಲ್ಪ ಜಾಗ್ರತೆಯಾಗಿ ಹೋಗಿ ಮಹಾಸ್ವಾಮಿ! ಧರ್ಮದೇವನಿಗೆ ಇಂತಹ ವಿಪತ್ತು ಬರುವುದೆಂದು ಆರು ತಾನೇ ಯೋಚಿಸಿದ್ದರು ಎಂದನು.

ದುರ್ಮತಿ ! ನೀನು ನನಗೆ ಹಡಗಿನಲ್ಲಿ ಈ ವಿಷಯವಾಗಿ ಸ್ವಲ್ಪ ಸೂಚಿಸಿದ್ದೆ; ಆ ಸಮಾಚಾರವನ್ನು ಮತ್ತಾರಿಗಾದರೂ ತಿಳಿಸಿದೆಯೋ?

ಮಹಾಸ್ವಾಮಿ! ತಮ್ಮ ಚಿಕ್ಕಪ್ಪನವರು ಏಲಾದ್ವೀಪದಲ್ಲಿರುವ ಚಕ್ರವರ್ತಿ ಯವರ ಜತೆಯಲ್ಲಿ ಸೈನ್ಯದಲ್ಲಿದ್ದುದರಿಂದ ಈಗಿನ ಸರ್ಕಾರಕ್ಕೆ ತಮ್ಮಮೇಲೆ ಕೂಡ ಸ್ವಲ್ಪ ಅನುಮಾನವಿದೆಯೆಂಬುದನ್ನು ನಾನು ಬಲ್ಲೆ. ಹೀಗಿರುವಲ್ಲಿ ಆ ಸಮಾಚಾರವನ್ನು ಮತ್ತಾರಿಗಾದರೂ ತಿಳಿಸಿದರೆ ತಮಗೆ ತೊಂದರೆಬಂದೀತೆಂಬ ಜ್ಞಾನವು ನನಗಿಲ್ಲವೇ?

ನೀನು ಬಲು ಜಾಣ. ಧರ್ಮದೇವನನ್ನು ನೌಕಾಧಿಪತಿಯನ್ನಾಗಿ ಮಾಡಲು ನಿಶ್ಚಯಿಸಿದ್ದಾಗ ಅವನ ಕೆಲಸವನ್ನು ನಿನಗೆ ಕೊಡಬೇಕೆಂದು ಯೋಚಿಸಿ ನಿನ್ನ ವಿಷಯದಲ್ಲಿ ಅವನಿಗೆ ಇರತಕ್ಕ ಅಭಿಪ್ರಾಯವನ್ನು ಕೇಳಿ ತಿಳಿದುಕೊಂಡಿದ್ದೆ.

ಅವನು ನನ್ನ ವಿಷಯದಲ್ಲಿ ಆವ ಅಭಿಪ್ರಾಯವನ್ನು ಕೊಟ್ಟನು?

ತನಗೂ ನಿನಗೂ ಮನಸ್ತಾಪವಿದ್ದರೂ ಯಜಮಾನರಿಗೆ ಇಷ್ಟವಾದವರು ತನಗೂ ಇಷ್ಟರೆಂದು ಹೇಳಿದನು

ಆಹಾ! ಎಂಥ ಕಪಟಿಯೆಂದು ದುರ್ಮತಿಯು ತನ್ನೊಳು ತಾನೆಂದುಕೊಂಡನು.

ಹಿಂದೆ ಬರುತ್ತಲಿದ್ದು ಈ ಸಂವಾದವನ್ನು ಕೇಳಿದ ಕದರ್ಥಕನು ಧರ್ಮದೇವನು ಉತ್ಕೃಷ್ಟಹೃದಯನು ಮನಸ್ತಾಪವಿದ್ದರೂ ದುರ್ಮತಿಯ ಅಭಿವೃದ್ಧಿಗೆ ಕಲ್ಲು ಹಾಕಲಿಲ್ಲವೆಂದುದಕ್ಕೆ ಧನಕೋಟಿಯು ಹಿಂತಿರುಗಿ ನೋಡಿ ಅದು ಸರಿ ಎಂದನು

ದುರ್ಮತಿಯು ಈ ಮಾತು ಕಿವಿಗೆ ಬೀಳದವನಂತೆ ಧನಕೋಟಿಯನ್ನು ನೋಡಿ ಮಹಾಸ್ವಾಮೀ! ನಮ್ಮ ಜಯಲಕ್ಷ್ಮಿಯ ಪ್ರಯಾಣವು ಇನ್ನೂ ಮೂರು ತಿಂಗಳು ಸಾವಕಾಶವಾಗುವುದು ಅಷ್ಟರೊಳಗೆ ಧರ್ಮದೇವನು ಸೆರೆಯಿಂದ ಬಿಡುಗಡೆಯಾಗಿ ಬರುವನೆಂದು ಕೋರುತ್ತೇನೆ ಎನಲು, ಧನಕೋಟಿಯು ಅದಕ್ಕೇನು ಸಂದೇಹ? ಅವನು ಆವಾಗ ಬಂದರೂ ನೌಕಾಧಿಪತ್ಯವು ಸಿದ್ಧವಾಗಿರುವುದು ಅಲ್ಲಿಯವರೆಗೆ ಏನಮಾಡೋಣವೆಂದು ಯೋಚಿಸುತಲಿದ್ದೇನೆ ಎಂದನು

ತಮ್ಮ ಸೇವಕನು ನೌಕಾಧಿಪತ್ಯಕ್ಕೆ ಬೇಕಾದ ಯೋಗ್ಯತೆಯನ್ನು ಸಂಪಾದಿಸಿದ್ದಾನೆ. ಮತ್ತೊಬ್ಬನಿಗೆ ಆ ಕೆಲಸವನ್ನು ಕೊಡುವುದಕ್ಕಿಂತ ತಮ್ಮ ಸೇವಕನಿಗೆ ಕೊಟ್ಟರ ಒಂದು ಅನುಕೂಲವುಂಟು. ನಾವು ಕೋರುವಂತೆ ಧರ್ಮದೇವನು ಜಾಗ್ರತೆಯಾಗಿ ಸೆರೆಯಿಂದ ಬಂದರೆ ಒಡನೆ ಆವ ಪರಿವರ್ತನವೂ ಇಲ್ಲದೆ ಅವನು ನೌಕಾಧಿಪನಾಗಬಹುದು, ನಾನೂ ನನ್ನ ಕೆಲಸವನ್ನು ನೋಡಿಕೊಳ್ಳಬಹುದು.

ನೀನು ಹೇಳಿದುದು ಬಹು ಅನುಕೂಲವಾದ ಏರ್ಪಾಡು ಈ ದಿವಸದ ದುರದೃಷ್ಟಕ್ಕಾಗಿ ನಮ್ಮ ವ್ಯಾಪಾರಕ್ಕೆ ತೊಂದರೆಯನ್ನು ಮಾಡಿಕೊಳ್ಳುವುದು ಸರಿಯಲ್ಲ. ಆದುದರಿಂದ ನೀನು ಈಕ್ಷಣ ಹೋಗಿ ಜಯಲಕ್ಷ್ಮಿಯ ನೌಕಾಧಿಪತ್ಯವನ್ನು ವಹಿಸು

ಸ್ವಾಮಿ! ನನಗೆ ಧರ್ಮದೇವನನ್ನು ನೋಡಲು ಆಸೆಯಿದೆ

ಅವನನ್ನು ನೋಡಬೇಕಾಗಿದ್ದರೆ ನ್ಯಾಯಾಧಿಪನ ಅಪ್ಪಣೆಯಾಗಬೇಕು. ವಲ್ಲಭದೇವನನ್ನು ವಿಚಾರಿಸಿ, ಧರ್ಮದೇವನನ್ನು ನೋಡುವುದಕ್ಕೆ ಅನುಕೂಲವಾಗುವುದೆಂದು ಹೇಳಿದರೆ ನಿನಗೆ ತಿಳಿಸುತ್ತೇನೆ

ಸ್ವಾಮಿ! ನ್ಯಾಯಾಧಿಪತಿಯಾದ ವಲ್ಲಭದೇವನು ಈಗಿನ ರಾಜನ ಆಶ್ರಯವನ್ನು ಬಲವಾಗಿ ಮಾಡುತ್ತಲಿದ್ದಾನೆ. ಆತನಿಂದ ನಮಗೆ ಆವ ಸಹಾಯವೂ ಆಗಲಾರದೆಂದು ತೋರುತ್ತಲಿದೆ.

ಅವನು ರಾಜಾನುವರ್ತಿಯಾದರೂ ಒಳ್ಳೆಯವನೆಂದು ಕೇಳಿದೇನೆ ಆದುದರಿಂದ ಅವನು ನಮಗೆ ಅನುಕೂಲವನ್ನು ಮಾಡಿಕೊಡದೆ ಇರನು.

ಸ್ವಾಮಿ! ಅವನು ಮಹತ್ವಾಕಾಂಕ್ಷೆಯುಳ್ಳವನು. ಅಂಥವರು ಆವಾಗಲೂ ತಮ್ಮ ಅಭಿವೃದ್ಧಿಯನ್ನೇ ಬಯಸಿ ನ್ಯಾಯಾನ್ಯಾಯಗಳನ್ನು ನೋಡದೆ ಕೆಲಸಮಾಡುವರು

ಪ್ರಯತ್ನಮಾಡಿ ನೋಡೋಣ ನೀನು ರೇವಿಗೆ ಹೋಗು, ನಾನು ವಲ್ಲಭ ದೇವನನ್ನು ನೋಡಿ ಬರುವೆನು ಎಂದು ಧನಕೋಟಿಯು ನ್ಯಾಯಾಸ್ಥಾನದ ಕಡೆಗೆ ಹೊರಟನು

ಅವನು ಆತ್ತಕಡೆ ಹೊರಟುಹೋದ ಮೇಲೆ ದುರ್ಮತಿಯು ಕದರ್ಥಕನನ್ನು ನೋಡಿ ಎಲೋ! ಧರ್ಮದೇವ' ತಪ್ಪು ಎಷ್ಟುಪ್ರಬಲವಾದುದು ನೋಡಿದೆಯೋ? ಅವನಿಗೆ ಸಹಾಯಮಾಡಬೇಕೆಂಬ ಆಸೆಯು ನಿನಗಿನ್ನೂ ಇರುವುದೋ ಎಂದನು.

ನನಗೆ ಆ ಯೋಚನೆಯು ಖಂಡಿತವಾಗಿಯೂ ಇಲ್ಲ.

ನಾವಿಬ್ಬರೂ ನೆಮ್ಮದಿಯಾಗಿರಬೇಕಾದರೆ ಈ ವಿಷಯವಾವುದೂ ತಿಳಿಯದವರಂತೆ ಇರಬೇಕು—ಹಾಗೆಯೇ ಆಗಲಿ ಎಂದು ಕದರ್ಥಕನು ತನ್ನಮನೆಗೆ ಹೋದನು ದುರ್ಮತಿಯು ರೇವಿನ ದಾರಿಯನ್ನು ಹಿಡಿದು ಅತ್ಯುತ್ಸಾಹದಿಂದ ಹೋಗುತ ಇದು ವರೆಗೂ ನನ್ನ ಯೋಚನೆಯಂತೆ ಕೆಲಸಗಳು ಕೈಗೂಡಿದುವು. ಈ ಮೂಢನಾದ ಕದರ್ಥಕನು ಬಾಯಿ ಮುಚ್ಚಿಕೊಂಡಿದ್ದರೆ ನೌಕಾಧಿಪತ್ಯವು ನನಗೇ ಆಗುವುದು ಎಂದು ಯೋಚಿಸುತ್ತ ರೇವಿಗೆ ಹೋಗಿ ದೋಣಿಯಲ್ಲಿ ಕುಳಿತು ಜಯಲಕ್ಷ್ಮಿಯನ್ನು ಸೇರಿದನು

---

## ಏಳನೆಯ ಅಧ್ಯಾಯ

### ನ್ಯಾಯಾಧಿಪತಿಯು.

ಇತ್ತ ಸತ್ರದಲ್ಲಿ ಧರ್ಮದೇವನ ಮದುವೆಯೂಟವು ನಡೆಯುತ್ತಲಿದ್ದಾಗ ಅತ್ತ ಒಬ್ಬ ದೊಡ್ಡಮನುಷ್ಯನ ಮನೆಯಲ್ಲಿ ಮತ್ತೊಂದು ಮದುವೆಯೂಟವು ನಡೆಯುತ್ತ

ಲಿದ್ದಿತು. ಧರ್ಮದೇವನ ಮದುವೆಯೂಟಕ್ಕೆ ವಿಶೇಷವಾಗಿ ಸೈನಿಕರೂ ನಾವಿಕರೂ ಸೇರಿದ್ದರು. ಶ್ರೀಮಂತನ ಮನೆಯ ಮದುವೆಗೆ ಬಂದಿದ್ದವರೆಲ್ಲರೂ ಶ್ರೀಮಂತರೇ ರಾಜ್ಯಭ್ರಷ್ಟನಾದ ಚಕ್ರವರ್ತಿಯ ಹತ್ತಿರ ಅಧಿಕಾರದಲ್ಲಿದ್ದು ಮನಸ್ಸೊಡಂಬಡದೆ ಅದನ್ನು ಬಿಟ್ಟುಹೋದ ನ್ಯಾಯಾಧಿಪತಿಗಳೂ, ಅವನ ಸೈನ್ಯವನ್ನು ಬಿಟ್ಟು ಈಗಿನ ರಾಜನ ಸೈನ್ಯದಲ್ಲಿ ದೊಡ್ಡ ದೊಡ್ಡ ಅಧಿಕಾರಗಳನ್ನು ಹೊದ್ದಿದ್ದ ಸೇನಾಪತಿಗಳೂ, ಅವನನ್ನು ದ್ವೇಷಿಸುವುದರಲ್ಲಿ ಬದ್ಧಕಂಕಣರಾದವರ ಮನೆಗಳಲ್ಲಿ ಹುಟ್ಟಿ ಶಿಕ್ಷಿತರಾದ ತರುಣ ತರುಣಿಯರೂ ಅಲ್ಲಿ ನೆರೆದಿದ್ದರು. ಭೋಜನಕಾಲದಲ್ಲಿ ರಾಜಕೀಯವಿಷಯ ವಾದ ಮಾತುಗಳೇ ವಿಶೇಷವಾಗಿ ನಡೆಯುತ್ತಲಿದ್ದುವು ಅಮರದೇಶದಂತೆ ಆರೇಳು ದೇಶಗಳನ್ನು ಜಯಿಸಿ, ಏಕಚ್ಛತ್ರಾಧಿಪತ್ಯವನ್ನು ಮಾಡುತಲಿದ್ದು ಈಗ ಏಲಾದ್ವೀಪ ದಲ್ಲಿ ಸೆರೆಯಲ್ಲಿರುವಂತೆ ಚಕ್ರವರ್ತಿಯು ವಸಿಸುತ್ತಿರುವನು, ಅವನಿಗೆ ಪುನಃ ಅಮರ ದೇಶವು ಸಿಕ್ಕಲಾರದು ಎಂದು ಕೆಲವರು ಮಾತನಾಡುತಲಿದ್ದರು, ಕೆಲವರು ಚಕ್ರ ವರ್ತಿಯನ್ನು ದೂಷಿಸುತ್ತಲೂ ದೊರೆಯಾದ ಜಯಸಿಂಹನನ್ನು ಭೂಷಿಸುತ್ತಲೂ ಇದ್ದರು, ಮತ್ತೆ ಕೆಲವರು ಚಕ್ರವರ್ತಿಯ ಕಾಲದಲ್ಲಿ ನಡೆಯುತ್ತಲಿದ್ದ ಅನ್ಯಾಯಗಳನ್ನೂ ಈಗ ನಡೆಯುತ್ತಲಿರುವ ನ್ಯಾಯಗಳನ್ನೂ ಚರ್ಚಿಸುತ ಸಂತೋಷಪಡುತ್ತಲಿದ್ದರು.

ಈ ಸಮುದಾಯದಲ್ಲಿ ರಾಜಪೂಜ್ಯನಾಗಿ ಅನೇಕಮರ್ಯಾದಗಳನ್ನೂ ಬಿರುದ ಹೊದ್ದಿ ಹೆಸರುಗೊಂಡಿದ್ದ ಶಾಂತವೀರನೆಂಬ ಒಬ್ಬ ದೊಡ್ಡಮನುಷ್ಯನು ತನ್ನ ಮಗ ಳಾದ ರೇಣುಕೆಯೆಂಬವಳನ್ನು ಅದೇ ಊರಿನಲ್ಲಿ ನ್ಯಾಯಾಧಿಪನಾಗಿದ್ದ ವಲ್ಲಭದೇವನಿಗೆ ಕೊಟ್ಟು ಮದುವೆಮಾಡಬೇಕೆಂದಿದ್ದನು. ಈಗ ಇಲ್ಲಿ ನಡೆಯುತ್ತಲಿರುವುದೇ ರೇಣುಕೆಯ ಮದುವೆಯ ಊಟವು ಊಟವು ಸಂಭ್ರಮವಾಗಿ ನಡೆಯಿತು. ಎಲ್ಲರೂ ತಾಂಬೂಲಕ್ಕೆ ಸೇರುತ್ತಲೆ, ಶಾಂತವೀರನದ್ದು ರಾಜಸನ್ಮಾನಾರ್ಥವಾಗಿ ಒಂದು ತಾಂಬೂಲವನ್ನೆತ್ತಿ ಹಿಂದೆ ನಡೆದ ರಾಜ್ಯಪರಿವರ್ತನೆಗಳು ನಮ್ಮನ್ನು ಬಲುಮಟ್ಟಿಗೆ ಪೀಡಿಸಿದುವು ಕ್ಷುದ್ರ ದೇವತೆಗಳೆಲ್ಲವೂ ಕೆಲವುಕಾಲ ಶಕ್ತಿಯುಳ್ಳುವುಗಳಾಗಿದ್ದು ಕಡೆಗೆ ಜಗದೀಶನ ಮುಂದ ಹೇಗೆ ಅಪಜಯವನ್ನು ಹೊದ್ದಿ ಓಡುವುವೋ ಹಾಗೆಯೇ ಚಕ್ರವರ್ತಿಯು ನಮ್ಮ ರಾಜನ ಮುಂದೆ ಶಕ್ತಿರಹಿತನಾಗಿ ರಾಜ್ಯವಂ ಕಳೆದುಕೊಂಡು, ಏಲಾದ್ವೀಪವೆಂಬ ಮೂಲೆಯನ್ನು ಸೇರಿದನು ಇಂಥಾ ಕ್ಷುದ್ರದೇವತೆಯನ್ನು ಭಜಿಸುವರು ಆದೇವತೆಯ

ಗತಿಯನ್ನೇ ಹೊದ್ದುವರು. ನಮ್ಮ ರಾಜನಾದರೋ! ಸೂರ್ಯನಂತೆ ತನ್ನ ರಾಜ್ಯ ದಲ್ಲಿರತಕ್ಕವರನ್ನೆಲ್ಲಾ ತನ್ನ ಪ್ರತಾಪದಿಂದ ರಕ್ಷಿಸುತ್ತಿರುವನಲ್ಲದೆ ಅವರವರ ಯೋಗ್ಯ ತಾನುಸಾರವಾಗಿ ಪ್ರಜೆಗಳಿಗೆ ಐಶ್ವರ್ಯಾದಿ ಬಹುಮಾನಗಳನ್ನು ಕೊಟ್ಟು ಆನಂದ ಪಡಿ ಸುತ್ತಲಿದಾನೆ ಇಂಥವನಿಗೆ ಮಂಗಳವಾಗಲಿ ಎಂದನು ಎಲ್ಲರೂ "ತಥಾಸ್ತು" ಎಂದರು

ಎಲ್ಲರಿಗೂ ತಾಂಬೂಲವನ್ನು ಕೊಡುತ್ತಲಿರುವಾಗ ಅಲ್ಲಿದ್ದ ಸಾಲ್ವನೆಂಬ ಮತ್ತೊಬ್ಬ ದೊಡ್ಡಮನುಷ್ಯನು ಸ್ವಾಮೀ! ಶಾಂತವೀರರೇ! ತಾವು ತಮ್ಮ ಮಗಳಿಗೆ ಗಂಡನನ್ನಾಗಿ ವರಿಸಿರುವ ವಲ್ಲಭದೇವನ ತಂದೆಯಾದ ದೀನನಾಥನೂ ಕ್ಷುದ್ರದೇವತೆ ಯನ್ನು ಭಜಿಸುತ್ತಲಿದ್ದವನಲ್ಲವೇ? ವಲ್ಲಭದೇವನ ಮುಂದೆ ತಾವು ಹೀಗೆ ಹೇಳ ಬಹುದೇ? ಎನ್ನಲು, ಅದಕ್ಕೆ ವಲ್ಲಭದೇವನು ಸ್ವಾಮೀ! ಸಾಲ್ವರೆ! ಕ್ಷುದ್ರದೇವತೆ ಗಳಿಂದಲೂ ಲೋಕಕ್ಕೆ ಉಪಕಾರವುಂಟು ಎಂದನು.

ಏನಯ್ಯಾ ವಲ್ಲಭದೇವ! ರಾಜ್ಯಪರಿವರ್ತನದ ಮಾತುಗಳನ್ನಾಡುತ್ತಲಿದ್ದೀಯೆ? ಕ್ಷುದ್ರದೇವತೆಯು ಎಂದಿದ್ದರೂ ಕ್ಷುದ್ರವನ್ನೇ ಮಾಡುವುದು. ಅದನ್ನು ಭಜಿಸಿದರೆ ಅನರ್ಥಕ್ಕೆ ಕಾರಣವಾಗುವುದೆಂದು ನೀನು ಅರಿಯೆಯಾ?

ಸ್ವಾಮೀ! ಕ್ಷುದ್ರದೇವತೆಯು ಒಳ್ಳೆಯದನ್ನು ಮಾಡುವುದೆಂದು ನಾನು ಹೇಳ ಲಿಲ್ಲ. ರಾಜ್ಯವಿಚ್ಯುತನಾದ ಚಕ್ರವರ್ತಿಯೆಂಬ ಕ್ಷುದ್ರದೇವತೆಯನ್ನು ಸೇವೆಮಾಡಿ ದುದರಿಂದ ನನ್ನ ತಂದೆಯು ಬಹು ಕಷ್ಟಗಳನ್ನು ಅನುಭವಿಸಿರುವನು. ಈ ಅನುಭವವು ಆ ಕ್ಷುದ್ರದೇವತೆಯ ಸೇವೆಯಿಲ್ಲದ ಬರುತಿರಲಿಲ್ಲ. ನನ್ನ ತಂದೆಯು ಈಗ ಅದರ ಹಂಬಲನ್ನು ಬಿಟ್ಟಿರುವನೋ ಇಲ್ಲವೋ ತಿಳಿಯದು. ನಾನೇನೋ ಆವಾಗಲೂ ಆವ ವಿಧದಲ್ಲೂ ಅವನ ವ್ಯಾಪಾರಗಳನ್ನು ಕಂಡವನಲ್ಲ ಆ ಮುದಿಮರವನ್ನು ಮರೆತು ಬಿಡಿರಿ; ಅದರ ಜೀವರಸವು ಒಣಗುತ್ತ ಬಂದಿತು ಇನ್ನು ಸ್ವಲ್ಪ ಕಾಲದಲ್ಲಿಯೇ ಆ ಮರವು ಅಗ್ನಿದಗ್ಧವಾಗಿ ಹೋಗುವುದು. ಆ ಮರದಿಂದ ಹೊರಟಿದ್ದರೂ ಈ ಕೊಂಬೆಯು ಪ್ರತ್ಯೇಕವಾದ ಮರವೆಂದೇ ತಿಳಿಯಿರಿ ಜಯಸಿಂಹರಾಜನಲ್ಲಿ ಆವಾ ಗಲೂ ಸ್ಥಿರಭಕ್ತಿಯುಳ್ಳದಾಗಿರುವುದರಿಂದ ಈ ಶಾಖೆಯು ನಿಮ್ಮ ಅಭಿಪ್ರಾಯಕ್ಕೆ ವಿರೋಧವಾಗಿ ಎಂದಿಗೂ ನಡೆಯದು

ಸಾಧು, ಸಾಧು ಎಂದು ಎಲ್ಲರೂ ಏಕಕಂಠವಾಗಿ ಘೋಷಿಸಿದರು

ಹಿಂದೆ ನಡೆದುವುಗಳನ್ನೆಲ್ಲ ನಾವು ಮರೆತು, ವಲ್ಲಭದೇವನು ಮುಂದೆ ದೃಢ ಸಂಕಲ್ಪನಾಗಿರುವನೆಂದು ಆಶಿಸೋಣ , ನಾವೆಲ್ಲರೂ ವಲ್ಲಭದೇವನು ದೃಢವಾದ ರಾಜ ಭಕ್ತಿಯುಳ್ಳವನೆಂದು ಜಯಸಿಂಹರಾಜನಿಗೆ ನಂಬುಗೆಗೊಟ್ಟಿರುವೆವಾದುದರಿಂದ ಇವನು ನಮ್ಮ ಮಾತನ್ನುಳಿಸುವುದಕ್ಕಾಗಿ ತನ್ನ ನಡತೆಯನ್ನು ಸರಿಯಾಗಿ ನೋಡಿಕೊಳ್ಳಬೇಕು. ಎಂದು ಸಾಲ್ವನು ಹೇಳಿದನು. ಅದಕ್ಕೆ ವಲ್ಲಭದೇವನು ಸ್ವಾಮೀ ! ಹಿಂದಿನ ನ್ಯೂನತೆಗಳಿಗಾಗಿ ಈಗ ನನ್ನ ತಂದೆಯು ವ್ಯಸನಪಡುತ್ತಲಿರುವಂತೆ ತೋರುತ್ತಲಿದೆ. ಆದುದರಿಂದಲೇ ಅವನು ನಮ್ಮ ಜಯಸಿಂಹರಾಜನಲ್ಲಿ ಭಕ್ತಿವಿಶ್ವಾಸವನ್ನು ಇತರರಿಗಿಂತ ಅಧಿಕವಾಗಿ ಇಟ್ಟಿರಬೇಕು ಎಂದು ಹೇಳಿ ತನ್ನ ಮಾತಿನಿಂದ ಆರಾರಿಗೆ ಅವಾವ ಅಭಿಪ್ರಾಯಗಳು ಉಂಟಾದುವು ಎಂಬುದನ್ನು ಅರಿಯಲೋಸುಗ ಎಲ್ಲರ ಮುಖವನ್ನೂ ನೋಡಿದನು. ಎಲ್ಲರೂ “ ಭಲೆ ಭಲೆ ” ಎಂದು ಅವನನ್ನು ಶ್ಲಾಘಿಸಿದರು.

ಆಗ ಸಾಲ್ವನು ವಲ್ಲಭದೇವನನ್ನು ನೋಡಿ ಕೆಲವು ದಿವಸಗಳ ಹಿಂದೆ ರಾಜಸಮ್ಮುಖದಲ್ಲಿ ನಮ್ಮ ಶಾಂತವೀರನ ಮಗಳ ಮದುವೆಯ ಪ್ರಸ್ತಾಪವು ಬಂದಿದ್ದಿತು. ಆಗ ಅವರು ವಲ್ಲಭದೇವನಾರು ? ದೀನನಾಥನ ಮಗನಲ್ಲವೇ ಎಂದು ಕೇಳಲು ಮಹಾಪ್ರಭೋ ! ಅವನು ತಂದೆಯಂತಲ್ಲ, ಯೋಗ್ಯನು. ಈಗ ಈ ರಾಜ್ಯದಲ್ಲಿರುವ ಎರಡು ಪಂಗಡದವರನ್ನು ಸೇರಿಸಿ ಸಮಾಧಾನಪಡಿಸುವುದು ಯುಕ್ತವೆಂದು ಕಾಣುತ್ತದೆ ಎನ್ನಲು ರಾಜರು ವಲ್ಲಭದೇವ, ವಲ್ಲಭದೇವ ಎಂದು ಎರಡು ಮೂರಾವೃತ್ತಿ ಹೇಳಿ ಅವನು ಇನ್ನೂ ಚಿಕ್ಕವಯಸ್ಸಿನವನು , ಮುಂದೆ ಅಭಿವೃದ್ಧಿಗೆ ಬರತಕ್ಕವನು; ಬುದ್ಧಿಶಾಲಿಯಾಗಿ ನಮ್ಮಲ್ಲಿ ಪೂರ್ಣಭಕ್ತಿಯುಳ್ಳವನಾಗಿದ್ದರೆ ಅವನ ಯೋಗಕ್ಷೇಮವನ್ನು ನಾವು ನೋಡಿಕೊಳ್ಳುವೆವು ಎಂದುದಕ್ಕೆ, ನಾನು ಮಹಾಸ್ವಾಮೀ ! ಅವನಿಗೆ ತಮ್ಮಲ್ಲಿ ಪರಿಪೂರ್ಣವಾದ ಭಕ್ತಿಯಿದೆ, ಎಂದು ಹೇಳಿದ ಮೇಲೆ ಈ ಮದುವೆಗೆ ಸಮ್ಮತಿಸಿದರು.

ಸ್ವಾಮೀ ಸಾಲ್ವರೆ ! ಅಲ್ಪನಾದ ನನ್ನನ್ನು ರಾಜರು ಅಷ್ಟುಮಟ್ಟಿಗೆ ವಿಚಾರಿಸಿದರೋ ?

ಅವರು ಹೇಳಿದ ಮಾತನ್ನೇ ಈಗ ನಾನು ಹೇಳಿದುದು ಎಂದು ಸಾಲ್ವನು ಹೇಳುತ್ತಲೆ ಅದು ನಿಜವೆಂದು ಶಾಂತವೀರನು ಒಪ್ಪಿಕೊಂಡನು. ಆಗ ವಲ್ಲಭದೇವನು ಇಷ್ಟು

ಮಟ್ಟಿಗೆ ರಾಜರ ಕೃಪೆ ನನ್ನ ಮೇಲೆ ಇರುವಾಗ ನಾನು ಅವರಿಗೋಸ್ಕರ ಅವುದನ್ನು ತಾನೇ ಮಾಡಲಾರೆನು, ಎಂದನು.

ಅದನ್ನು ಶಾಂತವೀರನು ಕೇಳಿ ಸಂತೋಷಪಟ್ಟು ಈಗ ನಿನಗೆ ಇರುವ ಅಭಿಪ್ರಾಯವು ಸರಿಯಾದುದು, ಈಗ ರಾಜದ್ರೋಹಿಗಳಾರಾದರೂ ಸಿಕ್ಕಿದರೆ ಅವರನ್ನು ಸರಿಯಾಗಿ ದಂಡಿಸಿ ಮುಂದೆ ಅಂಥಾ ದ್ರೋಹಗಳು ನಡೆಯದಂತೆ ಮಾಡುತ್ತೀಯೆ ಎಂಬ ನಂಬುಗೆಯು ನನಗುಂಟಾಯಿತು ಎಂದು ಹೇಳಿ ತನ್ನ ಮಗಳು ರೇಣುಕೆಯ ಮುಖವನ್ನು ನೋಡಿದನು.

ಆಗ ಅವಳು ಅಪ್ಪಾ ನಿನ್ನ ಕೋರಿಕೆಯು ಎಂದಿಗೂ ನೆರವೇರಬೇಡವೆಂದು ನಾನು ದೇವರನ್ನು ಪ್ರಾರ್ಥಿಸುವೆನು. ರಾಜದ್ರೋಹಿಗಳಿಗೆ ಮಾಡುವ ದಂಡನೆಗಳನ್ನು ಕೇಳಿದರೆ ನನಗೆ ಸಂಕಟವಾಗುವುದು. ನ್ಯಾಯಾಧಿಪತಿಗಳ ಕೈಗೆ ಅಲ್ಪಾಪರಾಧಿಗಳು ಮಾತ್ರ ಸಿಕ್ಕಲಿ ಎಂದಳು

ಅಮ್ಮಾ ಮಗುವೇ! ಮನುಷ್ಯರಿಗುಂಟಾಗುವ ಬುದ್ಧಿರೋಗಕ್ಕೆ ನ್ಯಾಯಾಧಿಪತಿಗಳು ವೈದ್ಯರು. ವೈದ್ಯರು ಮನುಷ್ಯರ ಶಾರೀರಕ ರೋಗಗಳಿಗೆ ಔಷಧವಂ ಕೊಟ್ಟು ವಾಸಿಮಾಡುವರು. ಅವರನ್ನು ಅಲ್ಪರೋಗಗಳಿಗೆ ಮಾತ್ರ ಚಿಕಿತ್ಸೆಮಾಡಿ, ಪ್ರಬಲವಾದ ರೋಗಗಳಿಗೆ ಚಿಕಿತ್ಸೆ ಮಾಡುವ ಅವಶ್ಯಕವಿಲ್ಲವೆಂದು ಹೇಳಿದಂತಾಯಿತು. ಪ್ರಬಲ ರೋಗಗಳನ್ನು ವಾಸಿಮಾಡಿದರಲ್ಲವೇ ಜನಗಳಿಗೆ ಉಪಕಾರವೂ ವೈದ್ಯರಿಗೆ ಖ್ಯಾತಿಯೂ ಲಾಭವೂ ಬರುವುವು.

ಶಾಂತವೀರನು ಈರೀತಿ ಹೇಳುತ್ತಲಿರುವ ವೇಳೆಗೆ ಸರಿಯಾಗಿ ಒಬ್ಬ ಭೃತ್ಯನು ವಲ್ಲಭದೇವನ ಸಮೀಪಕ್ಕೆ ಬಂದು ಅವನ ಕಿವಿಯಲ್ಲಿ ಏನನ್ನೋ ಹೇಳಿದನು. ಒಡನೆಯೇ ವಲ್ಲಭದೇವನು ಎದ್ದು ತನ್ನ ಮಾವನ ಅಪೇಕ್ಷೆಯು ನೆರವೇರುವ ಸಮಯ ವೊದಗಿತೆಂಬ ಅಭಿಪ್ರಾಯವನ್ನು ಮುಖಭಾವದಿಂದ ಸೂಚಿಸುತ್ತ ನನಗೆ ಸ್ವಲ್ಪ ಅವಸರದ ಕೆಲಸವಿದೆ, ಹೊರಗೆ ಹೋಗಿ ಬರುವೆನು ಎಂದು ಹೊರಗೆ ಹೋಗಿ ನಿಮಿಷ ಮಾತ್ರದಲ್ಲಿ ಹಿಂದಿರುಗಿ ಬಂದು ನೀವೆಲ್ಲರೂ ಪ್ರಬಲಜಾಡ್ಯಕ್ಕೆ ಚಿಕಿತ್ಸೆ ಮಾಡಿದರೆ ಖ್ಯಾತಿಯೂ ಲಾಭವೂ ಬರುವುದೆಂದು ಈಗತಾನೇ ಹೇಳುತಲಿದ್ದಿರಿ. ಅಂಥಾ ಜಾಡ್ಯವು ಈಗ ಒಂದು ಅನುಕೂಲವಾಗಿ ದೊರೆತಿದೆ. ಖ್ಯಾತಿಯನ್ನೂ ಲಾಭವನ್ನೂ

ನಾನು ಕೋರುವನಲ್ಲ, ಆದರೂ ಈ ಜಾಡ್ಯಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡುವೆನು ಎಂದು ಹಸನ್ಮುಖನಾಗಿ ಹೇಳಿದನು.

ಆಗ ರೇಣುಕೆಯು ವಲ್ಲಭದೇವನನ್ನು ನೋಡಿ ತಮ್ಮ ಮಾತು ನನಗೆ ಚೆನ್ನಾಗಿ ತಿಳಿಯಲಿಲ್ಲ ಎನ್ನಲು, ನಾವು ಪರಿಹಾಸ್ಯವಾಗಿ ಹೇಳುತಲಿದ್ದುದು ನಿಜವಾಗಿ ಪರಿಣಮಿಸಿತು, ರಾಜದ್ರೋಹಕಾರ್ಯವೊಂದು ನಡೆದಿದೆ ಎಂದನು

ಅಯ್ಯೋ ! ಕಷ್ಟ, ಕಷ್ಟ, ಎಂದು ಅವಳು ಹೇಳಿದಳು. ಕೂಡಲೇ ಅವಳ ಮುಖವು ಬಿಳುಪಾಯಿತು; ಹಾಗೆಯೇ ಸ್ವಲ್ಪ ಸಮಾಧಾನವನ್ನು ತಾಳಿ ಆಕೆಯು ಅದು ನಿಜವೋ ? ಎಂದಳು.

ಇಗೋ ನನಗೆ ಬಂದಿರುವ ಕಾಗದವನ್ನು ಓದಿ ನೋಡು ಎಂದು ವಲ್ಲಭದೇವನು ತನ್ನಲ್ಲಿದ್ದ ಕಾಗದವನ್ನು ರೇಣುಕೆಯ ಕೈಗೆ ಕೊಟ್ಟನು

ಆ ಕಾಗದದಲ್ಲಿ ಈ ತೆರದಿಂದ ಬರೆದಿದ್ದಿತು —

ವಕೀಲ ಮಹಾಶಯರ ಸಮಕ್ಷಮಕ್ಕೆ. ಸರ್ಕಾರದ ಅಭಿಮಾನಿಯಾದವನೊಬ್ಬನು ವಿನಯಪೂರ್ವಕವಾಗಿ ತಿಳಿಯಪಡಿಸುವುದೇನೆಂದರೆ— ಈ ದಿನ ರೇವಿಗೆ ಬಂದ ಜಯಲಕ್ಷ್ಮಿಯೆಂಬ ನಾವೆಯಲ್ಲಿ ನೌಕಾಧಿಪತಿಯ ಸಹಾಯಕನಾದ ಧರ್ಮದೇವನೆಂಬುವನು ಏಲಾದ್ವೀಪಕ್ಕೆ ಹೋಗಿ, ಅಲ್ಲಿಯ ರಾಕ್ಷಸನಿಗೆ ಒಂದು ಲೇಖನವನ್ನು ಕೊಟ್ಟು ಅಮರದೇಶದಲ್ಲಿರುವ ಆ ರಾಕ್ಷಸನ ಗೂಢಚಾರನೊಬ್ಬನಿಗೆ ಮತ್ತೊಂದು ಲೇಖನವನ್ನು ತಂದಿರುವನು. ಆ ಲೇಖನವು ಅವನಲ್ಲಿಯೋ, ಅವನ ಮನೆಯಲ್ಲಿಯೋ, ನಾವೆಯಲ್ಲಿಯೋ ಇರುವುದು ಧರ್ಮದೇವನನ್ನು ಸೆರೆ ಹಿಡಿದು ಹುಡುಕಿದರೆ ಅದು ಸಿಕ್ಕುವುದು

ಅದನ್ನು ಓದಿ ರೇಣುಕೆಯು ಇದು ಮೂಕಅರ್ಜಿ, ಊರಿಲ್ಲ, ಬರೆದವರ ಹೆಸರಿಲ್ಲ, ನಿಮ್ಮ ಹೆಸರಿಗೆ ಬರೆದಿಲ್ಲ ಎಂದು ಹೇಳಿ ಅದನ್ನು ವಲ್ಲಭದೇವನ ಕೈಯಲ್ಲಿ ಕೊಟ್ಟಳು

ಆದರೇನು ? ಸರ್ಕಾರದ ವಕೀಲನು ಊರಲ್ಲಿ ಇಲ್ಲವಾದುದರಿಂದ ನಾನೇ ಅವನ ಕೆಲಸವನ್ನು ನೋಡುತ್ತಲಿದ್ದೇನೆ

ಅಪರಾಧಿಯು ಎಲ್ಲಿ ?

ಸೆರೆಯಲ್ಲಿ ಈ ಅರ್ಜಿಯಲ್ಲಿ ಹೇಳಿರುವ ಕಾಗದವು ಸಿಕ್ಕಿದರ ಅಪರಾಧಿಯು ಯಮ-ಲೋಕದಲ್ಲಿ ಇರುವನು

ಆ ಮಾತನ್ನು ಕೇಳಿ ರೇಣುಕೆಯು ಕೈಮುಗಿದುಕೊಂಡು ಸ್ವಾಮೀ! ಈ ದಿವಸ ನಮ್ಮ ಮದುವೆಯ ಊಟವು. ಇಂದು ಆ ನಿರ್ಭಾಗ್ಯನಾದ ಅಪರಾಧಿಯ ವಿಷಯ ದಲ್ಲಿ ನನಗೋಸುಗ ತಾವು ಪರಿಪೂರ್ಣಕೃಪೆಯನ್ನು ತೋರಿಸಬೇಕು ಎಂದು ಅಂಗ ಲಾಚಿಕೊಂಡಳು

ನಿನ್ನ ಸಂತೋಷಕ್ಕಾಗಿ ಈ ಅಪರಾಧಿಯಲ್ಲಿ ಸಾಧ್ಯವಾದ ಮಟ್ಟಿಗೂ ಕರುಣೆ ಯನ್ನು ತೋರಿಸುತ್ತೇನೆ. ಅಪರಾಧವು ಪ್ರಬಲವಾಗಿದ್ದರೆ ಬಂದಿಯ ಶಿರಚ್ಛೇದನ ವನ್ನು ಮಾಡಿಸುವೆನು ಎಂದನು.

ಆ ಮಾತನ್ನು ಕೇಳಿ ರೇಣುಕೆಯ ಸರ್ವಾಂಗವೂ ನಡುಗಿ ಬೆವರಿತು. ಸ್ವಾಮೀ! ನನಗಾಗಿ ಅಪರಾಧಿಯನ್ನು ಕ್ಷಮಿಸಬೇಕು ಎಂದು ಅವಳು ಪುನಃ ವಲ್ಲಭದೇವನನ್ನು ಬೇಡಿದುದಕ್ಕೆ, ಅವನು ನೋಡೋಣ ಎಂದನು.

ಅಷ್ಟರಲ್ಲಿಯೇ ಶಾಂತವೀರನು ಅಯ್ಯಾ ವಲ್ಲಭದೇವ! ಹೆಂಗುಸರ ಮಾತನ್ನು ನೀನು ಕೇಳಬೇಡ ಸರ್ಕಾರದ ಕೆಲಸವನ್ನು ಸರಿಯಾಗಿ ಮಾಡು, ಹೋಗು ಎನ್ನಲು ವಲ್ಲಭದೇವನು ನ್ಯಾಯಸ್ಥಾನಕ್ಕೆ ಹೊರಟನು.

ವಲ್ಲಭದೇವನು ಹೊರಗೆ ಬರುವಾಗ ಪ್ರಾಣಗಳನ್ನು ಉಳಿಸುವ ತೆಗೆಯಿಸುವ ಅಧಿಕಾರಿಯ ಗಾಂಭೀರ್ಯವನ್ನು ತಾಳಿ, ನಾನು ಶಾಂತವೀರನ ಮಗಳನ್ನು ಮದುವೆಯಾಗಿ ಮುಂದೆ ಅಭಿವೃದ್ಧಿಗೆ ಬರಬೇಕೆಂದಿರುವಾಗ ನನ್ನ ತಂದೆಯು ರಾಜಕೀಯ ವ್ಯಾಪಾರ ದಿಂದ ಎಲ್ಲಿ ನನ್ನ ಅಭಿವೃದ್ಧಿಗೆ ಕುಂದಕವುಂಟಾಗುವುದೋ, ಉಂಟಾದರೆ ಪರಿಹಾರ ವಾವುದು? ಒಂದು ವೇಳೆ ನನ್ನ ತಂದೆಯು ಸಿಕ್ಕಿಬಿದ್ದರೆ ಅವನನ್ನು ಬಿಡಿಸಿಕೊಳ್ಳುವುದು ಹೇಗೆ, ಎಂದು ಯೋಚಿಸುತ್ತ, ಮಾಡುವ ಕೆಲಸಗಳನ್ನು ಉಪಾಯವಾಗಿಯೂ ಅನು ಮಾನಕ್ಕೆ ಅಸ್ಪದವಿಲ್ಲದಂತೆಯೂ ಮಾಡಿದರೆ ನನ್ನ ಏಳಿಗೆಗೂ ಕುಂದುಕವಿಲ್ಲದ ತಂದೆ ಯನ್ನೂ ಉಳಿಸಿಕೊಳ್ಳಬಹುದು ಎಂದು ಧೈರ್ಯಗೊಂಡು, ತನ್ನಂಥಾ ಬುದ್ಧಿಮಂತನೂ ಸುಖಿಯೂ ಆರೂ ಇಲ್ಲವೆಂದು ಹಿಗ್ಗುತ್ತ ನ್ಯಾಯಸ್ಥಾನದ ಬಾಗಿಲನ್ನು ಸೇರಿದನು.

ವಲ್ಲಭದೇವನು ಮೊದಲೇ ಧನಿಕನು ದೀನನಾಥನಿಗೆ ಒಬ ನೇ ಮಗನು.

ಪಿತ್ರಾರ್ಜಿತದ ಸ್ವತ್ತು ಹೇರಳವಾಗಿದ್ದಿತು ಅವನಿಗೆ ವಯಸ್ಸು ಇಪ್ಪತ್ತೇಳು, ಆದರೂ ದೊಡ್ಡ ಅಧಿಕಾರದಲ್ಲಿದ್ದನು. ಸುಂದರಿಯಾದ ರೇಣುಕೆಯನ್ನು ಮದುವೆಯಾಗಿ ಅವಳ ಸ್ತ್ರೀಧನವಾದ ಲಕ್ಷವರಹಗಳೂ ತನಗೇ ಸೇರುವಂತೆ ಏರ್ಪಾಡಾಗಿದ್ದಿತು. ಮತ್ತು ಶಾಂತವೀರನು ರಾಜನ ಅಭಿಮಾನಕ್ಕೆ ಪಾತ್ರವಾಗಿರುವುದರಿಂದ ತನ್ನ ಅಧಿಕಾರವು ಇನ್ನಷ್ಟು ಹೆಚ್ಚಾಗುವುದು ಎಂದೂ ನಂಬಿಕೊಂಡಿದ್ದನು ಇದನ್ನೆಲ್ಲ ಯೋಚಿಸುತ್ತ ಅವನಿಗೆ ಮನಸ್ಸಿನಲ್ಲಿ ಉಂಟಾದ ಸಂತೋಷವು ಮುಖದಲ್ಲಿ ಹೊಮ್ಮುತಿದ್ದಿತು. ಆದರೆ ಅವನ ಗಂಭೀರಮುದ್ರೆಯಿಂದ ಅದು ಮುದ್ರಿಸಲ್ಪಟ್ಟಿದ್ದಿತು.

---

## ಏಳನೆಯ ಅಧ್ಯಾಯ

### ವಿಚಾರಣೆಯು.

ಶಾಂತವೀರನ ಮನೆಗೆ ಸಮೀಪದಲ್ಲಿಯೇ ನ್ಯಾಯಸ್ಥಾನವು ಇದ್ದಿತು. ವಲ್ಲಭದೇವನು ಅಲ್ಲಿಗೆ ಬಂದಾಗ ಬಾಗಿಲಿನಲ್ಲಿ ಒಬ್ಬ ಪೋಲೀಸು ಅಧಿಕಾರಿಯು ನಿಂತಿದ್ದನು. ಅವನನ್ನು ನೋಡುತ್ತಲೇ ವಲ್ಲಭದೇವನ ಮನಸ್ಸಿನ ಸುಖಾನುಭವವು ಮರೆತು, ಸದ್ಯದ ಕಾರ್ಯವು ನೆನಪಿಗೆ ಬಂದಿತು ಆಗ ಅವನು ಮತ್ತಷ್ಟು ಗಾಂಭೀರ್ಯವನ್ನು ವಹಿಸಿ ನೀನು ಕಳುಹಿಸಿದ ಲೇಖನವನ್ನು ನಾನು ನೋಡಿದೆನು ಅಪರಾಧಿಯನ್ನು ಸೆರೆಯಲ್ಲಿಟ್ಟಿರುವುದು ಸರಿ; ಹೊಸ ಸುದ್ದಿಯೇನಾದರೂ ಉಂಟೋ? ಎಂದನು

ಅವುದೂ ಇಲ್ಲ

ಅಪರಾಧಿಗೆ ಎಷ್ಟು ವಯಸ್ಸು ?

ಹತ್ತೊಂಭತ್ತು.

ಈ ವೇಳೆಗೆ ಈ ಮನೆಯ ಸಮೀಪದಲ್ಲಿ ಮರೆಯಾಗಿ ನಿಂತಿದ್ದ ಒಬ್ಬನು ವಲ್ಲಭದೇವನ ಬಳಿಗೆ ಬಂದು ಸ್ವಾಮೀ, ವಲ್ಲಭದೇವರೇ ನಿಮ್ಮನ್ನು ನೋಡಿ ಬಹು ದಿವಸಗಳಾಯಿತು , ಸೌಖ್ಯವೇ? ಎಂದನು.

ತನ್ನ ಪದವಿಗೆ ಗೌರವವನ್ನು ಕೊಟ್ಟು ಮಾತನಾಡಲಿಲ್ಲವೆಂಬ ಅಸಮಾಧಾನದಿಂದ ವಲ್ಲಭದೇವನು ಬಂದ ಕೆಲಸವೇನು ಎನ್ನಲು, ಪೋಲೀಸಿನವರು ನಮ್ಮ ಹಡಗಿನ

ನೌಕಾಧಿಪತಿಯ ಸಹಾಯಕನಾಗಿದ್ದ ಧರ್ಮದೇವನೆಂಬುವನನ್ನು ರಾಜದ್ರೋಹಿಯೆಂಬ ತಪ್ಪು ತಿಳುವಳಿಕೆಯಿಂದ ಸೆರೆಯಲ್ಲಿಟ್ಟಿರುವರು, ಎಂದನು.

ಅದನ್ನು ನಾನು ಬಲ್ಲೆ; ಅವನ ವಿಚಾರಣೆಗೋಸ್ಕರವೇ ಈಗ ನಾನು ಇಲ್ಲಿಗೆ ಬಂದುದು.

ಧನಕೋಟಿಯು ಸ್ನೇಹಭಾವದಿಂದ ವಲ್ಲಭದೇವನನ್ನು ನೋಡಿ, ಧರ್ಮದೇವನನ್ನು ನೀವರಿಯಿರಿ, ಅವನು ಬಹು ಯೋಗ್ಯನು, ಸಾಧು, ಅವನನ್ನು ಬಂಧನದಿಂದ ಬಿಡಿಸಿ ನಮ್ಮಬಳಿಗೆ ಬೇಗನೆ ಕಳುಹಿಸಿಕೊಡಬೇಕು, ಎಂದು ಕೇಳಿಕೊಂಡನು.

ವಲ್ಲಭದೇವನು ಕುಲೀನನು, ಧನಕೋಟಿಯು ಸಾಮಾನ್ಯನು ಅವನು ಈಗಿನ ರಾಜನಲ್ಲಿ ಭಕ್ತಿಯುಳ್ಳವನು, ಇವನು ಚಕ್ರವರ್ತಿಯ್ನು ಕಡೆಯುವನು ಅವನು ಉದ್ಯೋಗಸ್ಥನು, ಇವನು ವ್ಯಾಪಾರಿ, ಆದುದರಿಂದ ದೃಢಪರಿಚರ್ಯದಿಂದ ಧನಕೋಟಿಯು ಆಡಿದ ಮಾತನ್ನು ವಲ್ಲಭದೇವನು ತಿರಸ್ಕರಿಸಿ ನಿನ್ನ ಅಭಿಪ್ರಾಯದಲ್ಲಿ ಧರ್ಮದೇವನು ಯೋಗ್ಯನಾಗಿರಬಹುದು, ಸರ್ಕಾರದವರ ಅಭಿಪ್ರಾಯದಲ್ಲಿ ಅವನು ರಾಜದ್ರೋಹಿಯಾಗಿ ಏಕೆ ಇರಬಾರದು ಎಂದು ದುರದುರನೆ ಧನಕೋಟಿಯ ಮುಖವನ್ನು ನೋಡಿದನು.

ಅದನ್ನು ಕೇಳಿ ಧನಕೋಟಿಯು ಗಾಬರಿಬಿದ್ದು ಸ್ವಾಮೀ, ತಾವು ದಯಾಳುಗಳು; ನ್ಯಾಯವನ್ನುಬಿಟ್ಟು ಹೋಗತಕ್ಕವರಲ್ಲ; ಆದುದರಿಂದ ಧರ್ಮದೇವನನ್ನು ಜಾಗ್ರತೆಯಾಗಿ ಬಿಟ್ಟುಕೊಡಬೇಕೆಂದು ಬೇಡಿಕೊಳ್ಳುತ್ತೇನೆ ಎಂದನು

ಆತನು ಅಪರಾಧಿಯಲ್ಲದೆ ಇದ್ದರೆ ನಿನ್ನ ಪ್ರಾರ್ಥನೆಯು ವ್ಯರ್ಥವಾಗಲಾರದು. ಎಂದು ವಲ್ಲಭದೇವನು ಹೇಳಿ ನ್ಯಾಯಸ್ಥಾನವನ್ನು ಪ್ರವೇಶಿಸಿದನು.

ಒಳಗೆ ನಾಲ್ಕಾರು ಪೋಲೀಸಿನವರು ತಮ್ಮ ನಡುವೆ ಧರ್ಮದೇವನನ್ನು ನಿಲ್ಲಿಸಿಕೊಂಡಿದ್ದರು. ವಲ್ಲಭದೇವನು ಧರ್ಮದೇವನನ್ನು ಕ್ಷಣಮಾತ್ರ ದೃಷ್ಟಿಸಿನೋಡಿ ಮುಂದೆ ಹೊರಟು ಅಧಿಕಾರದ ಪೀಠವನ್ನು ಸೇರಿದನು. ಧರ್ಮದೇವನ ಅಗಲವಾದ ಹಣೆಯನ್ನೂ, ಕಣ್ಣಿನ ಹೊಳಪನ್ನೂ, ಮುಖದ ವರ್ಚಸ್ಸನ್ನೂ ನೋಡಿದವನಾಗಿ ಇವನು ಬುದ್ಧಿಮಂತನು, ಧೈರ್ಯಶಾಲಿ, ಕಪಟವರಿಯದವನು ಎಂದು ತಿಳಿದ., ವಲ್ಲಭದೇವನ ಮನದಲ್ಲಿ ದಯೆಯುಂಟಾಯಿತು. ಆದರೆ ಪ್ರಥಮಾಭಿಪ್ರಾಯವು ಬಹುಶಃ ಕೊನೆಗೆ

ತಪ್ಪಾಗಬಹುದೆಂಬ ಶಂಕೆಯಿಂದ, ಅಪರಾಧಿಯನ್ನು ಕರೆದುಕೊಂಡು ಬನ್ನಿರಿ ಎಂದು ಪೋಲೀಸಿನವರಿಗೆ ಗಟ್ಟಿಯಾಗಿ ಹೇಳಿದನು ಉತ್ತರಕ್ಷಣದಲ್ಲಿಯೇ ಧರ್ಮದೇವನನ್ನು ಒಳಕ್ಕೆ ಕರೆತಂದರು ಅವನ ಮುಖವು ವಿವರ್ಣವಾಗಿದ್ದರೂ ಶಾಂತವಾಗಿದ್ದಿತು ಅವನು ಒಳಗೆ ಬಂದು ನ್ಯಾಯಾಧಿಪತಿಗೆ ತಲೆಬಾಗಿ ಅಪರಾಧಿಯ ಸ್ಥಾನದಲ್ಲಿ ನಿಂತುಕೊಂಡನು

ದುರ್ವೃತ್ತಿಯಲ್ಲಿ ಪೋಲೀಸಿನವರು ಅಗ್ರಗಣ್ಯರು, ಅಪರಾಧಿಯೆಂದು ಅವನಾದರೂ ಸಿಕ್ಕಿದರೆ ಸರಿ, ಬೇಕಾಗುವ ಕಾಗದಗಳನ್ನು ನಿಮಿಷಮಾತ್ರದಲ್ಲಿ ಸಂಪಾದಿಸಿಬಿಡುವರು. ಧರ್ಮದೇವನ ವಿಷಯದಲ್ಲಿ ಕಾಗದಗಳು ಹೇರಳವಾಗಿ ಸೇರಿದ್ದಿತೆಂದರೆ ಆಶ್ಚರ್ಯವೇನು? ಅವು ವಲ್ಲಭದೇವನ ಮೇಜಿನಮೇಲೆ ಸಿದ್ಧವಾಗಿದ್ದುವು, ಅವನು ಅವುಗಳನ್ನು ಒಂದೊಂದಾಗಿ ಬಿಚ್ಚಿನೋಡುತ್ತ, ನೀನು ಆರು, ಏನು ಕೆಲಸ ಎಂದು ಅಪರಾಧಿಯನ್ನು ಕೇಳಿದನು

ಮಹಾಸ್ವಾಮೀ! ನನ್ನ ಹೆಸರು ಧರ್ಮದೇವ, ನಾನು ಜಯಲಕ್ಷ್ಮಿಯ ಸಹಾಯಕ ನೌಕಾಧಿಪನು.

ನಿನ್ನ ವಯಸ್ಸೆಷ್ಟು? ಹತ್ತೊಂಭತ್ತು.

ನಿನ್ನನ್ನು ಸೆರೆಹಿಡಿಯುವಾಗ ಏನ ಮಾಡುತ್ತಲಿದ್ದೆ?

ನನ್ನ ಮದುವೆಯ ಊಟದಲ್ಲಿದ್ದೆ

ಆ ಮಾತನ್ನು ಕೇಳಿ ವಲ್ಲಭದೇವನು ಮನಗರಗಿದವನಾಗಿ ಮದುವೆಯೂಟದಲ್ಲಿದ್ದೆಯಾ? ಎಂದು ಪುನಃ ಕೇಳಿದನು.

ಸ್ವಾಮೀ! ಅಹುದು ಮೂರು ವರ್ಷಗಳಿಂದ ನಾನು ಪ್ರೀತಿಸುತ್ತಲಿದ್ದ ಸುಂದರಿಯಾದ ಲಲಿತಾಂಗಿಯನ್ನು ಮದುವೆಯಾಗುವ ಸಂದರ್ಭದಲ್ಲಿ ನನ್ನನ್ನು ಸೆರೆಹಿಡಿದರು ಎಂದು ಬಹು ದೀನಸ್ವರದಿಂದ ಹೇಳಿದನು ಆ ಸ್ವರವು ವಲ್ಲಭದೇವನ ಹೃದಯವನ್ನು ಭೇದಿಸಿತು. ನಾನು ಇದೇ ಸನ್ನಿವೇಶದಲ್ಲಿದ್ದು ಪ್ರಿಯಳಾದ ಸುಂದರಾಂಗಿಯನ್ನೂ ಮದುವೆಯೂಟವನ್ನೂ, ಇವುಗಳಿಂದುಂಟಾಗಿದ್ದ ಸುಖವನ್ನೂ ಬಿಟ್ಟು, ನನ್ನಂತೆಯೇ ಮದುವೆಯಾಗುವುದರಲ್ಲಿರುವ ಮತ್ತೊಬ್ಬನ ಸುಖವನ್ನು ಕೆಡಿಸುವುದಕ್ಕೆ ಬಂದಹಾಗಾಯಿತು ಎಂದು ಯೋಚಿಸಿಕೊಳ್ಳುತ್ತ ಆಮೇಲೆ ಎಂದನು.

ಆಮೇಲೆ ಏನು ಹೇಳಲಿ?

ತಿಳಿದುದನ್ನೆಲ್ಲಾ ಹೇಳು.

ಸ್ವಾಮೀ! ನನಗೆ ಅವುದೂ ತಿಳಿಯದು. ಆವವಿಷಯದಲ್ಲಿ ಏನನ್ನು ಹೇಳಬೇಕೋ ಅಪ್ಪಣೆಯಾದರೆ ತಿಳಿದುದನ್ನು ಅರಿಕೆಮಾಡುತ್ತೇನೆ.

ನೀನು ರಾಜ್ಯಭ್ರಷ್ಟನಾದ ಚಕ್ರವರ್ತಿಯ ಸೈನ್ಯದಲ್ಲಿದ್ದೆಯೋ?

ಅವರು ನನ್ನನ್ನು ಸೈನ್ಯಕ್ಕೆ ಸೇರಿಸಬೇಕೆಂದು ಇದ್ದರು; ಅಷರಲ್ಲಿಯೇ ರಾಜ್ಯವು ಅವರ ಕೈಬಿಟ್ಟು ಹೋಯಿತು.

ನೀನು ರಾಜಕೀಯವ್ಯಾಪಾರಗಳಲ್ಲಿ ಬಹುಳವಾಗಿ ಪ್ರವರ್ತಿಸುವನೆಂದು ಕಾಣುತ್ತದೆ.

ಸ್ವಾಮೀ! ನನಗೆ ಆ ವ್ಯಾಪಾರವೇ ತಿಳಿಯದು: ನಾನು ಇನ್ನೂ ಚಿಕ್ಕವನು; ವೃದ್ಧನಾದ ನನ್ನ ತಂದೆಯನ್ನು ಪೋಷಿಸುವುದೂ, ಸುಂದರಿಯಾದ ಲಲಿತಾಂಗಿಯನ್ನು ಮದುವೆಯಾಗುವುದೂ, ಜಯಲಕ್ಷ್ಮಿಯ ನೌಕಾಧಿಪತ್ಯವನ್ನು ಪಡೆಯುವುದೂ ಎಂಬ ಈ ಮೂರರಲ್ಲಿ ನನ್ನ ಯಾವದ್ವ್ಯಾಪಾರವೂ ಅಡಕವಾಗಿದೆ ಎಂದು ಹೇಳಿದನು

ಧರ್ಮದೇವನ ಮುಖದಿಂದ ಹೊರಟ ನಿಷ್ಕಪಟವಾದ ಈ ಮಾತುಗಳನ್ನು ಕೇಳಿ ವಲ್ಲಭದೇವನ ಮನಸ್ಸು ಮತ್ತಷ್ಟು ಕರಗಿ ಇವನು ಗುಣಶಾಲಿ, ಇಷ್ಟು ಸಣ್ಣ ವಯಸ್ಸಿನಲ್ಲಿ ರಾಜದ್ರೋಹವನ್ನು ಮಾಡಲಾರನು. ರೇಣುಕೆಯು ಈ ದಿನ ಮಾಡಿದ ಪ್ರಾರ್ಥನೆಯನ್ನು ಪ್ರೀತಿಪೂರ್ವಕ ನೆರವೇರಿಸುವೆನು ಎಂದು ಆಲೋಚಿಸಿ ನಿನಗಾರಾದರೂ ಹಗೆಗಳುಂಟೋ? ಎಂದು ಧರ್ಮದೇವನನ್ನು ಕೇಳಿದನು.

ಸ್ವಾಮೀ! ನನ್ನ ಸಂಪತ್ತಿಗೆ ಹಗೆಗಳಿರುವರೆಂದು ಹೇಗೆ ಹೇಳಲಿ? ಹಾಗೆನ್ನಬೇಡ ನೌಕಾಧಿಪತ್ಯವನ್ನು ಪಡೆಯುವುದೂ ಸುಂದರಿಯನ್ನು ಮದುವೆಯಾಗುವುದೂ ಮಾತ್ಸರ್ಯಕ್ಕೆ ಸಾಕಾದಷ್ಟು ಕಾರಣಗಳು

ಸ್ವಾಮೀ, ತಾವು ಪ್ರಾಜ್ಞರು. ತಾವು ಹೇಳುವಂತೆ ನನಗೆ ಶತ್ರುಗಳು ಇದ್ದರೂ ಇರಬಹುದು. ಹಗೆಗಳು ಇರುವರೆಂದರಿಯದೆ ಇರುವುದೇ ಪರಮಸುಖವೆಂದು ತಿಳಿದಿರುವೆನು.

ಹಾಗೆ ತಿಳಿದುಕೊಂಡಿರುವುದು ಸರಿಯಲ್ಲ, ಪ್ರತಿಯೊಬ್ಬ ಮನುಷ್ಯನೂ ಲೋಕ

ವೆಲ್ಲಾ ತನ್ನ ಶತ್ರುವೆಂದು ಭಾವಿಸಿ ಬಹು ಜಾಗರೂಕತೆಯಿಂದ ಕೆಲಸಗಳನ್ನು ಮಾಡ ಬೇಕು ; ಹಾಗೆ ಮಾಡದಿದ್ದರೆ ಮೋಸಹೋಗುವನು. ಇಲ್ಲಿ ನೋಡು, ಸಾಧಾರಣ ವಾಗಿ ನ್ಯಾಯಾಧಿಕಾರಿಗಳು ಅಪರಾಧಿಗೆ ಅಪರಾಧಪತ್ರವನ್ನು ತೋರಿಸುವುದಿಲ್ಲ ; ಆದರೂ ನಾನು ನಿನ್ನ ಯೋಗ್ಯತೆಗೆ ಮೆಚ್ಚಿ ಅಪರಾಧಪತ್ರವನ್ನು ನಿನಗೆ ತೋರಿಸು ತ್ತೇನೆ ಎಂದು ಧರ್ಮದೇವನ ಕೈಯಲ್ಲಿ ಆ ಕಾಗದವನ್ನು ಕೊಟ್ಟು ಇದು ಆರ ಬರಹ ಬಲ್ಲೆಯಾ, ಎಂದು ಕೇಳಿದನು.

ಸ್ವಾಮೀ ! ಇದು ಇಂಥವನ ಬರೆಹವೆಂದು ಹೇಳಲಾರೆನು ; ಆದರೂ ಇದನ್ನು ಬರೆದವನು ನನಗೆ ನಿಜವಾದ ಶತ್ರುವೆಂದು ಊಹಿಸುವೆನು. ತಮ್ಮಂಥ ದಯಾಳುಗಳು ನನ್ನನ್ನು ವಿಚಾರಣೆಮಾಡುವಿರಾದುದರಿಂದ ನಾನು ನಿರಾತಂಕನಾಗಿರುವೆನು.

ಈಗ ನನ್ನನ್ನು ನ್ಯಾಯಾಧಿಕಾರಿಯಾಗಿ ಭಾವಿಸದೆ, ನಿನ್ನಲ್ಲಿ ಪೂರ್ಣವಿಶ್ವಾಸವ ನ್ನಿಟ್ಟಿರುವ ಆಪ್ತಸ್ನೇಹಿತನೆಂದು ಭಾವಿಸಿ, ನಾನು ಕೇಳುವ ಪ್ರಶ್ನೆಗೆ ಸರಿಯಾದ ಉತ್ತರ ವನ್ನು ಕೊಡು, ಎಂದು ಹೇಳಿ ಹೆಸರಿಲ್ಲದ ಈ ಬರಹದಲ್ಲಿ ಹೇಳಿರುವುದು ಎಷ್ಟರ ಮಟ್ಟಿಗೆ ನಿಜವೋ ತಿಳುಹು ಎಂದನು.

ಸ್ವಾಮೀ ! ನಾನು ಸತ್ಯವಾಗಿ ಹೇಳುತ್ತೇನೆ; ಜಯಲಕ್ಷ್ಮಿಯ ನೌಕಾಧಿಪನು ಸಾಯುವಕಾಲದಲ್ಲಿ ಒಂದು ಕಾಗದದ ಕಟ್ಟನ್ನು ನನ್ನಲ್ಲಿ ಕೊಟ್ಟು, ಇದನ್ನು ಏಲಾ ದ್ವೀಪದಲ್ಲಿರುವ ಚಕ್ರವರ್ತಿಯ ಮಂತ್ರಿಯ ಕೈಯಲ್ಲಿ ಕೊಡು ; ಅವನು ಅಮರದೇಶ ದಲ್ಲಿ ಆರಿಗಾದರೂ ಕೊಡಹೇಳಿ ನಿನ್ನಲ್ಲಿ ಅವುದಾದರೂ ಕಾಗದವನ್ನು ಕೊಟ್ಟರೆ ಅದನ್ನು ಅವರಿಗೆ ತಲಪಿಸು, ಎಂದು ಹೇಳಿದ್ದನು ಮರಣಕಾಲದಲ್ಲಿ ಹೇಳಿದ ಆ ಮಾತನ್ನು ಆರಾದರೂ ಮೀರಬಹುದೇ ? ಅದರಲ್ಲಿಯ ೞ ನೌಕಾಧಿಪತಿಯು ಹೇಳಿದಂತೆ ಮಾಡದಿರುವುದು ಅವನ ಕೈ ಕೆಳಗಿನವನಾದ ನನಗೆ ಧರ್ಮವಲ್ಲ. ಆತನ ಮಾತಿನಂತೆ ನಡೆದೆನಲ್ಲದೆ ಮತ್ತೇನೂ ಇಲ್ಲ ಈ ದಿನ ನನ್ನನ್ನು ಸೆರೆ ಹಿಡಿಯದಿದ್ದರೆ ನಾಳೇ ಅಮರ ದೇಶಕ್ಕೆ ಪಯಣಮಾಡಬೇಕೆಂದು ಇದ್ದೆನು.

ಈ ಮಾತುಗಳನ್ನು ಕೇಳುತಲೇ ವಲ್ಲಭದೇವನು ಇದು ನಿಜವೆಂದು ಕಾಣುತ್ತದೆ, ಇವನು ಮಾಡಿದುದು ಬರಿಯ ಅವಿವೇಕದ ಕೆಲಸವೇ ಹೊರತು ರಾಜದ್ರೋಹವಲ್ಲ. ಆ ಅವಿವೇಕದ ಕೆಲಸವನ್ನು ನೌಕಾಧಿಪತಿಯು ಅಪ್ಪಣೆಯಂತೆ ಮಾಡಿದ್ದಾನೆ ಎಂದು

ಯೋಚಿಸಿ, ನೀನು ಏಲಾದ್ವೀಪದಿಂದ ತಂದಿರುವ ಕಾಗದವನ್ನು ನನ್ನಲ್ಲಿ ಕೊಟ್ಟು ನಾನು ಕರೆದಾಗ ಬರುವೆನೆಂದು ಮಾತುಕೊಟ್ಟು ಹೋಗು ಎಂದು ಹೇಳಿದನು.

ಸ್ವಾಮೀ ! ಹಾಗಾದರೆ ನನಗೆ ಹೋಗಲು ಅಪ್ಪಣೆಯೋ?

ಮೊದಲು ಆ ಕಾಗದವನ್ನು ಕೊಡು.

ಅದನ್ನು ಆವಾಗಲೇ ಪೋಲೀಸಿನವರು ನನ್ನಿಂದ ತೆಗೆದುಕೊಂಡರು. ತಮ್ಮಲ್ಲಿರುವ ಕಾಗದಗಳಲ್ಲಿರಬಹುದೆಂದು ತೋರುವುದು.

ಅದು ಆರ ಹೆಸರಿಗೆ ಬರೆದು ಇದೆ?

ಅಮರಪುರದ ರಾಜಬೀದಿಯಲ್ಲಿರುವ ದೀನನಾಥರ ಹೆಸರಿಗೆ ಬರೆದು ಇದೆ.

ದೀನನಾಥನ ಹೆಸರನ್ನು ಕೇಳಿದೊಡನೆಯೇ ವಲ್ಲಭದೇವನು ತಲೆಯ ಮೇಲೆ ಸಿಡಿಲು ಬಿದ್ದವನಂತೆ ಸ್ವಲ್ಪ ಹೊತ್ತು ಸ್ತಬ್ಧನಾಗಿದ್ದು, ಬಳಿಕ ಕಾಗದದ ಕಟ್ಟನ್ನು ಹುಡುಕಿ, ಆ ಹೆಸರಿಗಿದ್ದ ಪತ್ರವನ್ನು ತೆಗೆದು, ಮೂರುನಾಲ್ಕಾವೃತ್ತಿ ಅದರ ವಿಲಾಸವನ್ನು ಓದಿ, ಅನಂತರ ಅದನ್ನು ಬಿಚ್ಚಿ ಒಳಗಿರುವ ಸಂಗತಿಯನ್ನು ಓದಿಕೊಂಡು ನೀನು ದೀನನಾಥನನ್ನು ಬಲ್ಲೆಯೋ? ಎಂದು ಕೇಳಿದನು.

ಸ್ವಾಮಿ ! ನಾನು ಕಾಣೆ.

ಅದರ ಮೇಲು ವಿಲಾಸವು ನನಗೆ ಗೊತ್ತಿದೆ.

ಅದು ತಿಳಿಯದೆ ಇದ್ದರೆ ನಾನು ಹೇಗೆ ಕಾಗದವನ್ನು ತಲಪಿಸುವುದು?

ವಲ್ಲಭದೇವನ ಮುಖವು ಬೆಪ್ಪಾಗಿ ಮನಸ್ಸಿನ ಗಾಬರಿಯನ್ನು ಹಾಗೆಯೇ ಅಡಗಿಸಿಕೊಂಡು ಧರ್ಮದೇವನನ್ನು ನೋಡಿ ಈ ಕಾಗದವನ್ನು ಆರಿಗಾದರೂ ತೋರಿಸಿದ್ದೀಯಾ? ಎಂದನು.

ನಾನು ಇನ್ನು ಆರಿಗೂ ತೋರಿಸಿಲ್ಲ.

ವಲ್ಲಭದೇವನು ಹುಬ್ಬುಗಳನ್ನು ಗಂಟುಹಾಕಿಕೊಂಡು, ಹಲ್ಲುಗಳನ್ನು ಕಡಿಯುತ್ತ, ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಅಯ್ಯೋ! ಮಿತಿಮೀರಿತು ಎಂದು ಗೊಣಗುಟ್ಟಿಕೊಳ್ಳುತಲಿದ್ದನು. ವಲ್ಲಭದೇವನ ಅವಸ್ಥೆಯನ್ನು ನೋಡಿ ಧರ್ಮದೇವನು ಸ್ವಾಮೀ! ತಮಗೆ ಮೈಯ್ ಸರಿಯಾಗಿಲ್ಲವೆಂದು ತೋರುತ್ತಲಿದೆ. ಒಬ್ಬ ಸೇವಕನನ್ನು ಕೂಗಲೇ, ಎಂದು ಹೊರಗಿದ್ದ ಪೋಲೀಸಿನವರಲ್ಲಿ ಒಬ್ಬನನ್ನು

ಕರೆಯಬೇಕೆಂದು ನಾಲ್ಕಾರು ಹಜ್ಜೆಗಳನ್ನಿಟ್ಟನು ಅದನ್ನು ವಲ್ಲಭದೇವನು ನೋಡಿ ಇಲ್ಲಿ ಸೇವಕರಿಗೆ ಅಪ್ಪಣೆ ಮಾಡುವುದು ನನ್ನ ಕೆಲಸವೇ ಹೊರತು ನಿನ್ನದಲ್ಲ ನೀನಿದ್ದ ಕಡೆ ಇದ್ದು ನಾನು ಕೇಳುವ ಪ್ರಶ್ನೆಗೆ ಉತ್ತರವಂ ಕೊಡು ಎಂದು, ಪುನಃ ಆ ಕಾಗದ ವನ್ನು ಓದಿ ಈ ಕಾಗದದಲ್ಲಿ ಬರೆದಿರುವುದು ನಿನಗೆ ಗೊತ್ತೋ ಎಂದನು.

ಸ್ವಾಮೀ ! ಒಳಗೆ ಏನು ಬರೆದಿದೆಯೋ ನನಗೆ ತಿಳಿಯದು.

ಅಯ್ಯೋ ! ಈ ಕಾಗದದಲ್ಲಿ ಬರೆದಿರುವ ಸಮಾಚಾರವೂ, ದೀನನಾಥನು ನನ್ನ ತಂದೆ ಎಂಬುದೂ ಇವನಿಗೆ ಗೊತ್ತಿದ್ದರೆ ನನ್ನ ಪರಿಣಾಮವು ಪೂರೈಸುವುದು ಎಂದು ಮನದೊಳು ಅಂದುಕೊಂಡು ನಿಜವಾಗಿಯೂ ನಿನಗೆ ತಿಳಿಯದೋ ? ಎಂದು ಕೇಳಿದನು.

ಸ್ವಾಮೀ, ನಿಜವಾಗಿಯೂ ನನಗೆ ತಿಳಿಯದು.

ಆದರೂ ವಲ್ಲಭದೇವನು ಹೆದರಿ, ಇವನಿಗೆ ನನ್ನ ತಂದೆಯ ಹೆಸರು ಗೊತ್ತಿದೆ ಯಾಗಿ ಇವನನ್ನು ಬಿಟ್ಟುಬಿಟ್ಟರೆ ಹೇಗಾದರೂ ಈ ಸಮಾಚಾರವು ಇತರರಿಗೆ ತಿಳಿದು ನನ್ನ ಅಭಿವೃದ್ಧಿಗೆ ಕುಂದಕವಾಗುವುದು ಎಂದು ಪುನಃ ಯೋಚಿಸಿ ತಟ್ಟನೆ ಅದನ್ನು ಸಂದೇಹಿಸದಿರುವುದಕ್ಕೆ ಆಗುವುದಿಲ್ಲ ಎಂದು ಗಟ್ಟಿಯಾಗಿ ಹೇಳಿದನು.

ಆಗ ಧರ್ಮದೇವನು ಸ್ವಾಮೀ ! ನಾನು ಹೇಳುವುದರಲ್ಲಿ ಆವ ಸಂದೇಹವೂ ಇಲ್ಲ. ತಮಗೇನಾದರೂ ಅನುಮಾನವಿದ್ದರೆ ತಾವು ಬೇಕಾದ ಪ್ರಶ್ನೆಯನ್ನು ಮಾಡ ಬಹುದು ; ನಾನು ಅವುಗಳಿಗೆ ದೇವರ ಸಾಕ್ಷಿಯಾಗಿ ಸರಿಯಾದ ಉತ್ತರಗಳನ್ನು ಕೊಡು ವೆನು, ಎಂದನು.

ವಲ್ಲಭದೇವನು ವಿಶ್ವಪ್ರಯತ್ನವನ್ನು ಮಾಡಿ ತನಗಿದ್ದ ಸಂಕಟವನ್ನು ಅಡಗಿಸಿ ಕೊಂಡು ನಿಧಾನವನ್ನು ತಾಳಿ, ದಯಾರಸವನ್ನು ಉಕ್ಕಿಸುತ, ಧರ್ಮದೇವನನ್ನು ನೋಡಿ ಅಪ್ಪಾ ! ನಾನು ನಿನ್ನನ್ನು ಬಿಟ್ಟುಬಿಡಬೇಕೆಂದಿದ್ದೆನು ಆದರೆ ಈ ಕಾಗದವನ್ನು ನೋಡಿದ ಮೇಲೆ ನನ್ನ ಮೇಲಿನ ಅಧಿಕಾರಿಗೆ ತಿಳಿಸಿಬಿಡಬೇಕಾಗಿದೆ. ನಿನ್ನ ವಿಷಯ ದಲ್ಲಿ ನನಗಿರುವ ಅಭಿಪ್ರಾಯವು ನಿನಗೆ ತಿಳಿದೇ ಇದೆ. ಎಂದನು.

ಸ್ವಾಮೀ ! ತಾವು ನನ್ನನ್ನು ಆದರದೊಡನೆ ಕಾಣುತ್ತಲಿದ್ದೀರಿ. ತಾವು ಮೇಲಕ್ಕೆ ಬರೆದು ತರಿಸುವುದಕ್ಕೆ ಎಷ್ಟು ದಿವಸಗಳಾಗಬಹುದು ?

ಸ್ವಲ್ಪಕಾಲವೇ ಸಾಕು. ನಾನೂ ಕೈಲಾದಮಟ್ಟಿಗೂ ಜಾಗ್ರತೆ ಮಾಡುವೆನು.

ಧರ್ಮದೇವ ! ಕೇಳು ನಿನ್ನ ಮೇಲೆ ಇರತಕ್ಕ ಮುಖ್ಯವಾದ ತಪ್ಪು ಈ ಕಾಗದ. ಎಂದು ಧರ್ಮದೇವನು ಏಲಾದ್ವೀಪದಿಂದ ತಂದಿದ್ದ ಕಾಗದವನ್ನು ತೋರಿಸಿ, ಇಗೋ ನಿನಗೆ ಅನುಕೂಲವಾಗುವುದಕ್ಕಾಗಿ ಈ ಕಾಗದವನ್ನು ಸುಟ್ಟುಬಿಡುವೆನು ಎಂದು ಹೇಳಿ ಧರ್ಮದೇವನ ಇದಿರಿಗೆ ಅದನ್ನು ಸುಟ್ಟುಬಿಟ್ಟನು.

ಅಯ್ಯಾ ! ತಾವು ಪರಮ ದಯಾಳುಗಳು ತಮ್ಮ ಈ ಉಪಕಾರವನ್ನು ನಾನು ಎಂದಿಗೂ ಮರೆಯಲಾರೆ.

ಈಗ ನಾನು ಮಾಡಿದ ಕೃತ್ಯದಿಂದ ನಿನಗೆ ನನ್ನಲ್ಲಿ ಪೂರ್ಣವಾದ ನಂಬುಗೆ ಯುಂಟಾಗಿರಬಹುದು. ನಾನು ನಿನ್ನ ಹಿತಕ್ಕಾಗಿ ಹೇಳುವ ಮಾತನ್ನು ಕೇಳು.

ಅಪ್ಪಣೆಯಾದರೆ ಶಿರಸಾವಹಿಸುವೆನು.

ಇದು ಅಪ್ಪಣೆಯಲ್ಲ ; ನನ್ನ ಪ್ರಾರ್ಥನೆ. ಈ ಕಾಗದದ ಸಮಾಚಾರ ನಮ್ಮಿಬರ ಹೊರತು ಮತ್ತಾರಿಗೂ ತಿಳಿಯದು. ನಿನ್ನನ್ನು ಸೆರೆಯಿಂದ ಬಿಟ್ಟುಬಿಡುವುದೇನೋ ನಿಶ್ಚಯ , ಆದರೆ ಈ ರಾತ್ರಿಯ ವರೆಗೆ ನೀನು ಸೆರೆಯಲ್ಲಿರಬೇಕು ; ಅಷ್ಟರಲ್ಲಿ ಆರಾದರೂ ಈ ಕಾಗದದ ವಿಷಯವಾಗಿ ಪ್ರಶ್ನೆಮಾಡಿದರೆ ನನಗೇನೂ ತಿಳಿಯದು ಎಂದು ಹೇಳಿಬಿಡು. ಹಾಗೆ ಹೇಳದಿದ್ದರೆ ನಿನಗೆ ಕ್ಷೇಮವಾಗುವುದಿಲ್ಲ. ಈ ವಿಷಯವನ್ನು ಒಬ್ಬರಿಗೂ ಹೇಳುವುದಿಲ್ಲವೆಂದು ನೀನು ನನಗೆ ಪ್ರಮಾಣಮಾಡಿ ಕೊಡು, ಎಂದನು. ಸ್ವಾಮೀ ! ಹಾಗೆಯೇ ಆಗಲಿ ಎಂದು ಹೇಳಿ ಧರ್ಮದೇವನು ಪ್ರಮಾಣಮಾಡಿದನು.

ಈ ಕಾಗದವಲ್ಲದೆ ಮತ್ತಾವುದಾದರೂ ನಿನ್ನಲ್ಲಿದೆಯೋ ?

ಅವುದೂ ಇಲ್ಲ ಪ್ರಮಾಣವಾಗಿ ಹೇಳು.

ಸ್ವಾಮೀ ! ಪ್ರಮಾಣವಾಗಿ ಮತ್ತಾವುದೂ ನನ್ನಲ್ಲಿಲ್ಲ.

ಅನಂತರ ವಲ್ಲಭದೇವನು ಒಬ್ಬ ಪೋಲೀಸು ಅಧಿಕಾರಿಯನ್ನು ಕರೆದು ಅವನ ಕಿವಿಯಲ್ಲಿ ಏನನ್ನೋ ಹೇಳಿ, ಧರ್ಮದೇವನನ್ನು ನೋಡಿ ನೀನು ಇವನ ಸಂಗಡ ಹೋಗು ಎಂದು ನಗುನಗುತ ಹೇಳಿದನು.

ಅವರಿಬ್ಬರೂ ಹೊರಟ ಬಳಿಕ ವಲ್ಲಭದೇವನು ಅಯ್ಯೋ ತಂದೆಯೇ ! ನೀನು ಮಾಡುವ ಕಾರ್ಯಗಳು ಅವಾಗಲೂ ನನ್ನ ಅಭಿವೃದ್ಧಿಗೆ ಕುಂದಕವನ್ನುಂಟುಮಾಡುವುವು. ಈಗ ನಾನು ಮಾಡಿದ ವಿಚಾರಣೆಯು ನನ್ನ ಮೇಲಣ ಅಧಿಕಾರಿಯ ಕೆಲಸ. ಅವನು

ಊರಲ್ಲಿಲ್ಲದೆ ಇದ್ದುದರಿಂದ ನಾನು ವಿಚಾರಣೆ ಮಾಡಬೇಕಾಯಿತು ಅವನ ಕೈಗೆ ಈಗ ನಾನು ಸುಟ್ಟಕಾಗದವು ಸಿಕ್ಕಿದ್ದರೆ ನನ್ನ ಗತಿಯೇನಾಗುತ್ತಿದ್ದಿತು, ಎಂದು ಬಹು ಸಂಕಟದೊಡನೆ ಮಾತನಾಡಿಕೊಳ್ಳುತ್ತ ನನ್ನ ನಾಶಕ್ಕೆ ಕಾರಣವಾಗುತಲಿದ್ದ ಈ ಕಾಗದದಲ್ಲಿದ್ದ ಸಮಾಚಾರವನ್ನೇ ನನ್ನ ಅಭಿವೃದ್ಧಿಗೆ ಸಹಕಾರಿಯಾದುದನ್ನಾಗಿ ಮಾಡಿಕೊಳ್ಳುವೆನು ಎಂದು ಯೋಚಿಸಿಕೊಂಡು ವಲ್ಲಭದೇವನು ಕಳೆಗುಂದಿದವನಾಗಿ ಅಲ್ಲಿಂದ ಎದ್ದು ರೇಣುಕೆಯ ಮನೆಗೆ ಹೋದನು.

---

## ಎಂಟನೆಯ ಅಧ್ಯಾಯ

### ಜಾಲದುರ್ಗ.

ಪೋಲೀಸು ಅಧಿಕಾರಿಯು ಧರ್ಮದೇವನನ್ನು ಕಾರಾಗೃಹಕ್ಕೆ ಕರೆದುಕೊಂಡು ಹೋಗಿ ಒಂದು ದೊಡ್ಡ ಕೊಟ್ಟಡಿಯಲ್ಲಿ ಬಿಟ್ಟು, ಬಾಗಿಲಿಗೆ ಬೀಗವನ್ನು ಹಾಕಿಸಿ ಹೊರಟುಹೋದನು ಆ ಕೊಟ್ಟಡಿಗೆ ಕಬ್ಬಿಣದ ಬಾಗಿಲು, ಕಿಟಿಕಿಗಳಿಗೆ ಕಬ್ಬಿಣದ ದಪ್ಪ ಸಲಾಕಿಗಳು, ಅವುಗಳನ್ನು ನೋಡುತಲೆ ಧರ್ಮದೇವನಿಗೆ ತಾನಿರುವುದು ಕಾರಾಗೃಹವೆಂದು ಮೊತ್ತಮೊದಲು ಅನುಮಾನವು ಹುಟ್ಟಿ, ಬಳಿಕ ಕೊಟ್ಟಡಿಯ ಅಂದವನ್ನೂ ವಿಸ್ತಾರವನ್ನೂ ನೋಡಿ ಅವನು ತನ್ನ ಮನಸ್ಸಿನ ಅನುಮಾನವನ್ನು ದೂರಮಾಡಿ ಇದೂ ಅಲ್ಲದೆ ವಲ್ಲಭದೇವನು ಭರವಸೆಕೊಟ್ಟಿದ್ದಂತೆ ತನ್ನನ್ನು ಜಾಗ್ರತೆಯಾಗಿಯೇ ಬಿಟ್ಟುಬಿಡುವನೆಂದು ದೃಢವಾಗಿ ನಂಬಿಕೊಂಡಿದ್ದನ,.

ಧರ್ಮದೇವನನ್ನು ಇಲ್ಲಿಗೆ ಕರೆದುಕೊಂಡು ಬಂದಾಗ ಸಾಯಂಕಾಲವಾಗಿದ್ದಿತು, ಆಗ ದಕ್ಷಿಣಾಯನದ ಕೊನೆಯಾದುದರಿಂದ ಜಾಗ್ರತೆಯಾಗಿಯೇ ಕತ್ತಲು ಕವಿಯುತ್ತ ಬಂದಿತು ಕತ್ತಲೆಯು ಹೆಚ್ಚಿದ ಹಾಗೆಲ್ಲಾ ಧರ್ಮದೇವನ ಕಿವಿಗಳು ಪಟುವಾಗಿ ಎಲ್ಲಿ ಹಜ್ಜೆಗಳ ಸದ್ದಾದರೂ ತನ್ನನ್ನು ಬಿಡಿಸಲು ಬಂದ ಜನಗಳ ಹಜ್ಜೆಸದ್ದು ಎಂದು ಒಡನೆಯೇ ಕುಳಿತಿದ್ದ ಸ್ಥಳವನ್ನು ಬಿಟ್ಟು ಬಾಗಿಲ ಬಳಿಗೆ ಬಂದು ನಿಲ್ಲುವನು, ಉತ್ತರಕ್ಷಣದಲ್ಲಿಯೇ ಹಜ್ಜೆಯ ಶಬ್ದವು ದೂರವಾಗಲು ನಿರಾಶನಾಗಿ ತನ್ನ ಸ್ಥಳಕ್ಕೆ ಪುನಃ ಹೋಗುತಲಿದ್ದನು.

ಬಲು ಹೊತ್ತು ಆರೂ ಬಾರದೆ ಇದ್ದುದನ್ನು ನೋಡಿ, ವಲ್ಲಭದೇವನು ಬೇಕೆಂದು ವಿಶೇಷವಿಶ್ವಾಸವನ್ನು ತೋರಿಸಿ ನನ್ನನ್ನು ಮೋಸಗೊಳಿಸಿದನೋ ಎಂದು ಯೋಚಿಸಿ, ಛೇ, ಛೇ, ಇದೇನು ನನಗೆ ಇಂತಹ ದುರಾಲೋಚನೆಯು ಹುಟ್ಟಿತು? ಮನುಷ್ಯರು ಕಿಡುಕರಲ್ಲ, ವಲ್ಲಭದೇವನು ಏಕೆ ಮೋಸಗೊಳಿಸುವನು? ಮೇಲಿನ ಅಧಿಕಾರಿಯು ಸಿಕ್ಕದೆ ನಾವಕಾಶವಾಗಿದ್ದರೆ ಇರಬಹುದು, ಎಂದು ಆಲೋಚಿಸುತ್ತಲಿರುವಾಗ ತನ್ನ ಕೊಟ್ಟಡಿಯ ಬಳಿಗೆ ಯಾರೋ ಜನರು ಬರುವ ಸದ್ದಾಯಿತು. ಕೂಡಲೇ ಧರ್ಮ ದೇವನು ಎದ್ದು ಬಾಗಿಲಹತ್ತಿರ ಬಂದನು ಬಾಗಿಲು ತೆರೆಯಲ್ಪಟ್ಟಿತು. ಜನರು ತಂದಿದ್ದ ದೀವಟಿಗೆಗಳಿಂದ ಕೊಟ್ಟಡಿಯೆಲ್ಲಾ ಬೆಳಕಾಯಿತು, ಧರ್ಮದೇವನು ಕೂಡಲೆ ಹೊರಗೆ ಹೊರಡುವ ಪ್ರಯತ್ನಮಾಡಿ ಬಾಗಿಲಲ್ಲಿ ನಿಂತಿದ್ದ ನಾಲ್ಕುಜನ ಪೋಲೀಸಿನವ ರನ್ನೂ ನಾಲ್ಕುಜನ ಬಿಚ್ಚುಕತ್ತಿಯ ಸಿಪಾಯಿಗಳನ್ನೂ ನೋಡಿ ಹಿಂಜರಿದವನಾಗಿ ನೀವು ನನ್ನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿರುವಿರೋ? ಎಂದು ಅವರನ್ನು ಕೇಳಲು ಅವರು ಆಹುದು ಎಂದರು ನ್ಯಾಯಾಧಿಪತಿಯ ಅಪ್ಪಣೆಯಂತೆ ಬಂದಿರು ವಿರೋ, ಎಂದು ಪುನಃ ಕೇಳಲು, ಇರಬಹುದು ಎಂದರು.

ತನ್ನನ್ನು ಸೆರೆಯಿಂದ ಬಿಡಿಸಲು ಇವರು ವಲ್ಲಭದೇವನಿಂದ ಕಳುಹಿಸಲ್ಪಟ್ಟವರೆಂದು ಯೋಚಿಸಿ, ಧರ್ಮದೇವನು ಒಂದಿದ್ದ ಜನಗಳ ನಡುವೆ ಧಾರಾಳವಾಗಿ ನಿಂತನು. ಬೀದಿಯ ಬಾಗಿಲಿಗೆ ಬರುತ್ತಲೆ ಅಲ್ಲಿ ನಿಂತಿದ್ದ ಕುದುರೆಯ ಬಂಡಿಯನ್ನು ನೋಡಿ ನನ ಗಾಗಿ ಇದನ್ನು ತಂದಿದ್ದೀರಾ ಎನ್ನಲು, ಅಹುದು, ಇದು ನಿನಗೋಸ್ಕರವೇ ಬಂದಿರು ವುದು ಎಂದರು

ಧರ್ಮದೇವನು ಮತ್ತಾವುದನ್ನೋ ಕೇಳಲು ಪ್ರಯತ್ನಪಟ್ಟನು; ಅಷ್ಟರಲ್ಲಿಯೇ ಪೋಲೀಸು ಅಧಿಕಾರಿಯು ಇವನನ್ನು ಮೆಲ್ಲಮೆಲ್ಲಗೆ ಬಂಡಿಗೆ ತಳ್ಳಿ ಮೂವರು ಬಿಚ್ಚು ಕತ್ತಿಯವರನ್ನು ಜತೆಯಲ್ಲಿ ಒಳಗೂ, ಮತ್ತೊಬ್ಬನನ್ನು ಹಿಂದಯೂ, ಕೂರಿಸಿ ತಾನು ಮುಂದುಗಡೆಯಲ್ಲಿ ಕುಳಿತನು ಬಂಡಿಯು ಒಡನೆಯೇ ಹೊರಟಿತು ಅದರ ಕಿಟಿಕಿ ಗಳಿಗೆ ಕಬ್ಬಿಣದ ಸಲಾಕಿಗಳು ಹಾಕಿದ್ದುವು. ಧರ್ಮದೇವನು ಆ ಕಿಟಿಕಿಗಳನ್ನು ನೋಡಿದೂಡನೇ ಸ್ಥಿರವಾದ ಕಾರಾಗೃಹವನ್ನು ಬಿಟ್ಟು ಸಂಚರಿಸುವ ಬಂಧನಾಲಯಕ್ಕೆ ಬಂದಂತಾಯಿತೆಂದು ತಿಳಿದುಕೊಂಡನು, ಅಷ್ಟರಲ್ಲಿಯೇ ಯಾನವು ಸಮುದ್ರತೀರವನ್ನು

ಸೇರಿತು. ಪೋಲೀಸು ಅಧಿಕಾರಿಯು ಬಂಡಿಯಿಂದ ಕೆಳಗೆ ಇಳಿದು, ಅಲ್ಲಿಯ ಅಧಿಕಾರಿಯ ಬಿಡಾರಕ್ಕೆ ಬಂದು ಕೂಗಿದ ಕೂಡಲೇ ಹತ್ತು ಹನ್ನೆರಡುಮಂದಿ ಸೈನಿಕರು ಆಯುಧಪಾಣಿಗಳಾಗಿ ಬಂದು ನಿಂತರು.

ತನಗಾಗಿಯೇ ಇವರೆಲ್ಲರೂ ಹೀಗೆ ಬಂದಿರಬಹುದೇ ! ಎಂದು ಧರ್ಮದೇವನು ಯೋಚಿಸುವಷ್ಟರಲ್ಲಿಯೇ ಸಾಮಾನ್ಯವಾದ ಪೋಲೀಸಿನವರೂ ಬಿಚ್ಚುಕತ್ತಿಯವರೂ ಒಂದುಗೂಡಿ ಧರ್ಮದೇವನನ್ನು ತಮ್ಮ ನಡುವೆ ಬಿಟ್ಟುಕೊಂಡು ಅಲ್ಲಿ ಸಿದ್ಧವಾಗಿದ್ದ ದೋಣಿಯನ್ನು ಏರಿದರು.

ಸಮುದ್ರದ ಗಾಳಿಯು ತನ್ನಮೇಲೆ ಬಿದ್ದಕೂಡಲೇ ಧರ್ಮದೇವನ ಮನಸ್ಸಿಗೆ ಆಪ್ಯಾಯನವಾಯಿತು. ದೋಣಿಯು ಮುಂದಕ್ಕೆ ಹೊರಡಲು ಆದಿನ ಬೆಳಿಗೆ ತಾನೂ ಲಲಿತಾಂಗಿಯೂ ಉಲ್ಲಾಸವಾಗಿ ವಿಹರಿಸುತ್ತಿದ್ದ ಪ್ರದೇಶವು ಕಾಣಿಸಿತು ಅದನ್ನು ನೋಡಿ ಧರ್ಮದೇವನು ಕೈಗಳನ್ನು ಕಟ್ಟಿಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು, ಏನನ್ನೋ ಯೋಜನೆಮಾಡುತ್ತಲಿದ್ದನು

ದೋಣಿಯು ಮುಂದೆ ಹೋಗುತ ಹೋಗುತ ಧರ್ಮದೇವನು ತನ್ನ ಪಕ್ಕದಲ್ಲಿ ಕುಳಿತಿದ್ದ ಕಾವಲುಗಾರನನ್ನು ಕುರಿತು ಈಗ ನಾವು ಎಲ್ಲಿಗೆ ಹೋಗುತ್ತಿರುವೆವು ಎಂದು ಕೇಳಲು, ಅವನು ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಗೊತ್ತಾಗುವುದು ಎಂದನು

ಆದರೂ — ನಾನು ಅದನ್ನು ತಿಳಿಸಲಾರೆನು.

ಸೈನಿಕರ ನಡತೆಗಳನ್ನು ಚೆನ್ನಾಗಿ ಬಲ್ಲವನಾದುದರಿಂದ ಅವರನ್ನು ಕೇಳಿ ಪ್ರಯೋಜನವಿಲ್ಲವೆಂದು ತಿಳಿದು ಧರ್ಮದೇವನು ಸುಮ್ಮನಾದನು. ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ಹುಟ್ಟಿದುವು ದೋಣಿಯು ಸಣ್ಣದಾದುದರಿಂದಲೂ, ಸಮೀಪದಲ್ಲಿ ಆವ ಹಡಗೂ ಇಲ್ಲದಿದ್ದುದರಿಂದಲೂ, ಎಲ್ಲೋ ಹತ್ತಿರದಲ್ಲಿರುವ ಕಡೆಗೆ ಹೋಗುತ್ತಿರಬಹುದೆಂದು ಊಹಿಸಿದನು. ಕೈಗಳಿಗೆ ಕೋಳವನ್ನು ಹಾಕದೆ ಇರುವುದು ಮೇಲಾಯಿತು ಎಂದು ಭಾವಿಸಿ, ದೀನನಾಥನ ಹೆಸರನ್ನು ಆರಿಗೂ ಹೇಳದಿದ್ದರೆ ನಿನಗೆ ಆವ ಅಪಾಯವೂ ಇಲ್ಲ, ನಿನ್ನನ್ನು ನಿಜವಾಗಿಯೂ ಬೇಗನೆ ಬಿಟ್ಟುಬಿಡುವರೆಂದು ವಲ್ಲಭದೇವನು ಹೇಳಿದ ಮಾತು ಇನ್ನೂ ಅವನ ಕಿವಿಯಲ್ಲಿ ಘೋಷಿಸುತ್ತಲಿದ್ದಿತು. ತನ್ನ ಏಳಿಗೆಗೆ ಕುಂದಕವಾದುದಾಗಿಯೂ ಅಪಾಯಕರವಾದುದಾಗಿಯೂ ಇದ್ದ ಆ ಲೇಖನ

ವನ್ನು ವಲ್ಲಭದೇವನು ಸುಟ್ಟುಬಿಡಲಿಲ್ಲವೇ ತಾನು ಮಾಡಿದ ಈ ಕೆಲಸವನ್ನು ಆರೊಡನಾದರೂ ಹೇಳಿಬಿಡುವೆನೋ ಎಂಬ ದಿಗಿಲಿನಿಂದ ನನ್ನನ್ನು ಎಲ್ಲಿಯೋ ದೂರ ದೇಶದಲ್ಲಿ ಬಿಟ್ಟುಬರುವಂತೆ ಇವರಿಗೆ ಅಪ್ಪಣೆಮಾಡಿರಬಹುದೆಂದು ಊಹಿಸುತ ಸುಮ್ಮನೆ ಕುಳಿತಿದ್ದನು ಅಷ್ಟುಹೊತ್ತಿಗೆ ಕತ್ತಲೆಯು ದಟ್ಟವಾಗಿ ಕವಿಯಿತು

ಸುಮಾರು ಆವ ಕಡೆಗೆ ಹೋಗುತ್ತಿರುವೆವೋ ನೋಡೋಣವೆಂದು ಧರ್ಮ ದೇವನು ಆ ಗಾಢಾಂಧಕಾರದಲ್ಲಿ ನಾಲ್ಕುದಿಕ್ಕುಗಳನ್ನೂ ಚೆನ್ನಾಗಿ ನೋಡಲು, ಪಾಳೆ ಯದ ಒಂದು ಮನೆಯಲ್ಲಿ ದೀಪದ ಬೆಳಕು ಅವನಿಗೆ ಕಂಡಿತು. ಆ ಮನೆಗೆ ಇದಿರಾಗಿ ಸಮುದ್ರತೀರದಲ್ಲಿ ಒಬ್ಬ ಹೆಂಗಸು ನಿಂತಿರುವಂತೆ ತೋರಿತು. ಆ ಹೆಂಗಸೇ ಲಲಿತಾಂಗಿ ಯೆಂದೂ ಆ ಮನೆಯೇ ಅವಳ ಮನೆಯೆಂದೂ ನಿಶ್ಚಯಿಸಿದನು. ಅವಳ ಮನೆಗೂ ದೋಣಿಯು ಆಗ ಹೋಗುತ್ತಲಿದ್ದ ಸ್ಥಳಕ್ಕೂ ಸುಮಾರು ಮುನ್ನೂರು ಗಜಗಳು ದೂರ ವಿರಬಹುದು ತನ್ನ ಪ್ರಿಯನು ಇಷ್ಟು ಸಮೀಪದಲ್ಲಿರುವನೆಂದು ಲಲಿತಾಂಗಿಗೆ ಎಳ್ಳಷ್ಟೂ ತಿಳಿದಿರಲಿಲ್ಲ. ಅಷ್ಟುಹೊತ್ತಿನಲ್ಲಿ ಅವಳೊಬ್ಬಳೇ ಆ ಪಾಳೆಯದಲ್ಲಿ ಮಲಗದೆ ಇದ್ದವಳು ಧರ್ಮದೇವನು ಆಗ ಗಟ್ಟಿಯಾಗಿ ಕೂಗಿದ್ದರೆ ಅವಳಿಗೆ ಕೇಳಿಬರುತ್ತಲಿದ್ದಿತು. ಆದರೆ ಸ್ವಾಭಿಮಾನವು ಅವನನ್ನು ಕೂಗಗೊಡಿಸಲಿಲ್ಲ ಅವನು ಆಗ ಕೂಗಿದ್ದರೆ ಕಾವಲು ಗಾರರೆಲ್ಲರೂ ಅವನಿಗೆ ಹುಚ್ಚು ಹಿಡಿಯಿತೆಂದು ನಿಸ್ಸಂದೇಹವಾಗಿ ತಿಳಿದುಕೊಳ್ಳುತ್ತಿದ್ದರು.

ಧರ್ಮದೇವನ ಮನಸ್ಸು ಲಲಿತಾಂಗಿಯಲ್ಲಿಯೇ ಮಗ್ನವಾಗಿದ್ದುದರಿಂದ ಅವನು ಆಮನೆಯ ದೀಪವನ್ನೇ ನೋಡುತಲಿದ್ದನು ಕೊನೆಗೆ ಅವನ ದೃಷ್ಟಿಗೂ ಆದೀಪದ ಬೆಳಕಿಗೂ ನಡುವೆ ಒಂದು ದಿಣ್ಣೆಯು ಅಡ್ಡಲಾಗಿ ಬಂದುದರಿಂದ ಧರ್ಮದೇವನು ಬೇರೆ ಕಡೆಗೆ ತಿರುಗಿದನು ಅಷ್ಟುಹೊತ್ತಿಗೆ ದೋಣಿಯು ಸಮುದ್ರಮಧ್ಯವನ್ನು ಸೇರಿ ಗಾಳಿಯ ಸಹಾಯದಿಂದ ಬಹು ವೇಗವಾಗಿ ಹೋಗುತಲಿದ್ದಿತು.

ಕಾವಲುಗಾರರನ್ನು ಕುರಿತು ಆವವಿಧವಾದ ಪ್ರಶ್ನೆಯನ್ನೂ ಮಾಡಬಾರದೆಂದಿದ್ದರೂ ಮನಸ್ಸು ನಿಲ್ಲದೆ, ಧರ್ಮದೇವನು ತನ್ನ ಪಕ್ಕದಲ್ಲಿದ್ದವನನ್ನು ನೋಡಿ, ಅಯ್ಯಾ ಸ್ನೇಹಿತನೇ! ನಾನು ನೌಕಾಧಿಪತಿಯ ಸಹಾಯಕನಾದ ಧರ್ಮದೇವನು. ನಿಷ್ಕಾರಣವಾಗಿ ರಾಜ ದ್ರೋಹಿ ಎಂದು ನನ್ನನ್ನು ನ್ಯಾಯಾಧಿಪತಿಯ ಬಳಿಗೆ ಕರೆದುಕೊಂಡು ಹೋದಾಗ, ನಾನು ತಪ್ಪುಮಾಡಿದವನಲ್ಲವೆಂದೂ, ನನ್ನನ್ನು ಜಾಗ್ರತೆಯಾಗಿಯೇ ಬಿಟ್ಟುಬಿಡುವರೆಂದೂ,

ಅವನು ಹೇಳಿರುವನು ಈಗ ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗಬೇಕೆಂದಿರುವಿರಿ ಎಂದು ಕೇಳಿದನು.

ಆದಕ್ಕಾಕಾವಲುಗಾರನು ಹಿಂದು ಮುಂದು ನೋಡುತ ತನ್ನ ಪಕ್ಕದಲ್ಲಿದ್ದ ಮತ್ತೊಬ್ಬನನ್ನು ನೋಡಿದನು, ಆತನು ಆದಕ್ಕೇನು, ಹೇಳಬಹುದೆಂದು ಸೈಗೆಮಾಡಲು, ಅವನು ಧರ್ಮದೇವನನ್ನು ನೋಡಿ ನೀನು ಮಲಯಪುರದ ನಿವಾಸಿಯಾಗಿಯೂ ನೌಕಾಧಿಪನಾಗಿಯೂ ಇದ್ದು ನಾವು ಈಗ ಎಲ್ಲಿಗೆ ಹೋಗುತ್ತಿರುವೆವೆಂಬುದನ್ನು ಊಹಿಸಲಾರೆಯೋ ಎಂದನು

ನಾನು ಊಹಿಸಲಾರೆ ಅದು ಸುಳ್ಳು.

ಸತ್ಯವಾಗಿಯೂ ಊಹಿಸಲಾರೆ, ಆದುದರಿಂದ ಅದನ್ನು ನೀನು ನನಗೆ ತಿಳಿಸು.

ತಿಳಿಸಲಿಕ್ಕೆ ಅಪ್ಪಣೆಯಿಲ್ಲವಲ್ಲಾ.

ಇನ್ನು ಹತ್ತುನಿಮಿಷ, ಅಥವಾ ಅರ್ಧಘಂಟೆ ಅಥವಾ ಒಂದು ಘಂಟೆಯೊಳಗೆ ಗೊತ್ತಾಗುವ ವಿಷಯವನ್ನು ನನಗೆ ಈಗ ತಿಳುಹಿದರೆ ಅಪ್ಪಣೆಯನ್ನು ಮೀರಿದಂತಾಗುವುದಿಲ್ಲ ಇದೂ ಅಲ್ಲದೆ ನಾನು ತಪ್ಪಿಸಿಕೊಂಡು ಹೋಗಲಾರೆನೆಂಬುದನ್ನು ನೀನು ಬಲ್ಲೆ.

ಹಾಗಾದರೆ ನಿಂತುಕೊಂಡು ಆಕಡೆ ನೋಡು.

ಧರ್ಮದೇವನು ಎದ್ದುನಿಂತು ಕಾವಲುಗಾರನು ತೋರಿಸಿದ ಕಡೆ ನೋಡಲು, ಸುಮಾರು ಮುನ್ನೂರು ಗಜಗಳ ದೂರದಲ್ಲಿ ಜಾಲದುರ್ಗದ ಬೆಟ್ಟವು ಭೂಮಿಗೂ ಆಕಾಶಕ್ಕೂ ಕೀಲುಕೊಟ್ಟಂತೆ ನಿಂತಿರುವ ಕಾಳರಾಕ್ಷಸನಂತೆ ಕಾಣಿಸಿತು ಆ ದ್ವೀಪವು ಒಂದ ದೊಡ್ಡ ಬಂಡೆ ಒಂದು ಪಕ್ಕದಲ್ಲಿ ದೊಡ್ಡ ಬೆಟ್ಟ, ಇನ್ನೊಂದು ಕಡೆ ಸುಮಾರು ಮುನ್ನೂರು ವರ್ಷಗಳ ಹಿಂದೆ ಕಟ್ಟಿದ ಒಂದು ಕೋಟೆ ಅದರಲ್ಲಿ ಬಹು ಬಲವಾದ ಕಾರಾಗೃಹವು ಇದ್ದಿತು ಅಂದಿನಿಂದ ಇಲ್ಲಿ ಅನೇಕಭಯಂಕರವಾದ ಕೃತ್ಯಗಳು ನಡೆದಿದ್ದುವು. ಧರ್ಮದೇವನು ಜಯಲಕ್ಷ್ಮಿಯ ನಾವೆಯಲ್ಲಿ ಓಡಾಡುವಾಗಲೆಲ್ಲಾ ವಿಶೇಷವಾಗಿ ಆ ಕೃತ್ಯಗಳನ್ನೆಲ್ಲಾ ಕೇಳಿದ್ದನು ಆದುದರಿಂದ ತನ್ನನ್ನು ಕೊಲ್ಲುವುದಕ್ಕಾಗಿಯೇ ಅಲ್ಲಿಗೆ ಕರೆದುಕೊಂಡು ಹೋಗುತ್ತಿರುವರೆಂದು ಭಾವಿಸಿ ಅಲ್ಲಿಗೆ ನಾವು ಏತಕ್ಕೆ ಹೋಗುವುದು? ಅದು ರಾಜದ್ರೋಹಿಗಳ ಸೆರೆಮನೆಯಲ್ಲವೆ? ಆವ ತಪ್ಪನ್ನೂ ಮಾಡದ ನನ್ನನ್ನು

ಅಲ್ಲಿ ಇಡುವರೋ? ಅಲ್ಲಿ ನ್ಯಾಯಾಧಿಪರಾರಾದರೂ ಉಂಟೋ? ಎಂದು ತನಗೆ ತೋರಿದ ಪ್ರಶ್ನೆಗಳನ್ನೆಲ್ಲಾ ಕಾವಲುಗಾರನಿಗೆ ಹಾಕಿದನು.

ಅದಕ್ಕಾಕಾವಲುಗಾರನು ಅಲ್ಲಿ ಬಂದಿಶಾಲಾಧಿಕಾರಿಯೂ, ಬಂದಿವಾನರೂ, ಕಾವಲುಗಾರರೂ, ಬಂದಿವಾನರಿಗೆ ಆಹಾರಾದಿಗಳನ್ನು ಕೊಡಲು ಆಳುಗಳೂ, ದಪ್ಪವಾದ ಗೋಡೆಗಳುಳ್ಳ ಬಂದಿ ಮನೆಯೂ ವಿನಾ ಮತ್ತಾವುದೂ ಇಲ್ಲ.

ಹಾಗಾದರೆ ನನ್ನನ್ನು ಆ ಬಂದಿಶಾಲೆಯಲ್ಲಿ ಸೇರಿಸುವರೋ?

ಇರಬಹುದು　　ವಿಚಾರಣೆಯೇ ಆಗಲಿಲ್ಲವಲ್ಲಾ?

ಎಲ್ಲವೂ ಆಗಲೇ ಆಗಿರಬೇಕು.

ವಲ್ಲಭದೇವನು ನನಗೆ ಮಾಡಿದ ವಾಗ್ದಾನವೇನಾಯಿತು?

ಅವನು ನಿನಗೆ ಏನು ವಾಗ್ದಾನಮಾಡಿದ್ದನೋ ನಾವರಿಯೆವು. ನಾವೇನೋ ನಿನ್ನನ್ನು ಜಾಲದುರ್ಗದಲ್ಲಿ ಬಿಟ್ಟು ಬರುವೆವು ಎಂದಕೂಡಲೇ ಧರ್ಮದೇವನು ಸಮುದ್ರದಲ್ಲಿ ದುಮ್ಮಿಕ್ಕಲು ಪ್ರಯತ್ನಮಾಡಿ ಮೇಲಕ್ಕೆ ಹಾರಿದನು. ಓಹೋ! ಧರ್ಮದೇವ! ಏನಮಾಡುತ್ತಲಿದೀಯೆ? ಎಲ್ಲರೂ ಸಹಾಯಕ್ಕೆ ಬನ್ನಿ, ಬನ್ನಿ, ಬನ್ನಿ ಎಂದು ಕೂಗಿದ ಕಾವಲುಗಾರನ ಕೊರಲನ್ನು ಕೇಳಿ ಇಬ್ಬರು ಕಾವಲುಗಾರರು ಓಡಿ ಬಂದು ಮೇಲಕ್ಕೆ ಹಾರಿದ್ದ ಧರ್ಮದೇವನ ಎರಡು ಕಾಲುಗಳನ್ನೂ ಗಟ್ಟಿಯಾಗಿ ಹಿಡಿದು ಅವನನ್ನು ದೋಣಿಯೊಳಕ್ಕೆ ಸೆಳೆಯಲು ಅವನು ದೋಣಿಯೊಳಗೆ ಬಿದ್ದನು. ಒಡನೆಯೇ ಅವನ ಸಂಗಡ ಮಾತನಾಡುತಲಿದ್ದ ಕಾವಲುಗಾರನು ಅವನ ಎದೆಯ ಮೇಲೆ ತನ್ನ ಮಂಡಿಯನ್ನು ಊರಿ, ಏನೋ! ನಿನ್ನ ಯೋಗ್ಯತೆಯು ಕಂಡುಬಂದಿತು; ಇನ್ನು ಮೇಲೆ ಮೃದುವಾದ ಮಾತುಗಳನ್ನು ಆಡುವ ನಿನ್ನಂಥಾ ದೊಡ್ಡ ಮನುಷ್ಯನನ್ನು ನಾನು ಎಂದಿಗೂ ನಂಬುವುದಿಲ್ಲ. ನನಗೆ ಕೊಟ್ಟಿದ್ದ ಅಪ್ಪಣೆಗಳಲ್ಲಿ ಮೊದಲ ಅಪ್ಪಣೆಯನ್ನು ಮೀರಿದೆನು. ತಪ್ಪಿಸಿಕೊಂಡು ಹೋಗುವ ಯತ್ನವನ್ನು ನೀನು ಪುನಃ ಮಾಡಿದೆಯೆಂದರೆ ನಿನ್ನನ್ನು ಈ ಕತ್ತಿಯಿಂದ ತಿವಿದು ಕೊಲ್ಲುವ ಎರಡನೆಯ ಅಪ್ಪಣೆಯನ್ನು ಎಂದಿಗೂ ಮೀರಲಾರೆ ಎಂದು ಧರ್ಮದೇವನ ಎದೆಯ ಮೇಲೆ ತನ್ನ ಕೈಯಲ್ಲಿದ್ದ ಕತ್ತಿಯ ಕೊನೆಯನ್ನು ಮುಟ್ಟಿಸಿದನು.

ಆಗ ಧರ್ಮದೇವನಿಗೆ ಮೊದಲು ಹೇಗಾದರೂ ಪ್ರಯತ್ನಮಾಡಿ ತಪ್ಪಿಸಿಕೊಂಡು

ಹೋಗಬೇಕು ; ಒಂದುವೇಳೆ ಆ ಪ್ರಯತ್ನದಲ್ಲಿ ತನ್ನನ್ನು ಅವರು ಕೊಂದರೆ ಕಷ್ಟವೇ ತೀರಿಹೋಗುವುದೆಂದು ಯೋಚನೆಯುಂಟಾಯಿತು ; ಉತ್ತರಕ್ಷಣದಲ್ಲಿಯೇ ವಲ್ಲಭ ದೇವನ ವಾಗ್ದಾನವು ನೆನಪಿಗೆ ಬಂದಿತು. ಅದೂ ಅಲ್ಲದೆ ಕಾವಲುಗಾರರಿಂದ ದೋಣಿ ಯಲ್ಲಿ ಮರಣವನ್ನು ಹೊದ್ದುವುದು ಅವಮಾನವೆಂದು ತೋರಿ ಅವನು ಹಲ್ಲುಗಳನ್ನು ಕಡಿಯುತ್ತ ಕೈಗಳನ್ನು ಹಿಸಿಕಿಕೊಳ್ಳುತ್ತ ಕೋಪಾವೇಶದಿಂದ ಪ್ರಜ್ಞೆತಪ್ಪಿದವನಾಗಿ ಸುಮ್ಮನೆ ಬಿದ್ದಿದ್ದನು.

ಈ ವೇಳೆಗೆ ದೋಣಿಯು ಜಾಲದುರ್ಗದ ದಡವನ್ನು ಸೇರಿತು ನಾವಿಕನೊ ಬ್ಬನು ನೀರಿಗೆ ದುಮ್ಮಿಕ್ಕಿ ದೋಣಿಯನ್ನು ಗಟ್ಟಕ್ಕೆ ಎಳೆದು ತಂದನು ಕಾವಲುಗಾರರು ಮೂವರು ಎರಡು ಕೈಗಳನ್ನೂ ಅಂಗಿಯನ್ನೂ ಹಿಡಿದು ಧರ್ಮದೇವನನ್ನು ಮೇಲಕ್ಕೆ ಎತ್ತಿ ದಡಕ್ಕೆ ಸಾಗಿಸಿದರು. ಮಿಕ್ಕವರು ಹಿಂದೆ ಹೋದರು ಧರ್ಮದೇವನಿಗೆ ಆಗ ಇನ್ನೂ ಪ್ರಜ್ಞೆಸರಿಯಾಗಿ ಬಂದಿರಲಿಲ್ಲವಾದುದರಿಂದ ಕೆಲವು ಮೆಟ್ಟಲುಗಳು ಇದ್ದ ಹಾಗೂ, ಅವುಗಳನ್ನು ತಾನು ಹತ್ತಿದ ಹಾಗೂ ಆ ಹಂತಗಳ ಎರಡು ಪಕ್ಕದಲ್ಲಿಯೂ ಸಿಪಾಯಿಗಳು ನಿಂತಿದ್ದ ಹಾಗೂ, ಅನಂತರ ಒಂದು ಬಾಗಿಲನ್ನು ದಾಟಿ ತಾನು ಅಂಗಳ ದೊಳಗೆ ಹೋದ ಹಾಗೂ, ಒಳಗೆ ಪ್ರವೇಶವನ್ನು ಮಾಡುತಲೆ ಜನರು ಬಾಗಿಲನ್ನು ಮುಚ್ಚಿದ ಹಾಗೂ, ಆ ಅಂಗಳದಲ್ಲಿ ಹತ್ತುನಿಮಿಷ ನಿಂತಿದ್ದ ಹಾಗೂ, ಅವನಿಗೆ ತೋರಿ ಇವೆಲ್ಲಾ ಕನಸೆಂದು ತಿಳಿದುಕೊಂಡಿದ್ದನು. ಅಷ್ಟುಹೊತ್ತಿಗೆ ಅವನಿಗೆ ಎಚ್ಚರಿಕೆಯಾ ಯಿತು ಆಗ ಬಂದಿಯೆಲ್ಲಿ ಎಂದು ಕೇಳಿದ ಮಾತೂ, ಅದಕ್ಕೆ ಇಲ್ಲಿದಾನೆ ಎಂದು ಹೇಳಿದ ಬದಲೂ, ಧರ್ಮದೇವನಿಗೆ ಕೇಳಿಸಿತು. ಅವನು ನನ್ನ ಹಿಂದೆ ಬರಲಿ ಎಂದು ಹೇಳಲು, ಕಾವಲುಗಾರರು ಅವನನ್ನು ಆ ಆಳಿನ ಬಳಿಗೆ ನೂಕಿದರು ಧರ್ಮದೇವನು ಅವನ ಹಿಂದೆ ಹೋದನು. ಆಳು ಕೈಯಲ್ಲಿ ಒಂದು ಸಣ್ಣ ದೀಪವನ್ನು ಹಿಡಿದುಕೊಂಡು ಮತ್ತೊಂದು ಕೈಯಲ್ಲಿ ಬೀಗದ ಕೈಗಳ ಗೊಂಚಲನ್ನು ಇಟ್ಟುಕೊಂಡು ಒಂದು ಸಣ್ಣ ಕೋಣೆಗೆ ಕರೆದುಕೊಂಡು ಹೋಗಿ ಅದರ ಬೀಗವನ್ನು ಬಿಚ್ಚಿ ಧರ್ಮದೇವನನ್ನು ಒಳಗೆ ನೂಕಿ, ಈಗ ಹೊತ್ತಾಯಿತು ; ಬಂಧನಾಲಯದ ಅಧಿಕಾರಿಯು ಮಲಗಿದ್ದಾನೆ, ಈದಿನ ಇಲ್ಲಿಯೇ ಇರು. ಇಗೋ! ತಿಂಡಿ, ನೀರು, ಮಲಗುವುದಕ್ಕೆ ಸ್ವಲ್ಪ ಒಣ ಹುಲ್ಲು ಎಂದು ಹೇಳಿ ದೀಪವನ್ನು ತೆಗೆದುಕೊಂಡು ಬಾಗಿಲನ್ನು ಎಳೆದು ಬೀಗವಂ

ಹಾಕಿಕೊಂಡು ಹೊರಟುಹೋದನು. ತಿಂಡಿ ಆವುದು, ನೀರೆಲ್ಲಿ, ಹುಲ್ಲು ಆವ ಮೂಲೆ ಯಲ್ಲಿರುವುದು ಎಂದು ನೋಡಿಕೊಳ್ಳಲು ಕೂಡ ಅವನಿಗೆ ನಾವಕಾಶವಿರಲಿಲ್ಲ

ಕೋಣೆಯು ಅಂಧಕಾರಮಯವಾಗಿದ್ದಿತು. ಬಂದಿಯುವನು ತನ್ನನ್ನು ಕೋಣೆಗೆ ತಳ್ಳಿದಾಗ ಆವ ಸ್ಥಳದಲ್ಲಿ ನಿಂತಿದ್ದನೋ ಅದೇ ಸ್ಥಳದಲ್ಲಿ ರಾತ್ರಿಯೆಲ್ಲಾ ಧರ್ಮದೇವನು ನಿಂತಿದ್ದನು. ಆಹಾರದ ಯೋಚನೆಯಾಗಲಿ ಮಲಗುವ ಯೋಚನೆಯಾಗಲಿ ಅವನಿಗೆ ಸ್ವಲ್ಪವೂ ಇರಲಿಲ್ಲ ಬೆಳಗಾಗುತಲೇ ಬಂದಿಯುವನು ಧರ್ಮದೇವನ ಕೊಟ್ಟಡಿಯ ಬಾಗಿಲನ್ನು ತೆಗೆದು ನೋಡಲು ಅವನು ಗೂಟನೆಟ್ಟಂತೆ ನಿಂತಿದ್ದನು; ಕಣ್ಣುಗಳು ಕೆಂಪಾಗಿದ್ದುವು; ಕಣ್ಣುಗಳಿಂದ ನೀರಿನ ಧಾರೆಗಳು ಹರಿಯುತಲಿದ್ದುವು. ಬಾಗಿಲನ್ನು ತೆಗೆದು ಆಳು ಒಳಗೆ ಬಂದುದನ್ನು ಧರ್ಮದೇವನು ಕಾಣನು. ಸ್ತಂಭೀಭೂತವಾಗಿ ನಿಂತಿದ್ದ ಆವನ ಭುಜದ ಮೇಲೆ ಆಳು ಕೈಯಿಡಲು ಧರ್ಮದೇವನಿಗೆ ಎಚ್ಚರಿಕೆ ಯಾಯಿತು.

ಆಗ ಆಳು ಅವನನ್ನು ನೋಡಿ ನೀನು ರಾತ್ರಿಯೆಲ್ಲಾ ಮಲಗಲೇ ಇಲ್ಲವೋ ಎನ್ನಲು, ನನಗೆ ತಿಳಿಯದು ಎಂದು ಹೇಳಿದನು.

ನಿನಗೆ ಹಸಿವು ಆಗುವುದೋ? ನಾನು ಕಾಣೆನು.

ಆಗ ಆಳು ಧರ್ಮದೇವನನ್ನು ದೃಷ್ಟಿಸಿ ನೋಡಿ ನಿನಗೇನಾದರೂ ಬೇಕೋ ಎಂದು ಕೇಳಲು, ನಾನು ಬಂಧನಾಲಯದ ಯಜಮಾನನನ್ನು ನೋಡಬೇಕು ಎಂದನು. ಅದಕ್ಕೆ ಆಳು ಆವ ಬದಲನ್ನೂ ಹೇಳದೆ ಬಾಗಿಲನ್ನು ಬೀಗಹಾಕುವ ಪ್ರಯತ್ನಮಾಡಲು ಧರ್ಮದೇವನು ಕೈನೀಡಿ ಅವುದೋ ಒಂದು ಮಾತನ್ನಾಡಲು ಯತ್ನಿಸಿದನು. ಅಷ್ಟ ರಲ್ಲಿಯೇ ಆಳು ಬೀಗವನ್ನು ಹಾಕಿಕೊಂಡು ಹೊರಟುಹೋದನು.

ಅದುವರೆಗೆ ತಡೆದಿದ್ದ ಧರ್ಮದೇವನ ಸಂಕಟಗಳೆಲ್ಲವೂ ಆಗ ಉಕ್ಕಿಬಂದು, ಆವ ತಪ್ಪನ್ನೂ ಮಾಡದ ನನಗೆ ಇಂಥ ಅನ್ಯಾಯದ ದಂಡನೆಯುಂಟಾಯಿತಲ್ಲಾ ಎಂದು ನೆಲದ ಮೇಲೆ ಬಿದ್ದು ಅಳುತ್ತಾ ಉರುಳಾಡಿದನು. ಆಮೇಲೆ ಎದ್ದು ಆಹಾರವನ್ನು ಸ್ವಲ್ಪವಾದರೂ ಮುಟ್ಟದೆ ಕಾಡುಮೃಗಗಳು ಬೋನಿನಲ್ಲಿದ್ದರೆ ಹೇಗೆ ಸುಮ್ಮನೆ ಸುತ್ತು ತ್ತಿರುವುವೋ ಹಾಗೆಯೇ ಧರ್ಮದೇವನು ಆ ಸಣ್ಣ ಕೊಟ್ಟಡಿಯಲ್ಲಿ ಸುತ್ತುತ್ತಲಿದ್ದನು. ಆಗ ಅವನಿಗೆ ಒಂದು ಆಲೋಚನೆ ವಿನಾ ಮತ್ತಾವುದೂ ಇರಲಿಲ್ಲ. ದೋಣಿಯಲ್ಲಿ

ದ್ದಾಗ ಸಮುದ್ರಕ್ಕೆ ಸುಲಭವಾಗಿ ದುಮ್ಮಿಕ್ಕಿ ನೀರಿನಲ್ಲಿ ಮುಳುಗಿ ಬಹು ದೂರದವರೆಗೂ ಈಸಿಕೊಂಡು ಹೋಗಿ, ಆ ಮೇಲೆ ಆವುದಾದರೂ ಅನ್ಯದೇಶದ ಹಡಗನ್ನು ಸೇರಿ ದೂರದೇಶಕ್ಕೆ ಹೋಗಿ ಅಲ್ಲಿಗೆ ತನ್ನ ತಂದೆಯನ್ನೂ ಲಲಿತಾಂಗಿಯನ್ನೂ ಕರೆಸಿಕೊಂಡು ಸುಖವಾಗಿರಬಹುದಾಗಿದ್ದಿತು. ಆ ಕೆಲಸವನ್ನು ಮಾಡದೆ ಬಿಟ್ಟುದು ಬಹುಳ ಅವಿವೇಕ ವಾಯಿತೆಂದು ಸಂಕಟಪಡುತ್ತಾ ಇದ್ದನು. ಕೊನೆಗೆ ಕೈಕಾಲು ಸೋತುಹೋಗಿ ಆ ಕೊಟಡಿಯಲ್ಲಿ ಒಂದು ಮೂಲೆಯಲ್ಲಿ ಹಾಕಿದ್ದ ಹುಲ್ಲಿನ ಮೇಲೆ ಬಿದ್ದುಕೊಂಡನು.

ಮಾರನೇದಿನ ಕ್ಲೃಪ್ತಕಾಲಕ್ಕೆ ಸರಿಯಾಗಿ ಆಳು ಬಂದು ಧರ್ಮದೇವನನ್ನು ನೋಡಿ ಈದಿನ ಸ್ವಲ್ಪ ಸುಟಿಯಾಗಿದ್ದೀಯೆ; ಹೀಗೆ ಧೈರ್ಯವನ್ನು ತಾಳು. ನನ್ನಿಂದೇ ನಾದರೂ ಆಗಬೇಕಾಗಿದ್ದರೆ ಹೇಳು, ಎಂದನು.

ನಾನು ಬಂದಿಪಾಲನನ್ನು ನೋಡಬೇಕು. ಅದು ಅಸಾಧ್ಯ.

ಏಕೆ? ಅದು ಇಲ್ಲಿಯ ಕಟ್ಟಲೆಗಳಿಗೆ ವಿರೋಧವಾದ ಕೆಲಸ; ಆದುದ ರಿಂದ ಅದನ್ನು ಕೇಳಬಾರದು.

ಮತ್ತಾವುದನ್ನು ಕೇಳಬಹುದು?

ತಿನ್ನುವುದಕ್ಕೆ ಒಳ್ಳೆ ಆಹಾರಗಳನ್ನೂ, ಓದಲಿಕ್ಕೆ ಪುಸ್ತಕಗಳನ್ನೂ ದುಡ್ಡು ಕೊಟ್ಟು ಕೇಳಲುಬಹುದು. ಇದಲ್ಲದೆ ದಿನಕ್ಕೊಂದು ಸಾರಿ ಅಂಗಳದಲ್ಲಿ ತಿರುಗಾಡಲು ಅಪ್ಪಣೆಯನ್ನು ಕೇಳಲುಬಹುದು.

ನನಗೆ ಇವುಗಳಾವುದೂ ಬೇಡ. ಬಂಧನಾಲಯದ ಪಾಲಕನನ್ನು ನೋಡ ಬೇಕು.

ಆಗದ ಕೆಲಸವನ್ನು ಹೇಳಿ ನನ್ನನ್ನು ಪೀಡಿಸಿದರೆ ನಾನು ಇನ್ನು ಮೇಲೆ ಆಹಾರ ವನ್ನೇ ತರುವುದಿಲ್ಲ.

ನೀನು ಆಹಾರವನ್ನು ತಂದು ಕೊಡದಿದ್ದರೆ ನನಗೆ ಮತ್ತೂ ಅನುಕೂಲವಾ ಯಿತು. ಅದು ಹೇಗೆ?

ಆಹಾರವಿಲ್ಲದಿದ್ದರೆ ಜಾಗ್ರತೆಯಾಗಿ ನಾಯುವೆನು. ಎಷ್ಟು ಬೇಗನೆ ಸತ್ತರೆ ಅಷ್ಟುಬೇಗನೆ ನನ್ನ ಕಷ್ಟವು ಪರಿಹಾರವಾಗುವುದು.

ಹೀಗೆ ಮಾತನ್ನಾಡುವ ಇವನು ತನಗೆ ಮರಣವೇ ಸುಖವೆಂದು ಭಾವಿಸಿರುವನು

ಎಂದು ಬಂದಿಯ ಆಳು ತಿಳಿದುಕೊಂಡನು. ಈ ಕಾರಾಗೃಹದಲ್ಲಿ ಆಳುಗಳಿಗೆ ಸಂಬಳ ವಲ್ಲದೆ ಬಂದಿಯವರ ತಲೆ ಒಂದಕ್ಕೆ ಇಷ್ಟೆಂದು ಸರಕಾರದವರು ಕೊಡುತ್ತಲಿದ್ದರು. ಧರ್ಮದೇವನು ಸತ್ತರೆ ಅವನಿಗಾಗಿ ಸಿಕ್ಕುತಲಿದ್ದ ಆದಾಯಕ್ಕೆ ಲೋಪವುಂಟಾಗುವು ದೆಂಬ ಭೀತಿಯಿಂದ, ಆ ಆಳು ವಿನಯದೊಡನೆ ಅಯ್ಯಾ ಧರ್ಮದೇವ, ಅಸಾಧ್ಯವಾದು ದನ್ನು ಕೇಳಿ ಏನು ಪ್ರಯೋಜನ? ನಿನ್ನ ನಡತೆಯು ಸರಿಯಾಗಿದ್ದರೆ ನಿನ್ನನ್ನು ಅಡಿಗಡಿಗೆ ಅಂಗಳದಲ್ಲಿ ತಿರುಗಾಡಲು ಬಿಡುವರು ಆಗ ಇಲ್ಲಿಯ ಅಧಿಕಾರಿಯನ್ನು ನೋಡಿ ಮಾತನಾಡಿಸಲು ಅನುಕೂಲವಾಗುವುದು, ಎಂದನು.

ಹಾಗೆ ಅನುಕೂಲವಾಗಲು ಸುಮಾರು ಎಷ್ಟುದಿವಸಗಳು ಹಿಡಿಯುವುವು?

ದಿವಸಗಳೋ, ಮಾಸಗಳೋ, ವರ್ಷಗಳೋ, ಹೇಗೆ ಹೇಳುವುದು.

ಅಷ್ಟುದಿವಸಗಳು ನನ್ನಿಂದ ಕಾದಿರುವುದಕ್ಕಾಗುವುದಿಲ್ಲ ನಾನು ಅವನನ್ನು ಈಗಲೇ ನೋಡಬೇಕು

ಆಗದ ಹೋಗದ ಕೆಲಸಕ್ಕೆ ಸುಮ್ಮನೆ ಯೋಚನೆಮಾಡುತ್ತಿದ್ದರೆ ನಿನಗೆ ಜಾಗ್ರತೆ ಯಾಗಿಯೇ ಹುಚ್ಚು ಹಿಡಿದುಹೋಗುತ್ತದೆ.

ಅದು ನಿಜವೋ? ಎಂದು ಧರ್ಮದೇವನು ಆಳನ್ನು ಕೇಳಿದನು

ಅದಕ್ಕೆ ಸಂದೇಹವೇ ಇಲ್ಲ ಈ ಕೊಟ್ಟಡಿಯಲ್ಲಿ ನಿನಗೆ ಮೊದಲು ಒಬ್ಬ ಸನ್ಯಾಸಿಯು ಇದ್ದನು. ತನ್ನನ್ನು ಸೆರೆಯಿಂದ ಬಿಟ್ಟರೆ ಕಾರಾಲಯದ ಅಧಿಪತಿಗೆ ಒಂದು ಲಕ್ಷ ವರಹಗಳನ್ನು ಕೊಡುವೆನೆಂದೂ ಅವನನ್ನು ನೋಡಿಸೆಂದೂ ಅವನೂ ನಿನ್ನಂತೆಯೇ ನನ್ನನ್ನು ಪೀಡಿಸುತಲಿದ್ದನು. ಕೊನೆಗೆ ಅವನಿಗೆ ಹುಚ್ಚು ಹಿಡಿಯಿತು.

ಅವನು ಈ ಕೋಣೆಯನ್ನು ಬಿಟ್ಟು ಎಷ್ಟು ದಿವಸಗಳಾದುವು?

ನಾಲ್ಕು ವರ್ಷಗಳು.　　ಅವನಿಗೆ ಬಿಡುಗಡೆಯಾಯಿತೋ?

ಇಲ್ಲ. ಇದರ ಕೆಳಗಣ ಅಂಧಕೂಪವೆಂಬ ನೆಲಮಾಳಿಗೆಯಲ್ಲಿ ಹಾಕಿದ್ದಾರೆ.

ಅಯ್ಯಾ! ನನ್ನ ಪಾಲಿಗೆ ನೀನೇ ಇಲ್ಲಿಯ ಯಜಮಾನನು. ನಾನು ಸನ್ಯಾ ಸಿಯೂ ಅಲ್ಲ, ಹುಚ್ಚನೂ ಅಲ್ಲ ಮುಂದೆ ಏನಾದರೂ ಈ ಕಾರಾಗೃಹದ ಪ್ರಭಾವ ದಿಂದ ಹುಚ್ಚು ಹಿಡಿಯುವುದೋ ಏನೋ ಗೊತ್ತಿಲ್ಲ. ಇದಲ್ಲದೆ ನನ್ನಲ್ಲಿ ಅಷ್ಟು ದುಡ್ಡೂ

ಇಲ್ಲ. ನಾನು ಒಂದು ಕೆಲಸವನ್ನು ಹೇಳುತ್ತೇನೆ; ಅದನ್ನು ನೀನು ಮಾಡಿಕೊಟ್ಟ ಯಾದರೆ ನನ್ನಲ್ಲಿರುವ ಐದುನೂರು ವರಹಗಳನ್ನು ನಿನಗೆ ಕೊಡುವೆನು.

ಅದೇನು ಕೆಲಸ?

ಮಲಯಪಟ್ಟಣದಲ್ಲಿ ಭುಜಂಗಭೂಷಣನೆಂಬ ಒಬ್ಬ ಮುದುಕನೂ, ಲಲಿತಾಂಗಿ ಯೆಂಬೊಬ್ಬ ಯುವತಿಯೂ ಇರುವರು. ಅವರಿಬ್ಬರಿಗೂ ನಾನು ಕೊಡುವ ಕಾಗದ ವನ್ನು ಕೊಟ್ಟು ಅವರಿಂದ ಉತ್ತರವನ್ನು ತರಬೇಕು.

ಒಳ್ಳೆಯ ಮಾತನಾಡಿದೆ. ನೀನು ಹೇಳಿದಂತೆ ನಾನು ಮಾಡಿದರೆ ನನ್ನ ಕೆಲ ಸವೂ ಹೋಗುವುದಲ್ಲದೆ ದಂಡನೆಯೂ ಆಗುವುದು ಈಗ ನನಗೆ ವರ್ಷಕ್ಕೆ ಐನೂರು ವರಹಗಳ ವರಮಾನವಿದೆ, ಅದನ್ನು ಕಳೆದುಕೊಳ್ಳುವುದಕ್ಕೆ ನನಗೆ ಬುದ್ಧಿಯಿಲ್ಲವೇ?

ಹಾಗಾದರೆ ನಾನು ಹೇಳಿದಂತೆ ಮಾಡಲೊಲ್ಲೆಯೋ?

ಒಲ್ಲೆನು.

ಇಗೋ ನೋಡು. ನಾನು ಹೇಳಿದ ಹಾಗೆ ನೀನು ಮಾಡದಿದ್ದರೆ ಒಂದುದಿನ ವಲ್ಲ ಒಂದುದಿನ ಬಾಗಿಲಹಿಂದೆ ಅವಿತುಕೊಂಡಿದ್ದು ನಿನ್ನ ತಲೆಯನ್ನು ಒಡೆದುಬಿಡು ವೆನು ಎಂದು ಹೇಳಿ ಧರ್ಮದೇವನು ಆ ಕೋಣೆಯಲ್ಲಿ ಹಾಕಿದ್ದ ಕಾಲುಮಣೆಯ ನ್ನೆತ್ತಿ ತಿರುಗಿಸಿ ಅವನ ಮೇಲೆ ಎಸೆಯಲು ಯತ್ನಮಾಡಿದನು.

ಅಷ್ಟರಲ್ಲಿಯೇ ಆಳು ಓಹೋ! ನನ್ನನ್ನು ಹೀಗೆಲ್ಲಾ ಹೆದರಿಸುವೆಯೋ? ಆ ಸನ್ಯಾಸಿಯು ನಿನ್ನಂತೆಯೇ ಆಡಿ ಕೊನೆಗೆ ಹುಚ್ಚನಾದನು ಆಗಲಿ, ನಾನು ಹೋಗಿ ಹೇಗಾದರೂ ಮಾಡಿ ಯಜಮಾನನನ್ನು ಕರೆದುತರುವೆನು. ಎಂದು ಹೇಳಿ ಬಾಗಿಲ ನ್ನೆಳೆದು ಬೀಗವನ್ನು ಹಾಕಿಕೊಂಡು ಹೊರಟುಹೋದನು.

ಸ್ವಲ್ಪಹೊತ್ತಿನಲ್ಲಿಯೇ ನಾಲ್ಕುಜನ ಸೈನಿಕರೊಡನೆ ಆಳು ಧರ್ಮದೇವನ ಕೊಟ್ಟ ಡಿಗೆ ಬಂದು, ಆ ಸೈನಿಕರ ನಾಯಕನಿಗೆ ಅವನನ್ನು ತೋರಿಸಿ ಇವನನ್ನು ಕೆಳಗಿನ ಅಂಧ ಕೂಪಕ್ಕೆ ಕರೆದುಕೊಂಡು ಹೋಗಿ ಬಿಡುವ ಹಾಗೆ ಯಜಮಾನನು ಅಪ್ಪಣೆ ಮಾಡಿರು ವನು ಎಂದು ಹೇಳಿದನು.

ಬಳಿಕ ಸೈನಿಕರು ಹುಚ್ಚನ ಮಗ್ಗುಲಿಗೆ ಹುಚ್ಚನನ್ನು ಸೇರಿಸುವುದು ನ್ಯಾಯವೇ ಸರಿ ಎಂದು ಧರ್ಮದೇವನನ್ನು ಬಲಾತ್ಕಾರದಿಂದ ಅಂಧಕೂಪಕ್ಕೆ ಎಳೆದುಕೊಂಡು

ಹೋಗಿ ಒಳಗೆ ತಳ್ಳಿ ನೀನು ಮಾಡಿದ ಅಪರಾಧಕ್ಕೆ ಇದೇ ಶಿಕ್ಷೆಯೆಂದು ಹೇಳಿ, ಬಾಗಿಲಿಗೆ ಬೀಗಹಾಕಿಕೊಂಡು ಹೊರಟುಹೋದರು.

ಈ ಕೂಪದಲ್ಲಿ ಕಗ್ಗತ್ತಲೆಯು ಕವಿದುಕೊಂಡಿದ್ದಿತು ಧರ್ಮದೇವನಿಗೆ ಕಣ್ಣು ಕಾಣದೆ ಕೈಗಳನ್ನು ನೀಡಿ ಆ ಕೊಟ್ಟಡಿಯ ಒಂದು ಕಡೆಯಿಂದ ಮತ್ತೊಂದು ಕಡೆಗೆ ಮೆಲ್ಲಮೆಲ್ಲಗೆ ತಿರುಗಿ ನೋಡಲು ಒಂದು ಕಡೆ ಗೋಡೆಯು ಸಿಕ್ಕಿತು. ಅದೆಲ್ಲಾ ಪಾಸಿ ಹಿಡಿದುಹೋಗಿದ್ದಿತು ಗೋಡೆಯನ್ನು ಹಿಡಿದು ಆ ಕೋಣೆಯ ಸುತ್ತಲೂ ತಿರುಗಿದನು ಅಷ್ಟು ಹೊತ್ತಿಗೆ ಕಣ್ಣಿಗೆ ಕತ್ತಲೆಯು ಸ್ವಲ್ಪ ಅಭ್ಯಾಸವಾಯಿತು. ಆಗ ಆ ಕೊಟ್ಟಡಿಯ ಮೇಲು ಭಾಗದಲ್ಲಿದ್ದ ಒಂದು ಕಿಟಿಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕಗ್ಗತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು ಆಗ ಧರ್ಮದೇವನು ಸ್ವಲ್ಪ ಯೋಚಿಸಿ "ಬಂದಿಯಾಳು ಹೇಳಿದುದು ಸರಿ; ನಾನು ಈಗಲೇ ಸ್ವಲ್ಪ ಹೆಚ್ಚು ಕಡಿಮೆ ಹುಚ್ಚ; ಸ್ವಲ್ಪ ದಿವಸಗಳು ಇಲ್ಲಿಯೇ ಇದ್ದರೆ ಪೂರಾ ಹುಚ್ಚನಾಗುತ್ತೇನೆ" ಎಂದುಕೊಂಡನು.

---

## ಒಂಬತ್ತನೆಯ ಅಧ್ಯಾಯ

### ರಾಜನ ಅಂತರ್ಗೃಹ.

ವಲ್ಲಭದೇವನು ಧರ್ಮದೇವನನ್ನು ಯಾವಜ್ಜೀವವೂ ಕಾರಾಗೃಹದಲ್ಲಿಡುವಂತೆ ಅಪ್ಪಣೆಯಂ ಮಾಡಿ ನ್ಯಾಯಸ್ಥಾನವನ್ನು ಬಿಟ್ಟು ಅತ್ಯಾತುರದಿಂದ ರೇಣುಕೆಯ ಮನೆಗೆ ಹೋಗಿ ಸೇರಿದನು ಊಟಕ್ಕೆ ಬಂದಿದ್ದವರೆಲ್ಲರೂ ಇನ್ನೂ ಅಲ್ಲಿಯೇ ಇದ್ದರು. ಇವನನ್ನು ಕಾಣುತ್ತಲೇ ಅವರೆಲ್ಲರೂ "ಎಲೈ ಧರ್ಮಮೂರ್ತಿಯೇ! ಶಿರಚ್ಛೇದನಾಧಿಕಾರಿಯೇ! ರಾಜ್ಯಸುರಕ್ಷಕನೇ! ಏನು ವಿಶೇಷ? ರಾಜದ್ರೋಹದ ಒಳಸಂಚು ಅವುದಾದರೂ ಹೊರಪಟ್ಟಿತೋ? ಏಲಾದ್ವೀಪದ ರಾಕ್ಷಸನು ಆ ದ್ವೀಪವಂ ಬಿಟ್ಟು ಅಮರದೇಶವನ್ನು ಸೇರಿದನೋ? ನಿನ್ನ ಮುಖವನ್ನು ನೋಡಿದರೆ ರಾಜ್ಯಕ್ಕೆ ಅವುದೋ ಒಂದು ದೊಡ್ಡ ವಿಪತ್ತು ಸಂಭವಿಸಿರುವಂತೆ ತೋರುತ್ತಲಿದೆ" ಎಂದು ಒಂದೇ ತಡವೆ ಕೇಳಿದರು.

ಅವರು ಮಾಡಿದ ಪ್ರಶ್ನೆಗೆ ಉತ್ತರವನ್ನು ಕೊಡದೆ ವಲ್ಲಭದೇವನು ಶಾಂತವೀರನನ್ನು ನೋಡಿ ತಮ್ಮ ಸಂಗಡ ಒಂದು ಗುಟ್ಟಾದ ಮಾತನ್ನು ಹೇಳಬೇಕಾಗಿದೆ ಎನ್ನಲು, ಆತನು ಅದೇನು ಅಷ್ಟು ಗುರುವಾದ ಸಂಗತಿಯೋ ಎಂದನು.

ಅಹುದು. ಆದುದರಿಂದಲೇ ಇಲ್ಲಿಗೆ ನಾನು ಇಷ್ಟು ಆತುರವಾಗಿ ಬಂದುದು; ಕೆಲವು ದಿವಸಗಳು ಊರನ್ನು ಬಿಟ್ಟು ಹೋಗಬೇಕಾಗಿದೆ ಎಂದು ಹೇಳಿ ರೇಣುಕೆಯ ಮುಖವನ್ನು ನೋಡಿದನು. ಆ ಮಾತನ್ನು ಕೇಳಿ ಆ ಯುವತಿಯು ಖಿನ್ನಳಾಗಿ ತನ್ನ ಮನಃಕ್ಲೇಶವಂ ಸಹಿಸಲಾರದೆ, ಪ್ರಿಯರೇ, ಈಗ ತಾವು ನನ್ನನ್ನು ಬಿಟ್ಟು ಹೋಗಿ ಬರುವಿರಾ ಎಂದು ಕೇಳಲು, ಅವನು ಎಲೌ ಪ್ರಿಯಳೇ! ನಿನ್ನನ್ನು ಅಗಲಲಾರೆನು, ಆದರೂ ಕೆಲವು ದಿವಸಗಳ ಮಟ್ಟಿಗೆ ಊರನ್ನು ಬಿಡಬೇಕಾಗಿದೆ ಎಂದನು. ಆಗ ರೇಣುಕೆಯು ಎಲ್ಲಿಗೆ ಹೋಗಬೇಕು ಎನ್ನಲು, ಅದು ರಾಜಕಾರ್ಯ, ಅದನ್ನು ಎಲ್ಲರಿಗೂ ಹೇಳಲಾಗದು ಎಂದು ಹೇಳಿ ಶಾಂತವೀರನ ಸಮೀಪಕ್ಕೆ ಹೋಗಿ ಸ್ವಾಮೀ! ಬಿಜಯ ಮಾಡಿರಿ ಎಂದು ಒಂದು ಏಕಾಂತಸ್ಥಳಕ್ಕೆ ಕರೆದುಕೊಂಡುಹೋದನು.

ವಲ್ಲಭದೇವ! ಏನು ವರ್ತಮಾನ?

ಸ್ವಾಮೀ! ಗುರುತರವಾದ ಕಂಟಕ ಒಂದು ನಮ್ಮ ರಾಜ್ಯಕ್ಕೆ ಸಂಭವಿಸುವಂತಿದೆ. ನಾನು ಈಕ್ಷಣ ಅಮರಪುರಕ್ಕೆ ಹೋಗಿ ಮಹಾರಾಜರನ್ನು ಕಂಡು ಮಾತನಾಡಿ ಬಂದರೆ ನಮಗೆಲ್ಲರಿಗೂ ಅನುಕೂಲವಾಗುವುದೆಂದು ತೋರುತ್ತದೆ ಆದುದರಿಂದ ತಾವು ಮಹಾರಾಜರಿಗೆ ಒಂದು ಲೇಖನವನ್ನು ಕೊಡಬೇಕು

ನಾನು ಮಹಾರಾಜರಿಗೆ ಬರೆಯುವ ಪದ್ಧತಿಯಿಲ್ಲವಲ್ಲಾ?

ತಾವು ಬರೆಯದಿದ್ದರೆ ಮತ್ತಾರಿಂದಲಾದರೂ ಬರೆಸಿಕೊಡಬೇಕು.

ಸಾಲ್ವರಿಗೂ ರಾಜರಿಗೂ ಬಹು ಅನ್ಯೋನ್ಯ, ಅವರಿಂದ ಒಂದು ಕಾಗದವನ್ನು ಬರೆಸಿಕೊಡುವನು ಏನನ್ನು ಬರೆಸಲಿ?

ರಾಜರನ್ನು ಕಾಣಬೇಕಾದರೆ ನಿಯಮಗಳುಂಟು. ಅವುಗಳನ್ನೆಲ್ಲಾ ಅನುಸರಿಸಲು ನಾವಕಾಶವಿಲ್ಲ. ನಾನು ಅಮರಪುರಕ್ಕೆ ಹೋಗಿ ಸೇರಿದ ಒಡನೆಯೇ ಮಹಾರಾಜರನ್ನು ಕಂಡು ಅವರೊಡನೆ ಕೆಲವು ಮಾತುಗಳನ್ನಾಡಲು ಅನುಕೂಲವಾಗಬೇಕು.

ಅದಕ್ಕೆ ರಾಜರಿಗೆ ಪತ್ರವನ್ನು ಬರೆಯಲೇಕೆ? ಪ್ರಧಾನನನ್ನು ಕಂಡರೆ ಸಾಕು. ಅವನಿಗೆ ಬೇಕಾದರೆ ನಾನು ಒಂದು ಲೇಖನವನ್ನು ಬರೆದುಕೊಡುವೆನು.

ನಾನು ಪ್ರಧಾನನನ್ನು ಮೊದಲು ಕಂಡೆನಾದರೆ ಅವನು ಎಲ್ಲ ಸಮಾಚಾರವನ್ನು ನನ್ನಿಂದ ತಿಳಿದುಕೊಂಡು ರಾಜರ ಸಮ್ಮುಖದಲ್ಲಿ ಹೇಳಿಬಿಡುವನು. ಅದರಿಂದುಂಟಾಗುವ ಗೌರವವು ಅವನಿಗಾಗುವುದು; ಆದುದರಿಂದ ನಾನು ಮೊದಲು ಪ್ರಧಾನನ್ನು ನೋಡಕೂಡದು.

ಹಾಗಾದರೆ ಮಹಾರಾಜರಿಗೆ ಸಾಲ್ವರಿಂದ ಪತ್ರವನ್ನು ಬರೆಸಿಕೊಡುವೆನು. ನೀನು ಆವಾಗ ಹೊರಡುತ್ತೀಯೆ?

ಇಗೋ, ಈಗಲೆ ಹೊರಟೆ.

ಬಂಡಿಯು ಸಿದ್ಧವಾಗಿದೆಯೋ?

ಅದೆಷ್ಟು ಹೊತ್ತು. ಇಗೋ ಮನೆಗೆ ಹೋಗಿ ಕಟ್ಟಿಸಿಕೊಂಡು ಬಂದೆ.

ನೀನು ಮನೆಗೆ ಹೋಗಿಬಾ. ಅಷ್ಟರಲ್ಲಿ ನಾನು ಕಾಗದವನ್ನು ಬರೆಸಿಡುವೆನು.

ವಲ್ಲಭದೇವನು ಮನೆಗೆ ಬೇಗಬೇಗನೆ ಹೋಗಬೇಕೆಂದಿದ್ದನು, ಆದರೆ ಜನರು ತನ್ನ ಆತುರವನ್ನು ಕಂಡರೆ ಏನೆಂದುಕೊಳ್ಳುವರೋ ಎಂದು ಯೋಚಿಸಿ ಮೆಲ್ಲಮೆಲ್ಲಗೆ ತನ್ನ ಮನೆಯನ್ನು ಸೇರಲು, ಅಲ್ಲಿ ಆರೋ ಒಬ್ಬ ಹೆಂಗಸು ಕತ್ತಲೆಯಲ್ಲಿ ನಿಂತಿರುವಂತೆ ಕಂಡಿತು. ಅವಳಾರಾಗಿರಬಹುದೆಂದು ತಿಳಿಯಲು ನಮ್ಮ ಪಾಠಕರು ಕುತೂಹಲವುಳ್ಳವರಾಗಿರಬಹುದು. ಅವಳೇ ಲಲಿತಾಂಗಿಯು; ತನ್ನ ಪ್ರಿಯನ ವರ್ತಮಾನವಾವುದೂ ತಿಳಿಯಲಿಲ್ಲವಲ್ಲಾ ಎಂದು ವಲ್ಲಭದೇವನನ್ನಾದರೂ ಕೇಳಿನೋಡೋಣವೆಂದು ಅಲ್ಲಿಗೆ ಬಂದಿದ್ದಳು.

ವಲ್ಲಭದೇವನು ಮನೆಯ ಬಾಗಿಲಿಗೆ ಬರುತ್ತಲೆ ಅವಳು ಅವನ ಇದಿರಿಗೆ ಬಂದು ನಿಂತು ನನ್ನ ಪ್ರಿಯ ಧರ್ಮದೇವನ ಗತಿ ಏನಾಯಿತು, ಮಹಾಸ್ವಾಮೀ! ಎಂದು ಬಹು ದೈನ್ಯದಿಂದ ಕೇಳಿದಳು. ಆಕೆಯನ್ನು ನೋಡುತಲೆ ವಿಚಾರಣೆಯ ಕಾಲದಲ್ಲಿ ಧರ್ಮದೇವನು ತನ್ನೊಡನೆ ಹೇಳಿದ್ದುದೆಲ್ಲವೂ ವಲ್ಲಭದೇವನಿಗೆ ಜ್ಞಾಪಕಕ್ಕೆ ಬಂದು, ತಾನೇ ಅಪರಾಧಿ, ಅವಳೇ ನ್ಯಾಯಾಧಿಪತಿ ಎಂದು ತಿಳಿದುಕೊಂಡನು. ಆದರೇನು? ತಮ್ಮ ಪುರೋಭಿವೃದ್ಧಿಯೇ ಹೆಚ್ಚೆಂದು ಎಣಿಸಿರುವವರು ನ್ಯಾಯಾನ್ಯಾಯಗಳನ್ನೂ ಇತರರ ಸುಖದುಃಖಗಳನ್ನೂ ಹೇಗೆ ತಾನೇ ಗಣನೆಗೆ ತರುವರು; ಒಂದು ವೇಳೆ

ತಂದರೂ ಅವುಗಳು ಅವರ ಬುದ್ಧಿಯಿಂದ ಉತ್ತರಕ್ಷಣದಲ್ಲಿಯೇ ಜಾರಿ ಹೋಗುವುವು.

ಲಲಿತಾಂಗಿಯ ಪ್ರಶ್ನೆಗೆ ವಲ್ಲಭದೇವನು ಅಮ್ಮಾ ! ನೀನು ಹೇಳುವ ಯುವಕನು ಗುರುತರವಾದ ರಾಜದ್ರೋಹವನ್ನು ಮಾಡಿರುವನಾದುದರಿಂದ ಅವನನ್ನು ಬಿಡಲು ಸಾಧ್ಯವಾಗಲಿಲ್ಲ ಎಂದನು ಅದನ್ನು ಕೇಳಿ ಲಲಿತಾಂಗಿಯು ಕಂಬನಿಗಳನ್ನು ಸುರಿಸುತ್ತ ನಿಂತಳು. ಇವಳಿಗೆ ಹೆಚ್ಚು ಮಾತನಾಡಲು ಆಸ್ಪದಕೊಟ್ಟರೆ ಕೆಲಸವು ಕೆಟ್ಟುಹೋಗುವುದೆಂಬ ಭೀತಿಯಿಂದ ವಲ್ಲಭದೇವನು ಮನೆಯನ್ನು ಪ್ರವೇಶಿಸಲು ಯತ್ನಿಸಿದನು , ಆದರೆ ಲಲಿತಾಂಗಿಯು ಅವನಿಗೆ ಅಡ್ಡಲಾಗಿ ಬಂದು ಸ್ವಾಮೀ ! ನನ್ನ ಪ್ರಿಯನು ಎಲ್ಲಿರುವನೋ ಅದನ್ನಾದರೂ ದಯೆಯಿಟ್ಟು ತಿಳಿಸಿದರೆ ಸಾಕು ; ನಾನು ಅವನ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವೆನು ಎಂದಳು ನನಗೆ ಅದು ತಿಳಿಯದು ಎಂದು ಹೇಳಿ ಲಲಿತಾಂಗಿಯ ಸ್ಥಿತಿಯನ್ನು ನೋಡಿ ತನಗೆ ಉಂಟಾದ ಸಂಕಟವನ್ನು ಅಡಗಿಸಿಕೊಂಡು ವಲ್ಲಭದೇವನು ಮನೆಯನ್ನು ಹೊಕ್ಕು, ಬಾಗಿಲನ್ನು ಮುಚ್ಚಿಕೊಂಡನು. ಆದರೆ ಮನಸ್ಸಿನ ಪಶ್ಚಾತ್ತಾಪವನ್ನು ಹೊರಗೆ ನೂಕಲು ಸಾಧ್ಯವೇ ? ಅವನು ಒಳಗೆ ಹೋಗುತಲೆ ತನ್ನ ತಂದೆಯ ತಪ್ಪನ್ನು ಮರೆಯಿಸಿ ತನ್ನ ಮಹತ್ಕಾಂಕ್ಷೆಯನ್ನು ಪೂರಯಿಸಿಕೊಳ್ಳುವುದಕ್ಕಾಗಿ ತನ್ನಿಂದ ಬಲಿಯಾಗಿ ಕೊಡಲ್ಪಟ್ಟ ಧರ್ಮದೇವನು ಇದುರಿಗೆ ಬಂದು ನಿಂತು “ ನನ್ನನ್ನು ಕಾಪಿಡುವೆನು ಎಂದು ಮಾತುಕೊಟ್ಟು ನಿರಪರಾಧಿಯಾದವನನ್ನು ಅನ್ಯಾಯವಾಗಿ ಅಂಧಕೂಪದಲ್ಲಿ ಹಾಕಿಸುವಂತೆ ಮಾಡಿದೆ. ಈ ಅಕೃತ್ಯವು ಯಾವಜ್ಜೀವವೂ ನಿನ್ನನ್ನು ಯಾತನೆ ಪಡಿಸದಿರಲಾರದು ” ಎಂದು ವಲ್ಲಭದೇವನಿಗೆ ಹೇಳಿದಂತಾಯಿತು. ಆಗ ಅವನ ಹೃದಯದಲ್ಲಿ ಒಂದು ದೊಡ್ಡ ವ್ರಣವುಂಟಾಗಿ ಅದನ್ನು ಚುಚ್ಚಲು ಆವಾಗಲೂ ಯಾರೋ ಒಬ್ಬ ಬೆರಲನ್ನು ನೀಡಿಕೊಂಡಿರುವಂತೆ ತೋರಿತು.

ಆ ಸಮಯದಲ್ಲಿ ರೇಣುಕೆಯಾಗಲಿ ಲಲಿತಾಂಗಿಯಾಗಲಿ ಬಂದು ಮುಂದೆ ನಿಂತು ಆ ನಿರಪರಾಧಿಯನ್ನು ದಯಮಾಡಿ ಬಿಟ್ಟುಕೊಡು ಎಂದು ಕೇಳಿದ್ದರೆ ವಲ್ಲಭದೇವನು ಒಡನೆಯೇ ಧರ್ಮದೇವನನ್ನು ಬಿಡುಗಡೆ ಮಾಡುತಲಿದ್ದನು. ಆದರೆ ರೇಣುಕೆಯು ಪ್ರಿಯನನ್ನು ಅಗಲಿದ ಸಂಕಟದಿಂದ ತನ್ನ ಮನೆಯಲ್ಲಿ ಮರುಗುತ್ತಲಿದ್ದಳು. ಲಲಿತಾಂಗಿ

ಯಾದರೋ, ದುಃಖಸಮುದ್ರದಲ್ಲಿ ಮುಳುಗಿ ತನ್ನ ಮನೆಯ ದಾರಿಯನ್ನು ಹಿಡಿದು ಹೋಗುತ್ತಿದ್ದಳು.

ವಲ್ಲಭದೇವನು ಸ್ವಲ್ಪಹೊತ್ತು ಹಾಗೆಯೇ ಯೋಚಿಸಿ, ಛೀ! ಇದೇನು? ನನ್ನ ಹೃದಯವು ಇಷ್ಟು ಮೃದುವಾಗುತ್ತಾ ಬಂದಿತು? ಹಾಗಾದರೆ ನಾನು ಮುಂದೆ ಹೇಗೆ ಬದುಕುವುದು? ಎಂದು ಪಕ್ಕನೆ ಎದ್ದು ಕುದುರೆಯ ಬಂಡಿಯನ್ನು ಕಟ್ಟಿಸಿ ಕೊಂಡು, ರಾಜನ ಬಳಿಗೆ ಹೋಗುವನಾದುದರಿಂದ ತಕ್ಕ ಉಡುಪುಗಳನ್ನು ತೆಗೆದುಟು ಕೊಂಡು, ಶಾಂತವೀರನ ಮನೆಗೆ ಹೋಗಿ ಅವನು ಕೊಟ್ಟ ಲೇಖನವನ್ನು ತೆಗೆದು ಕೊಂಡು, ಅಮರಪುರದ ಮಾರ್ಗವನ್ನು ಸೇರಿ ಬೇಗ ಬೇಗನೆ ಹೊಡಿ ಎಂದು ಸಾರಥಿಗೆ ಅಪ್ಪಣೆಯನ್ನು ಮಾಡಿದನು.

ಇತ್ತ ಲಲಿತಾಂಗಿಯು ವಲ್ಲಭದೇವನ ಮನೆಯನ್ನು ಬಿಟ್ಟು ತನ್ನ ಮನೆಯ ಕಡೆಗೆ ತಿರುಗಿ ನಡು ಹಾದಿಯಲ್ಲಿ ತನಗಾಗಿ ಕಾದಿದ್ದ ವಿಷಯಲಂಪಟನನ್ನೂ ಕಾಣದೆ ಬೇಗ ಬೇಗನೆ ಮನೆಯನ್ನು ಸೇರಿದಳು. ಅವಳಿಗೆ ಧರ್ಮದೇವನ ಮೇಲೆ ವಿನಾ ಮತ್ತಾವು ದರ ಮೇಲೂ ಜ್ಞಾನವಿರಲಿಲ್ಲ. ಮನೆಯನ್ನು ಸೇರಿದ ಮೇಲೆ ಅವಳು ಏನನ್ನು ಮಾಡಿ ದಳೋ ಅವಳಿಗೇ ತಿಳಿಯದು

ಇಷ್ಟುಹೊತ್ತಿಗೆ, ಧರ್ಮದೇವನು ಮಹತ್ತಾದ ರಾಜದ್ರೋಹವಂ ಮಾಡಿದವ ನೆಂದು ವಲ್ಲಭದೇವನು ಹುಟ್ಟಿಸಿದ ವರ್ತಮಾನವು ಊರೆಲ್ಲಾ ಹರಡಿತು ಅವನನ್ನು ಬಿಡಿಸಲು ಧನಕೋಟಿಯು ಮಾಡಿದ ಸಾಹಸಗಳೆಲ್ಲವೂ ನಿಷ್ಫಲಗಳಾದುವು. ರಾಜ ದ್ರೋಹಿಗಳಿಗೆ ಸಹಾಯಮಾಡುವವರೂ ರಾಜಾಪರಾಧಿಗಳಲ್ಲಿ ಗಣನೆಯಾಗುವರಲ್ಲದೆ ಮತ್ತಾವ ಫಲವೂ ಆಗುವುದಿಲ್ಲವೆಂದು ತಿಳಿದು ಧನಕೋಟಿಯು ನಿರಾಶೆಯಂ ಮಾಡಿ ಕೊಂಡು ಸಂಕಟಪಡುತ್ತ ತನ್ನ ಮನೆಯನ್ನು ಸೇರಿದನು.

ಇತ್ತ ಕದರ್ಥಕನು ಧರ್ಮದೇವನ ವಿಷಯದಲ್ಲಿ ಬೇರೊಂದು ಬಗೆಯಾಗಿ ಪೇಚಾಡಿದನು. ಅವನಿಗೆ ಬಂದ ವಿಪತ್ತನ್ನು ನೋಡಿ ಸಹಿಸಲಾರದೆ ತನ್ನ ಸಂಕಟ ವನ್ನು ಮರೆತು ಬಿಡಲು ಯಥೇಚ್ಛೆಯಾಗಿ ಸುರಾಪಾನವಂ ಮಾಡಿ ಮನೆಯಲ್ಲಿ ಬಿದ್ದಿ ದ್ದನು. ಅತಿಯಾದ ಪಾನದಿಂದ ಮರಳಿ ಕುಡಿಯಲು ಅವನಿಗೆ ಚೈತನ್ಯವು ತಪ್ಪಿ ದ್ದಿತೇ ವಿನಾ ಅವನ ಸಂಕಟವು ತಪ್ಪಲಿಲ್ಲ.

ನೌಕಾಧಿಪತ್ಯವು ಧರ್ಮದೇವನಿಗೆ ತಪ್ಪಿ, ತನಗಾದುದೆಂದು ದುರ್ಮತಿಯು ಸಂತೋಷವಾಗಿದ್ದನು. ಲೋಕದಲ್ಲಿ ಕೆಲವರಿಗೆ ಅವರ ಬುದ್ಧಿಯೇ ಲೇಖಿನಿಯಾಗಿಯೂ, ಹೃದಯವೇ ಮಸಿ ಕುಡಿಕೆಯಾಗಿಯೂ, ಇರುವುವು. ಅಂಥವರಿಗೆ ದುಡ್ಡಿನ ಗುಣಾಕಾರ ಭಾಗಾಕಾರಗಳೇ ಸುಖದುಃಖಗಳು. ತಮ್ಮ ಪುರೋವೃದ್ಧಿಗಾಗಿ ಸ್ವಲ್ಪವೂ ಕರುಣೆಯಿಲ್ಲದೆ ನೂರಾರು ಜನಗಳನ್ನಾದರೂ ಬಲಿ ಕೊಡುವರು. ಇಂತಹ ಮಹಾತ್ಮರು ಲೋಕದಲ್ಲಿ ಹೇರಳವಾಗಿರುವರು. ನಮ್ಮ ದುರ್ಮತಿಯು ಈ ಮಹಾತ್ಮರಲ್ಲಿ ಒಬ್ಬನಾಗಿದ್ದನು.

ವೃದ್ಧನಾದ ಭುಜಂಗಭೂಷಣನು ಲಲಿತಾಂಗಿಯ ಸಾಹಾಯ್ಯದಿಂದ ತನ್ನ ಮನೆಯನ್ನು ಸೇರಿ, ಕೈಸೇರಿದ್ದ ಮಗನ ಗತಿ ಏನಾಯಿತೋ ತಿಳಿಯದೆ ಸಂಕಟ ಪಡುತ್ತ ಹೊರಗೆ ಹೋಗಿ ವಿಚಾರಿಸಲು ತ್ರಾಣವಿಲ್ಲದೆ ಸುಮ್ಮನೆ ಕೊರಗುತ್ತಿದ್ದನು. ಧರ್ಮದೇವನ ವಿಷಯವಾಗಿ ನಮ್ಮ ಪಾಠಕರಿಗೆ ತಿಳಿದಿದ್ದ ವರ್ತಮಾನವು ಅವನಿಗೆ ತಿಳಿದಿರಲಿಲ್ಲ.

ಇತ್ತ ವಲ್ಲಭದೇವನು ಅಮರಪುರವನ್ನು ಎಷ್ಟು ಜಾಗ್ರತೆಯಾಗಿ ಸೇರಿದರೆ ಅಷ್ಟು ಅನುಕೂಲವೆಂದು ತಿಳಿದು, ದಾರಿಯ ಉದ್ದಕ್ಕೂ ಟಪಾಲು ಕುದುರೆಯವರಿಗೆ ಬಹುಮಾನಗಳನ್ನು ಕೊಟ್ಟು ತ್ವರೆಪಡಿಸುತ್ತ, ನನಗೆ ತಿಳಿದ ವರ್ತಮಾನವನ್ನು ಆವ ರೀತಿಯಲ್ಲಿ ಮಹಾರಾಜರಿಗೆ ತಿಳಿಸಿದರೆ ನನ್ನ ಇಷ್ಟಾರ್ಥವು ಕೈಗೂಡುವುದು ಎಂದು ಯೋಚನೆ ಮಾಡುತ್ತ ಬಂಡಿಯಲ್ಲಿ ಹೋಗುತ್ತಿದ್ದನು.

ಹೀಗೆ ಯೋಚನೆ ಮಾಡುತ್ತಿರುವ ಅವನನ್ನು ನಾವು ದಾರಿಯಲ್ಲಿ ಬಿಟ್ಟು, ಅಮರಪುರದ ಅರಮನೆಯಲ್ಲಿ ಸುಖಾಸೀನನಾಗಿರುವ ಮಹಾರಾಜ ಜಯಸಿಂಹರಾಜನ ಸಂದರ್ಶನವನ್ನು ನಮ್ಮ ಪಾಠಕರಿಗೆ ಮಾಡಿಸೋಣ. ರಾಜನು ಅಂತರ್ಗೃಹದಲ್ಲಿ ಕಾದಂಬರೀ ಗ್ರಂಥವನ್ನು ಓದುತ್ತ, ಮಧ್ಯೆ ಮಧ್ಯೆ ಪಕ್ಕದಲ್ಲಿ ಕುಳಿತಿದ್ದ ತನ್ನ ಆಪ್ತಸ್ನೇಹಿತನಾದ ವಿದ್ಯಾಸಾಗರನೆಂಬ ಪಂಡಿತನನ್ನು ವಿಚಾರಿಸುತ್ತ ಆ ಗ್ರಂಥದ ರಸಾನುಭವವನ್ನು ಮಾಡುತ್ತ, ಪಂಡಿತನನ್ನು ಕೇಳಿ ಕ್ಲಿಷ್ಟಪದಗಳ ಅರ್ಥಗಳನ್ನು ಆ ಪುಸ್ತಕದಲ್ಲಿಯೇ ಬರೆದುಕೊಳ್ಳುತಿದ್ದನು. ಪಂಡಿತನು ಎಂದಿನಂತೆ ಚಟುವಟಿಕೆಯಾಗಿಲ್ಲದೆ

ಏನೋ ಯೋಚಿಸುತಲಿದ್ದಾನೆಂದು ತಿಳಿದು ರಾಜನು ಏನು ಪಂಡಿತರೇ, ಈ ದಿವಸ ಎಂದೂ ಇಲ್ಲದ ಯೋಚನೆಯನ್ನು ಮಾಡುತಲಿದೀರಿ ಎಂದನು.

ಮಹಾಸ್ವಾಮೀ! ಏಲಾ ದ್ವೀಪದ ರಾಕ್ಷಸನ ಭಯವು ನನಗೆ ಇನ್ನೂ ತಪ್ಪಿಲ್ಲ.

ನಿಮ್ಮ ಭಯಕ್ಕೆ ಕಾರಣವೇ ಇಲ್ಲ. ರಾಜ್ಯಭ್ರಷ್ಟನಾದ ಆ ಚಕ್ರವರ್ತಿಯೆಂಬ ರಾಕ್ಷಸನು ಸಕಲವಿಧದಲ್ಲಿಯೂ ಆಶಾಭಗ್ನನಾಗಿ ಅಮರರಾಜ್ಯದ ಯೋಚನೆಯನ್ನೇ ಬಿಟ್ಟು ಬೇರೆ ವ್ಯಾಸಂಗಗಳನ್ನು ಇಟ್ಟುಕೊಂಡಿರುವನೆಂದು ನಮ್ಮ ಬೇಹಿನವರಿಂದ ಪ್ರತಿ ದಿನವೂ ವರ್ತಮಾನವು ಬರುತಲಿದೆ.

ಮಹಾಸ್ವಾಮೀ! ಗೂಢಚಾರರು ತಮ್ಮ ಸಂಬಳಕ್ಕಾಗಿ ಅವ್ರದನ್ನಾದರೂ ಬರೆಯುವರು. ಗ್ರಹಗತಿಗಳನ್ನು ನೋಡಿದರೆ ನನ್ನ ಭಯಕ್ಕೆ ಕಾರಣ ಸಂಪೂರ್ಣವಾಗಿದೆ.

ನಮ್ಮ ಬೇಹಿನವರೆಲ್ಲರೂ ಸುಶೀಲರು; ಎಂದಿಗೂ ಸುಳ್ಳು ಹೇಳಲಾರರು.

ಒಂದುವೇಳೆ ಅವರೇ ಮೋಸಹೋಗಿದ್ದರೆ?

ಅವರು ಮೋಸಹೋಗುವರೆಂದು ನಾನು ನಂಬಲಾರೆ. ಇಗೋ, ನಮ್ಮ ಪೋಲೀಸು ಮಂತ್ರಿಯು ಬಂದರು. ಅವರು ಈ ದಿನದ ವರ್ತಮಾನವನ್ನು ತಂದಿರುವರು; ಅದನ್ನು ಕೇಳೋಣ.

ಪೋಲೀಸು ಮಂತ್ರಿಯು ಬಂದು ರಾಜನಿಗೆ ವಂದನೆಯನ್ನು ಮಾಡಿ ಮರ್ಯಾದೆಯಿಂದ ದೂರದಲ್ಲಿ ನಿಂತನು. ಅವನನ್ನು ರಾಜನು ನೋಡಿ ಮಂತ್ರಿಗಳೇ, ಈ ದಿವಸದ ವರ್ತಮಾನವೇನು ಎಂದು ಕೇಳಲು, ಮಂತ್ರಿಯು ಮಹಾಸ್ವಾಮೀ! ಈ ದಿನದ ವರ್ತಮಾನವಿನ್ನೂ ಬರಲಿಲ್ಲ. ಈಗ ಬರಬಹುದು, ಆಗ ಬರಬಹುದು ಎಂದು ಪ್ರತಿ ಕ್ಷಣದಲ್ಲಿಯೂ ಅದನ್ನು ಇದಿರು ನೋಡುತ್ತಿದ್ದೇನೆ ಎಂದನು.

ನಮ್ಮ ಪಂಡಿತರಿಗೆ ಗ್ರಹಗಳು ವಕ್ರವಾಗಿರುವುದರಿಂದ ಏಲಾ ದ್ವೀಪದ ರಕ್ಕಸನ ಭಯವು ಹೆಚ್ಚಾಗಿದೆಯಂತೆ, ಅದಕ್ಕೇನೋ ನಿಮಿತ್ತವಿಲ್ಲವೆಂದು ನಾನು ಎಷ್ಟು ಹೇಳಿದರೂ ಅವರು ನಂಬುವುದಿಲ್ಲ. ನೀವಾದರೂ ಹೇಳಿ ಅವರ ಮನಸ್ಸಿನ ಭೀತಿಯನ್ನು ಬಿಡಿಸಿರಿ.

ಮಹಾಸ್ವಾಮಿ, ಅಪ್ಪಣೆ ಎಂದು ಪೋಲೀಸು ಮಂತ್ರಿಯು ಪಂಡಿತನನ್ನು ನೋಡಿ ಸ್ವಾಮೀ! ಪಂಡಿತರೇ, ನೆನ್ನೆಯವರೆಗೆ ತಿಳಿದ ವರ್ತಮಾನದಲ್ಲಿ ಆ ರಕ್ಕಸನು ರಾಜ್ಯ ಪಲ್ಲಟದ ಯೋಚನೆಯನ್ನು ಬಿಟ್ಟು ಹೊತ್ತು ಕಳೆಯಲು ಬೇರೆ ವ್ಯಾಸಂಗವನ್ನಿಟ್ಟು ಕೊಂಡಿದ್ದಾನಂತೆ. ಹೀಗಿರುವಲ್ಲಿ ತಮಗೆ ಆವ ಭಯಕ್ಕೂ ಕಾರಣವಿಲ್ಲ.

ಮಂತ್ರಿಗಳೇ, ತಮಗೆ ತಿಳಿದ ವರ್ತಮಾನವನ್ನು ತಿಳಿಸುತ್ತೀರಿ ಆದರೂ ನನ ಗೇನೋ ಭೀತಿ ತಪ್ಪುವುದಿಲ್ಲ. ನಾವು ಜಾಗರೂಕರಾಗಿರುವುದು ಉತ್ತಮ ಎಂದು ಪಂಡಿತನು ಹೇಳಿದನು. ಆಗ ರಾಜನು ಮಂತ್ರಿಯನ್ನು ನೋಡಿ ಅಯ್ಯಾ, ನೀವು ಹೋಗಿ. ಈ ದಿನದ ವರ್ತಮಾನವು ಬಂದಕೂಡಲೆ ನಮಗೆ ತಿಳಿಸಿ ಎನ್ನಲು ಅಪ್ಪಣೆ ಎಂದು ಮಂತ್ರಿಯು ಹೊರಟನು.

ಆ ಕಡೆ ಮಂತ್ರಿಯು ಹೊರಡಲು, ಈ ಕಡೆ ರಾಜನು ಪುನಃ ಕಾದಂಬರಿಯನ್ನು ಓದಲು ಆರಂಭಿಸಿ ಪಂಡಿತರೇ! ಈ ವನವರ್ಣನೆಯನ್ನು ನೋಡಿ, ಕವಿಯು ಎಷ್ಟು ಚಮತ್ಕಾರವಾಗಿ ವರ್ಣಿಸಿರುವನು ಎಂದನು. ಆ ವೇಳೆಗೆ ಸರಿಯಾಗಿ ರಾಜಭಟ ನೊಬನು ಬಂದು ರಾಜನಿಗೆ ಒಂದು ಲೇಖನವನ್ನು ತಂದುಕೊಟ್ಟನು. ಅದನ್ನು ರಾಜನು ಓದಿನೋಡಿ ಸ್ವಲ್ಪ ಹೊತ್ತು ಯೋಚಿಸಿ ವಲ್ಲಭದೇವ! ವಲ್ಲಭದೇವ! ಎಂದು ಹೇಳಿ ಪಂಡಿತನ ಕಡೆಗೆ ತಿರುಗಿ ಪಂಡಿತರೇ! ಮಲಯಪಟ್ಟಣದಲ್ಲಿರುವ ವಲ್ಲಭದೇವ ನನ್ನು ನೀವು ಬಲ್ಲಿರೋ? ಎಂದು ಕೇಳಿದನು.

ನಾನು ಅವನ ಹೆಸರನ್ನು ಕೇಳಿದೇನೆ, ಅವನನ್ನು ನೋಡಿಲ್ಲ.

ಅವನಾರು ತಿಳಿಯುವುದೋ?

ಅವನು ಮಲಯಪಟ್ಟಣದ ನ್ಯಾಯಾಧಿಪತಿಯಲ್ಲವೇ?

ಅವನಾರ ಮಗ ಬಲ್ಲಿರೋ? "ಅದು ನನಗೆ ತಿಳಿಯದು."

ಈ ವಲ್ಲಭದೇವನು ನಮ್ಮ ರಕ್ಕಸನ ಮುಖ್ಯಶಿಷ್ಯನಾದ ದೀನನಾಥನ ಮಗ.

ದೀನನಾಥನ ಮಗನೇ! ದೀನನಾಥನು ರಾಜ್ಯ ಪರಿವರ್ತನದಲ್ಲಿ ಬದ್ಧಕಂಕಣ ನಲ್ಲವೇ? ಅವನ ಮಗನನ್ನು ತಾವು ಹೇಗೆ ಕೆಲಸದಲ್ಲಿಟ್ಟಿರುವಿರಿ?

ರಾಜನು ನಸುನಗುತ ಮನುಷ್ಯರ ಸ್ವಭಾವವು ತಮಗೆ ಇನ್ನೂ ಗೊತ್ತಿಲ್ಲ. ಮಹತ್ವಾಕಾಂಕ್ಷೆಯುಳ್ಳವರು ತಮ್ಮ ಅಭಿವೃದ್ಧಿಯ ಸಲುವಾಗಿ ತಾಯಿ ತಂದೆಗಳನ್ನಾದರೂ

ಬಲಿಗೊಡುವರು. ಅಂಥವರಲ್ಲಿ ವಲ್ಲಭದೇವನು ಒಬ್ಬನು ಅವನನ್ನು ಕರೆಸುವೆನು, ನೀವು ನೋಡಿ ಎಂದು ಹೇಳಿ, ವಲ್ಲಭದೇವನನ್ನು ಕರೆದುಕೊಂಡು ಬಾ ಎಂದು ಭಟನಿಗೆ ಆಜ್ಞಾಪಿಸಿದನು ವಲ್ಲಭದೇವನು ಆತುರದಿಂದ ಗಾಡಿಯಲ್ಲಿಯೇ ತನ್ನ ಉಡುಪುಗಳನ್ನು ಒದಲಾಯಿಸಿಕೊಂಡು, ಬಂದಿದ್ದ ಭಟನ ಹಿಂದೆಯೇ ಹೋಗಿ ರಾಜನ ಸಮೀಪವಂ ಸೇರಿ ನಮಸ್ಕಾರಮಾಡಿ ಮರ್ಯಾದೆಯಿಂದ ದೂರದಲ್ಲಿ ನಿಂತಿರಲು, ರಾಜನು ಅವನನ್ನು ನೋಡಿ ಏನಯ್ಯಾ ! ವಲ್ಲಭದೇವ ! ಈಗ ನೀನು ಕಳುಹಿದ ಕಾಗದ ದಲ್ಲಿ ಚಿತ್ತರಂಜಕವಾದ ಆವುದೋ ಒಂದು ಸಂಗತಿಯನ್ನು ತಿಳಿಸುವುದಾಗಿ ಬರೆದು ಇದೆ. ಅದಾವುದು?

ಮಹಾಸ್ವಾಮಿ ! ಅದು ಅದ್ಭುತವಾದ ಸಂಗತಿ ನಾವಕಾಶವಾದರೆ ಕಾರ್ಯವು ಕಿಡುವುದೆಂದು ಒಡನೆಯೇ ಸನ್ನಿಧಾನದಲ್ಲಿ ತಿಳಿಸಬೇಕೆಂದು ಆಹಾರನಿದ್ರೆಗಳೊಂದೂ ಇಲ್ಲದೆ ಮಲಯಪಟ್ಟಣದಿಂದ ಹೊರಟು ಬಂದು ಸೇರಿದನು.

ಅದೇನು ಸಂಗತಿ? ಅದನ್ನು ನಮಗೆ ಸರಿಯಾಗಿ ತಿಳಿಸು.

ಮಹಾಸ್ವಾಮಿ, ನನಗೆ ತಿಳಿದ ಮಟ್ಟಿಗೆ ಅರಿಕೆಮಾಡುವೆನು ನಾನು ಮಹಾ ಸ್ವಾಮಿಯವರ ಸನ್ನಿಧಾನದಲ್ಲಿ ಓಡಾಡಿ ಬಳಕೆಯಿಲ್ಲದವನಾದುದರಿಂದ ಬಿನ್ನಹ ಮಾಡು ವುದರಲ್ಲಿ ಪ್ರಮಾದವಶಾತ್ ಮರ್ಯಾದೆಗಳಿಗೇನಾದರೂ ಕುಂದಕವುಂಟಾದರೆ ಕ್ಷಮಿಸ ಬೇಕು ಎಂದು ಬೇಡುತ್ತೇನೆ ಎಂದು ಹೇಳಿ, ತನ್ನ ಮಾತನ್ನು ಕೇಳಿ ರಾಜನು ಏನನ್ನು ತಿಳಿದುಕೊಂಡನೆಂಬುದನ್ನು ತಿಳಿಯಲು ಅವನ ಮುಖವನ್ನು ನೋಡಿದನು. ಅವನ ಮುಖಭಾವದಿಂದ ತಾನಾಡಿದ ಮಾತು ರಾಜನಿಗೆ ಹಿತವಾಯಿತೆಂದು ಕಂಡು ಬಂದುದ ರಿಂದ ವಲ್ಲಭದೇವನು ಈ ರೀತಿಯಿಂದ ಅರಿಕೆಯಂ ಮಾಡಿದನು:—

ತಮ್ಮ ಸೇವಕನಾದ ನಾನು ಎಂದಿನಂತೆ ತಮ್ಮ ಕೆಲಸವನ್ನು ಶ್ರದ್ಧೆಯಿಂದಲೂ ಜಾಗರೂಕತೆಯಿಂದಲೂ ಮಾಡುತಲಿರುವಲ್ಲಿ, ರಾಜ್ಯಪಲ್ಲಟದ ವಿಷಯದ ಒಳಸಂಚು ಒಂದು ವ್ಯಕ್ತವಾಯಿತು. ಅದನ್ನು ಬಹುಸೂಕ್ಷ್ಮದಿಂದ ವಿಚಾರಿಸಲು ಏಲಾ ದ್ವೀಪದ ರಕ್ಕಸನು ತನ್ನ ಸೈನ್ಯದೊಡನೆ ಅಮರದೇಶದಲ್ಲಿಯೋ ಅಕ್ಕಪಕ್ಕದ ದೇಶಗಳಲ್ಲಿಯೋ ಜಾಗ್ರತೆಯಾಗಿ ಬಂದು ಇಳಿಯುವನೆಂತಲೂ, ಅಮರ ದೇಶದ ಜನಗಳನ್ನು ಸಾಧ್ಯವಾದ ಮಟ್ಟಿಗೆ ಪ್ರೋತ್ಸಾಹಪಡಿಸಿ ತನ್ನ ಪಕ್ಷವನ್ನು ವಹಿಸುವಂತೆ ಮಾಡಬೇಕೆಂತಲೂ,

ಅಮರಪುರದಲ್ಲಿ ತನಗೆ ಆಪ್ತನಾದವನೊಬ್ಬನಿಗೆ ವರ್ತಮಾನವನ್ನು ಕಳುಹಿದ್ದನು ಅದನ್ನು ಏಲಾದ್ವೀಪದಿಂದ ಒಬ್ಬನು ತಂದಿದ್ದನು ತಂದವನು ಮಲಯ ಪಟ್ಟಣದ ನಾವಿಕನು. ಅವನು ಅಡಿಗಡಿಗೆ ಏಲಾ ದ್ವೀಪಕ್ಕೆ ಹೋಗುತ್ತ ಬರುತ್ತಲಿದ್ದುದರಿಂದ ಅವನ ಮೇಲೆ ನನಗೆ ಕಣ್ಣಿದ್ದಿತು. ಈಚೆಗೆ ಅವನ ಚರ್ಯೆಗಳನ್ನು ನೋಡಿ ಅನುಮಾನ ದಿಂದ ನಾಲ್ಕು ದಿವಸಗಳ ಹಿಂದೆ ಅವನನ್ನು ಹಿಡಿದು ವಿಚಾರಿಸಲು ಮೇಲೆ ಹೇಳಿದ ವರ್ತಮಾನವು ಗೊತ್ತಾಯಿತು. ಆದರೆ ಅಮರಪುರದಲ್ಲಿ ಆರಿಗೆ ಈ ವರ್ತಮಾನವನ್ನು ತಂದನೆಂಬುದು ತಿಳಿಯಲಿಲ್ಲ. ಆ ವಿಷಯದಲ್ಲಿ ಅವನು ಬಾಯನ್ನೇ ಬಿಡಲಿಲ್ಲ.

ಆ ನಾವಿಕನು ಈಗೆಲ್ಲಿರುವನು? ಸೆರೆಯಲ್ಲಿರುವನು.

ಆದರೆ ನೀನು ಹೇಳಿದ ವರ್ತಮಾನವು ಗುರುತರವಾದುದೇ!

ಅಹುದು ಮಹಾಸ್ವಾಮೀ! ಆದುದರಿಂದಲೇ ನಾನು ಏರ್ಪಾಡುಮಾಡಿಕೊಂಡಿದ್ದ ಮದುವೆಯೂಟವನ್ನು ಕೂಡ ಬಿಟ್ಟು ಸ್ವಕಾರ್ಯಕ್ಕಿಂತಲೂ ಸ್ವಾಮಿಕಾರ್ಯವು ದೊಡ್ಡ ದೆಂದು ತಿಳಿದು ಅದನ್ನು ತಮ್ಮ ಸನ್ನಿಧಾನದಲ್ಲಿ ಅರಿಕೆಮಾಡಲು ಬಂದೆನು

ಅಹುದಹುದು. ನಿನ್ನ ಮದುವೆಯು ನಡೆಯುವುದೆಂದು ಕೇಳಿದ್ದೆನು ಹೆಣ್ಣು ಆರೆಂಬುದನ್ನು ಮರೆತೆ

ತಮಗೆ ಆಪ್ತರಾಗಿಯೂ ವಿಧೇಯರಾಗಿಯೂ ಇರುವ ಶಾಂತವೀರರ ಮಗಳು.

ಅದು ಸರಿ. ಈ ಒಳಸಂಚಿನ ವರ್ತಮಾನವೇನು?

ಸ್ವಾಮೀ! ಇದು ಸಾಧಾರಣವಾದುದಲ್ಲ; ರಾಜ್ಯಪರಿವರ್ತನದ ಏರ್ಪಾಡು. ಇಷ್ಟುದಿನಕ್ಕೆ ಬಹುಶಃ ಆ ರಕ್ಕಸನು ತನ್ನ ಸೈನ್ಯದೊಡನೆ ಅಮರದೇಶದಲ್ಲಿ ಬಂದಿಳಿ ದಿರಬಹುದು.

ವಲ್ಲಭದೇವ! ನಮ್ಮ ಹಿತವನ್ನು ಬಯಸಿ ಮಲಯಪಟ್ಟಣದಿಂದ ಇಲ್ಲಿಗೆ ಅತ್ಯಾತುರದಿಂದ ಬಂದು ಈ ಸಂಗತಿಯನ್ನು ತಿಳಿಸಿದುದಕ್ಕಾಗಿ ನಾವು ಬಹುಳ ಕೃತಜ್ಞ ರಾಗಿರುವವು. ಈ ಕಾಲದಲ್ಲಿ ರಾಜ್ಯಪರಿವರ್ತನೆಯು ಬಹು ಕಷ್ಟಸಾಧ್ಯ. ಒಂದು ಕಡೆ ನಮ್ಮ ಸೈನಿಕರು, ಮತ್ತೊಂದು ಕಡೆ ನಮ್ಮ ಪೋಲೀಸಿನವರು ಆವಾಗಲೂ ಕಣ್ಣೇ ಕಾವಲಾಗಿರುವರು ಅಕ್ಕ ಪಕ್ಕದ ರಾಜರು ನಮಗೆ ಹಿತರು; ಹೀಗಿರುವಲ್ಲಿ ಆ ರಾಕ್ಷಸನು ಆವಾಗ ಎಲ್ಲಿಗೆ ಬಂದರೂ ಆಕ್ಷಣವೇ ನಮಗೆ ಸುದ್ದಿಯು ಬರುವುದಲ್ಲದೆ

ಪ್ರಜೆಗಳು ಒಂದು ನಿಮಿಷದಲ್ಲಿ ಸೈನ್ಯಸಮೇತನಾದ ಅವನನ್ನು ಧ್ವಂಸಮಾಡಿ ಬಿಡುವರು.

ಈ ಮಾತನ್ನು ಕೇಳುತ್ತಲೆ ವಲ್ಲಭದೇವನ ಮುಖವು ಬಾಡಿಹೋಯಿತು. ಅಲ್ಲಿಯೇ ಇರಬೇಕೋ ಹೋಗಬೇಕೋ ಅವ್ಪದೂ ಅವನಿಗೆ ತಿಳಿಯಲಿಲ್ಲ. ಹೀಗಿರುವ ವೇಳೆಯಲ್ಲಿ ಪೋಲೀಸು ಮಂತ್ರಿಯು ಅಲ್ಲಿಗೆ ಮರಳಿ ಬಂದನು.

---

# ಹತ್ತನೆಯ ಅಧ್ಯಾಯ

## ಏಲಾದ್ವೀಪದ ರಾಕ್ಷಸನು.

ಆ ದಿನದ ಸುದ್ದಿಯನ್ನು ತಿಳಿದುಕೊಂಡು ಬರಲು ಹೋಗಿದ್ದ ಪೋಲೀಸು ಮಂತ್ರಿಯು ಪುನಃ ರಾಜನ ಅಂತರ್ಗೃಹಕ್ಕೆ ಗಡ ಗಡನೆ ನಡುಗುತ್ತ ಮೂರ್ಛಿತನಾಗಿ ನೆಲದ ಮೇಲೆ ಬೀಳುವಂತೆ ಬಂದನು ಅವನ ಸ್ಥಿತಿಯನ್ನು ನೋಡಿದ ಕೂಡಲೆ ಮನಸ್ಸಿಗೆ ಅನುಮಾನ ಹುಟ್ಟಿ, ಕೋಪಾಕ್ರಾಂತನಾಗಿ ರಾಜನು ಏನಯ್ಯಾ ಮಂತ್ರೀ! ಹೀಗೆ ಏಕೆ ಪಿಶಾಚ ಹಿಡಿದಂತೆ ಆಡುತಲಿದ್ದೀಯೆ ? ಈ ನಮ್ಮ ಪಂಡಿತರಿಗೆ ತೋರಿದ ಭಯವು ಸಟೆಯಲ್ಲವೆಂದು ಈಗತಾನೇ ವಲ್ಲಭದೇವನು ನನ್ನೊಡನೆ ಹೇಳುತಲಿದ್ದನು; ನಿನ್ನ ಈ ಅವಸ್ಥೆಯನ್ನು ನೋಡಿದರೆ ಅದು ನಿಜವೆಂದೇ ತೋರುತ್ತಲಿದೆ ಎನ್ನಲು, ಅದಕ್ಕೆ ಮಂತ್ರಿಯು ಆವ ಉತ್ತರವನ್ನೂ ಕೊಡದೆ ಪಂಡಿತನ ಮುಖವನ್ನು ನೋಡಲು, ಆವನು ಪೋಲೀಸು ಮಂತ್ರಿಗೆ ಅವಮಾನವನ್ನು ಮಾಡಿ ವಿರೋಧಕಟ್ಟಿಕೊಳ್ಳುವುದ ಕ್ಕಿಂತಲೂ ಸಹಾಯವನ್ನು ಮಾಡಿ ಅವನ ಸ್ನೇಹವನ್ನು ನಿಲ್ಲಿಸಿಕೊಳ್ಳುವುದು ಮೇಲೆಂದು ತಿಳಿದು ಸ್ವಲ್ಪತಾಳು, ನಿನ್ನ ಇಷ್ಟದಂತೆ ಸಹಾಯವನ್ನು ಮಾಡುವೆನು ಎಂದು ಸಂಜ್ಞೆ ಯನ್ನು ಮಾಡಿದನು

ಅದನ್ನು ಕಂಡು ಸ್ವಲ್ಪ ಧೈರ್ಯಗೊಂಡು ಪೋಲೀಸು ಮಂತ್ರಿಯು ರಾಜನನ್ನು ನೋಡಿ “ಮಹಾಸ್ವಾಮೀ! ಮಹಾಸ್ವಾಮೀ!” ಎಂದು ಏನನ್ನೋ ಹೇಳಲು ಪ್ರಾರಂಭಿಸಿದನು ; ಆದರೆ ಮುಂದೆ ಆವ ಮಾತೂ ಹೊರಡದೆ ಸುಮ್ಮನೆ ನಿಂತನು. ಆಗ ರಾಜನು ಏನು ಹೇಳು ಎಂದು ಕೇಳಿದನು. ಪೋಲೀಸು ಮಂತ್ರಿಯು ದೊರೆಯ

ಕಾಲುಗಳ ಮೇಲೆ ಬೀಳಲು, ರಾಜನು ಅಷ್ಟರಲ್ಲಿಯೇ ಹಿಂಜರಿದು ಹುಬ್ಬುಗಳನ್ನು ಗಂಟು ಹಾಕಿಕೊಂಡು ನೀನು ಮಾತನಾಡುವೆಯೋ ಇಲ್ಲವೋ ಹೇಳು ಎಂದು ಗರ್ಜಿಸಿದನು.

ಮಹಾಸ್ವಾಮೀ ! ನನ್ನ ದೌರ್ಭಾಗ್ಯವನ್ನು ಏನೆಂತ ಹೇಳಲಿ ? ತಮ್ಮ ಕರುಣಾ ಕಟಾಕ್ಷಕ್ಕೆ ನನ್ನನ್ನು ಪಾತ್ರವನ್ನಾಗಿ ಮಾಡಬೇಕೆಂದು ಬೇಡಿಕೊಳ್ಳುವೆನು

ಏನು ಸಮಾಚಾರ ಹೇಳು. ನನ್ನ ಅಪ್ಪಣೆಯೆಂದರೆ ನೀನು ಲಕ್ಷ್ಯಮಾಡದಂತೆ ತೋರುತ್ತಲಿದೆ.

ಮಹಾಸ್ವಾಮೀ! ತಮ್ಮ ಆಜ್ಞೆಯನ್ನು ನಾನು ಆವಾಗಲೂ ಶಿರಸಾ ವಹಿಸಿರುವೆನು ರಾಜ್ಯಭ್ರಷ್ಟನು ಈಗ ಒಂದು ವಾರದ ಹಿಂದೆ ಏಲಾದ್ವೀಪವನ್ನು ಬಿಟ್ಟು ಸೇನಾಸಮೇತ ನಾಗಿ ಬಂದು ಐದು ದಿವಸಗಳ ಕೆಳಗೆ ಅಮರದೇಶವನ್ನು ಸೇರಿದನು.

ರಾಜ್ಯಭ್ರಷ್ಟನು ಐದು ದಿವಸಗಳ ಹಿಂದೆ ಸೇನಾಸಮೇತನಾಗಿ ನಮ್ಮ ದೇಶಕ್ಕೆ ಬಂದ ವರ್ತಮಾನವನ್ನು ಈ ದಿನ ನೀನು ನಮಗೆ ಹೇಳುವೆಯೋ ? ನಿನಗೆ ತಿಳಿದ ಸುದ್ದಿಯೇ ಸಟೆಯೋ ? ಅಥವಾ ನಿನಗೆ ಹುಚ್ಚು ಹಿಡಿದಿದೆಯೋ ?

ಮಹಾಸ್ವಾಮೀ ! ನಾನು ತಂದ ವರ್ತಮಾನವು ಸುಳ್ಳಲ್ಲ ಎಂದು ಮಂತ್ರಿಯು ಹೇಳಲು ರಾಜನ ಕೋಪವು ಮತ್ತಷ್ಟು ಹೆಚ್ಚಿತು ಅಷ್ಟರಲ್ಲಿಯೇ ಸಮಾಧಾನವನ್ನು ಮಾಡಿಕೊಂಡು ಆ ಸೇನಾಸಮೇತನಾಗಿ ಬಂದು ಅಮರದೇಶದಲ್ಲಿ ಇಳಿದುದು ನಿಜ ವಾಗಿದ್ದಲ್ಲಿ ನಮ್ಮ ಅಧಿಕಾರಿಗಳೆಲ್ಲರೂ ಅವನಿಗೆ ಒತ್ತಾಸೆಮಾಡಿರಬೇಕು. ನಮ್ಮ ಉಪ್ಪನ್ನು ತಿಂದು ನಮಗೇ ದ್ರೋಹವನ್ನು ಮಾಡಿದುದಕ್ಕಾಗಿ ನಾನು ವ್ಯಥೆಪಡುವೆನು ಎಂದನು.

ಆಗ ಪಂಡಿತನು ರಾಜನನ್ನು ನೋಡಿ ಮಹಾಸ್ವಾಮೀ ! ಇದು ಗ್ರಹಗತಿಗಳ ಕೆಲಸವೇ ಹೊರತು ಮನುಷ್ಯರ ಕೆಲಸವಲ್ಲ ನಮ್ಮ ಪೋಲೀಸು ಮಂತ್ರಿಯು ಉಂಡ ಮನೆಗೆರಡನ್ನು ಬಗೆವಾತನಲ್ಲ. ಈ ವಿಷಯದಲ್ಲಿ ನಾವೆಲ್ಲರೂ ಅಂಧರಂತೆ ಇದ್ದೆವು ; ನಮ್ಮ ಪೋಲೀಸು ಮಂತ್ರಿಯೂ ನಮ್ಮಂತೆಯೇ ಇದ್ದನು ಎಂದನು.

ಆಗ ವಲ್ಲಭದೇವನು ಆದರೆ — ಎಂದು ಅವ್ಯಾವುದನ್ನೋ ಹೇಳಲು ಆರಂಭಿಸಿ ಆ ಮಾತನ್ನಾಡಿದರೆ ತನ್ನ ಏಳಿಗೆಗೆ ಆರಿಂದ ಆವ ವಿಧವಾದ ಕುಂದಕವು ಬರುವುದೋ

ಎಂದು ಭಯಪಟ್ಟು, ರಾಜನ ಕಡೆಗೆ ತಿರುಗಿ ಮಹಾಸ್ವಾಮಿಯವರ ಕೆಲಸದಲ್ಲಿ ನನಗೆ ಇರತಕ್ಕ ಶ್ರದ್ಧೆಯಿಂದ ಮಾತನಾಡಲುಪಕ್ರಮಿಸಿದೆನು. ಇದು ನಡೆವಳಿಗೆ ವಿರೋಧ ವಾದುದರಿಂದ ಕ್ಷಮಿಸಬೇಕು ಎಂದನು.

ಅಯ್ಯಾ ವಲ್ಲಭದೇವ ! ಈಗ ನೀನೇ ನಮಗೆ ಆಪ್ತನು ಹೆದರಬೇಡ, ಧೈರ್ಯ ವಾಗಿ ಮಾತನಾಡು. ಆ ರಕ್ಕಸನ ಸಮಾಚಾರವನ್ನು ಮುಂದಾಗಿ ನಮಗೆ ತಿಳಿಸಿ ದವನು ನೀನೇ ಆದುದರಿಂದ ಅದಕ್ಕೆ ಏನು ಮಾಡಬೇಕೋ ಅದನ್ನು ನೀನೇ ಹೇಳಬೇಕು

ತನ್ನ ಅದೃಷ್ಟವು ಉಚ್ಚಸ್ಥಿತಿಗೆ ಬಂದಿತೆಂದು ವಲ್ಲಭದೇವನು ಸಂತಸದಿಂದ ಅಮರದೇಶದ ದಕ್ಷಿಣಭಾಗದಲ್ಲಿ ಇರತಕ್ಕವರೆಲ್ಲರೂ ನಮಗೆ ಅನುಕೂಲರು ರಾಜ್ಯ ಭ್ರಷ್ಟನು ಆ ಭಾಗದಲ್ಲಿ ಇಳಿದಿದ್ದರೆ ನಮಗೆ ಅನುಕೂಲವಾಗುತಲಿದ್ದಿತು ಎಂದನು.

ಅದಕ್ಕೆ ಪೋಲೀಸು ಮಂತ್ರಿಯು ಅವನು ದಕ್ಷಿಣಭಾಗದಲ್ಲಿ ಇಳಿಯದೆ ಉತ್ತರ ದಲ್ಲಿಳಿದು ಅಲ್ಲಿಂದ ಮುಂದೆ ಬರುತಲಿದಾನೆ ಎನ್ನಲು, ಏನ ಹೇಳಿದೆ ? ಮುಂದೆ ಬರುತ ಲಿದ್ದಾನೆಯೇ ? ನೀವೆಲ್ಲರೂ ಏನ ಮಾಡುತಲಿದ್ದಿರಿ ? ಎಂದು ಅತಿ ಕೋಪದಿಂದ ರಾಜನು ಕೇಳಿದನು ಪೋಲೀಸು ಮಂತ್ರಿಯು ಸುಮ್ಮನಿದ್ದರೆ ಒಪ್ಪಿದಂತೆ ಎಂಬ ನಾಣ್ನುಡಿಯಂತೆ ಸುಮ್ಮನಿದ್ದನು.

ಆಗ ರಾಜನು ವಲ್ಲಭದೇವನನ್ನು ನೋಡಿ ಉತ್ತರದ ಕಡೆಯವರು ನಮಗನು ಕೂಲರೋ ಎನ್ನಲು, ವಲ್ಲಭದೇವನು ಮಹಾಸ್ವಾಮೀ ! ವಾಸ್ತವಾಂಶವು ಅವಾಗಲೂ ಹಿತವಲ್ಲ , ಆದರೂ ಅರಿಕೆ ಮಾಡುವೆನು ಉತ್ತರಪ್ರಾಂತ್ಯದವರು ರಾಜ್ಯಭ್ರಷ್ಟನಿಗೆ ಅನುಕೂಲರು ಎಂದನು.

ವಲ್ಲಭದೇವನಿಗೆ ತಿಳಿದ ಸಮಾಚಾರಗಳು ನಮ್ಮ ಪೋಲೀಸು ಮಂತ್ರಿಗೆ ತಿಳಿ ಯದೆ ಹೋಯಿತು ಎಂದು ರಾಜನು ಪೋಲೀಸು ಮಂತ್ರಿಯನ್ನು ಕುರಿತು ರಾಜ್ಯ ಭ್ರಷ್ಟನು ಎಷ್ಟು ಸೈನ್ಯವನ್ನು ತಂದಿರುವನು ಎಂದು ಕೇಳಿದುದಕೆ, ಅವನು “ ಅದು ನನಗೆ ತಿಳಿಯದು ” ಎಂದನು

ಆ ಮಾತು ರಾಜನ ಕೋಪಾಗ್ನಿಗೆ ತುಪ್ಪವಾದಂತಾಯಿತು. ತಿಳಿಯದು, ತಿಳಿ ಯದು, ಏಕೆ ತಿಳಿಯದು ? ಈಗ ನೀನು ಹೇಳಿದುದೆಲ್ಲವೂ ಹೇಗೆ ತಿಳಿಯಿತು ಎಂದು

ರಾಜನು ಕೇಳಿದುದಕೆ, ಪೋಲೀಸುಮಂತ್ರಿಯು ಗಡಗಡ ನಡುಗಿ ಅವು ವಿದ್ಯುದ್ಯಂತ್ರ ದಿಂದ ಬಂದವು ಎಂದು ಹೇಳಲು, ರಾಜನು ಈ ವರ್ತಮಾನವನ್ನೂ ಆ ಮೂಲಕ ವಾಗಿಯೇ ತಿಳಿಯಲು ಏನಾಗಿದ್ದಿತು ? ಎಂದು ಕಣ್ಣುಗಳಿಂದ ಬೆಂಕಿಯನ್ನು ಸುರಿಸುತ್ತ ಇನ್ನು ಮುಂದೆ ಮಾಡತಕ್ಕದು ಸೇನಾಪತಿಯ ಕೆಲಸ, ನೀನು ಹೋಗು ಎಂದರೂ ಪೋಲೀಸು ಮಂತ್ರಿಯು ಹೋಗದೇ ಅಲ್ಲಿಯೇ ನಿಂತಿದ್ದನು

ಆಗ ರಾಜನು ಅಯ್ಯೋ ದೇವರೇ ! ಇಪ್ಪತ್ತೈದು ವರ್ಷಗಳವರೆಗೆ ರಾಜ್ಯ ಭ್ರಷ್ಟನಾಗಿ ಅಲೆದು ಕೊನೆಗೆ ಆರುಜನ ರಾಜರ ಸಹಾಯದಿಂದ ರಾಜ್ಯಾಪಹಾರಿ ಯಾಗಿದ್ದ ರಾಕ್ಷಸನನ್ನು ಸೋಲಿಸಿ ನಮ್ಮ ಹಿರಿಯರ ಸಿಂಹಾಸನದ ಮೇಲೆ ಕುಳಿತೆನು. ಅಂದಿನಿಂದ ಇದುವರೆಗೆ ಅಮರದೇಶದವರ ಸೌಖ್ಯವನ್ನೇ ವಿಚಾರಮಾಡಿ ಅವರನ್ನು ಸಂತೋಷಗೊಳಿಸುವುದರೊಳಗೆ ನಾನೇ ಪಲಾಯನಸೂಕ್ತವನ್ನು ಹೇಳುವ ಸಂದರ್ಭವು ಮರಳಿ ಬಂದೊದಗಿತು ಎಂದು ಸಂಕಟಪಟ್ಟನು

ಆಗ ಪೋಲೀಸು ಮಂತ್ರಿಯು ಮಹಾಸ್ವಾಮಿ ! ಇದು ನಮ್ಮ ಅದೃಷ್ಟ ಎಂದು ದನ್ನು ಕೇಳಿ, ರಾಜನು ಅದೃಷ್ಟ, ಅದೃಷ್ಟ, ನಾನಿಲ್ಲದಿದ್ದರೆ ನಿಮ್ಮ ಅದೃಷ್ಟವೇನಾ ಗುತಲಿದ್ದಿತು ? ಆ ರಾಕ್ಷಸನಂತೆ ಮೋಸಗಾರರಿಂದ ಕೈಬಿಡಲ್ಪಟ್ಟಿದ್ದರೆ ನನಗೇನೂ ಯೋಚನೆ ಇರುತಿರಲಿಲ್ಲ ; ನನ್ನಿಂದ ದೊಡ್ಡ ಪದವಿಗಳನ್ನೂ ಮರ್ಯಾದೆಗಳನ್ನೂ ಹೊದ್ದಿ ನನಗೆ ಪರಮ ಆಪ್ತರೆಂದು ಹೇಳಿಕೊಳ್ಳುತಲಿದ್ದ ಜನಗಳು ಇಷ್ಟು ಅಜಾಗ ರೂಕರಾಗಿದ್ದುದು ದುರದೃಷ್ಟವೇ ಸರಿ ಇವರೆಲ್ಲರೂ ಅನಾಮಧೇಯರಾಗಿಯೂ ಬಡವರಾಗಿಯೂ ಇದ್ದರು ; ನನ್ನ ಕಾಲಾನಂತರ ಮರಳಿ ಅದೇ ಸ್ಥಿತಿಗೆ ಬರುವರು. ಇಂಥವರನ್ನು ಹತ್ತಿರ ಸೇರಿಸಿಕೊಂಡುದು ನನ್ನ ದುರದೃಷ್ಟವೇ ಸರಿ ಎಂದು ಪೋಲೀಸು ಮಂತ್ರಿಯನ್ನು ನೋಡಿದನು ಅದನ್ನು ಕೇಳುತಲೆ ಅವನ ಸರ್ವಾಂಗವೂ ನಡುಗಿ ಬೆವರಿತು ಪಂಡಿತನು ತನ್ನ ಮುಖದಲ್ಲಿ ಸುರಿಯುತಲಿರುವ ಬೆವರನ್ನು ಒರಸಿ ಕೊಂಡನು. ವಲ್ಲಭದೇವನು ಮಾತ್ರ ರಾಜನಿಗೆ ತನ್ನಲ್ಲಿ ಗೌರವವು ಹೆಚ್ಚಿತೆಂದು ಮನ ದಲ್ಲಿ ಹಿಗ್ಗುತ್ತಲಿದ್ದನು.

ರಾಜನು ಪುನಃ ತಂತಿಯ ಮೂಲಕ ನನ್ನ ದುರ್ದಶೆಯನ್ನು ತಿಳಿಯುವುದು ನಾಚಿಕೆಗೇಡು ; ಅದಕ್ಕಿಂತ ಸಾಯುವುದೇ ಲೇಸು ಎಂದು ಗೋಳಾಡುತ್ತ ಮಂತ್ರಿ

ಯನ್ನು ನೋಡಿ ನಿನ್ನಷ್ಟು ಅಧಿಕಾರವೂ, ಆಳುಗಳೂ, ಬೇಹಿನವರೂ, ದ್ರವ್ಯ ಸಹಾಯವೂ ಇಲ್ಲದಿರುವ ನಮ್ಮ ವಲ್ಲಭದೇವನಿಗೆ ತಿಳಿದ ಸುದ್ದಿಯು ನಿನಗೆ ತಿಳಿಯಲಿಲ್ಲವಲ್ಲಾ? ನಿನ್ನ ಯೋಗ್ಯತೆಯು ಇಷ್ಟೇ ಸರಿ ಎಂದು ಈಗ ನನಗೆ ಗೊತ್ತಾಯಿತು. ಮುಂದೆ ನೋಡೋಣ ಎಂದನು. ಆಗ ಪೋಲೀಸು ಮಂತ್ರಿಯು ತನ್ನ ಮತ್ಸರದ ದೃಷ್ಟಿಯಿಂದ ವಲ್ಲಭದೇವನನ್ನು ನೋಡಲು, ರಾಜನು ತನ್ನನ್ನು ಸ್ತುತಿಸಿದ್ದುದಕ್ಕಾಗಿ ಅವನು ಸಂತೋಷಪಟ್ಟು, ಮನದಲ್ಲಿ "ಮಂತ್ರಿಯ ಪರಿಣಾಮವು ಮುಗಿಯಿತು, ಇನ್ನು ಇವನು ರಾಜನ ಮುಂದೆ ತಲೆಯೆತ್ತಲಾರನು, ಈ ವೇಳೆಯಲ್ಲಿ ಇವನಿಗೆ ನಾನು ಸಹಾಯ ಮಾಡದಿದ್ದರೆ ಇವನು ನನಗೆ ಈ ವರ್ತಮಾನವು ಹೇಗೆ ತಿಳಿಯಿತೆಂಬುದನ್ನು ವಿಚಾರಿಸಿ ಧರ್ಮದೇವನಿಂದ ಗುಟ್ಟನ್ನು ತಿಳಿದು ರಾಜನಿಗೆ ಹೇಳಬಹುದು" ಎಂಬ ಭೀತಿಯಿಂದ, ರಾಜನನ್ನು ಕುರಿತು ಮಹಾಸ್ವಾಮೀ! ಈ ಸಂಗತಿಯು ಹಠಾತ್ತಾಗಿ ಅದೃಷ್ಟವಶಾತ್ ನನಗ ಗೊತ್ತಾದುದರಿಂದ ತಾವು ನನಗೆ ಇಷ್ಟು ಗೌರವವನ್ನು ಕೊಡಬೇಕಾದುದಿಲ್ಲ. ಇದೇ ಸಮಾಚಾರವು ಮಂತ್ರಿಯವರಿಗೆ ತಿಳಿದಿದ್ದರೆ ಅವರು ಮೊದಲೇ ತಕ್ಕ ಏರ್ಪಾಡನ್ನು ಮಾಡುತಲಿದ್ದರು ತಮಗೆ ನನ್ನಲ್ಲಿ ಉಂಟಾದ ಪ್ರಥಮಾಭಿಪ್ರಾಯವನ್ನು ಕೊನೆಯವರೆಗೂ ಬದಲಾಯಿಸದಿರಬೇಕೆಂಬ ಅಭಿಪ್ರಾಯದಿಂದ ಮಹಾಸ್ವಾಮಿಯಲ್ಲಿ ಅರಿಕೆ ಮಾಡಿದೇನೆ, ಕ್ಷಮಿಸಬೇಕು, ಎಂದು ಹೇಳಿ ಮಂತ್ರಿಯನ್ನು ನೋಡಲು, ಅವನು ತನಗೆ ಮಾಡಿದ ಸಹಾಯಕ್ಕಾಗಿ ವಲ್ಲಭದೇವನನ್ನು ಕಣ್ಣಿನಿಂದಲೇ ವಂದಿಸಿದನು.

ಪ್ರಕೃತ ನಿನ್ನಿಂದ ಇನ್ನೇನು ಕೆಲಸವಿಲ್ಲ, ನೀನು ಹೋಗಿ ಬರಬಹುದೆಂದು ರಾಜನು ಮಂತ್ರಿಗೆ ಅಪ್ಪಣೆಯಂ ಮಾಡಲು, ಪಂಡಿತನು ಮಹಾಸ್ವಾಮೀ! ನಾವು ನಮ್ಮ ಸೈನ್ಯವನ್ನು ನಚ್ಚಬಹುದು; ಅವರ ರಾಜಭಕ್ತಿಯೂ, ವಿಶ್ವಾಸವೂ ನಮಗೆ ಬರುತಲಿರುವ ಪ್ರತಿಯೊಂದು ವರ್ತಮಾನದಿಂದಲೂ ಚೆನ್ನಾಗಿ ತಿಳಿದು ಬರುತ್ತಲಿವೆ ಎಂದನು.

ನಮಗೆ ಬರುತಲಿರುವ ವರ್ತಮಾನಗಳನ್ನು ನಾವು ಎಷ್ಟುಮಟ್ಟಿಗೆ ನಂಬಬಹುದೋ ಅದು ಈಗ ಗೊತ್ತಾಯಿತು ವರ್ತಮಾನವೆನ್ನುತಲ ನದಿಯ ದಡದ ಮೈದಾನದಲ್ಲಿ ಆದ ಕೊಲೆಯು ನೆನಪಿಗೆ ಬಂದಿತು ಆ ವಿಚಾರವೇನಾಯಿತು ಎಂದು ರಾಜನು ಮಂತ್ರಿಯನ್ನು ಕೇಳಿದ ಕೂಡಲೆ ವಲ್ಲಭದೇವನು ಬೆಚ್ಚಿಬಿದ್ದನು.

ಆಗ ಪೋಲೀಸು ಮಂತ್ರಿಯು ರಾಜನನ್ನು ಕುರಿತು, ಮಹಾಸ್ವಾಮೀ ! ಆ ವಿಚಾರದಲ್ಲಿ ನನಗೆ ತಿಳಿದು ಬಂದಿರುವ ಹೊಸ ಸಮಾಚಾರವೊಂದನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳಬೇಕೆಂದೇ ಇಲ್ಲಿಗೆ ಬಂದೆನು ಆದರೆ ಇನ್ನೂ ಪ್ರಬಲತರವಾದ ವಿಷಯಗಳು ಚರ್ಚಿಸಲ್ಪಡುತ್ತಿದ್ದುದರಿಂದ ಅದನ್ನು ಹೇಳದೆ ಸುಮ್ಮನಿದ್ದೆನು ಎಂದನು

ಆ ಕೊಲೆಯೂ, ರಾಜ್ಯಾಪಹಾರಿಯ ಪಕ್ಷವಾಗಿ ನಡೆದ ಒಳಸಂಚೂ, ಒಂದಕ್ಕೊಂದು ಹೊಂದಿಕೊಂಡಿರುವುವು. ನಮ್ಮ ಸೇನಾನಾಯಕ ವೀರಪ್ರಚಂಡನ ವಧೆಯೇ ಈ ಒಳಸಂಚಿನ ಮಾರ್ಗದರ್ಶಕವಾಗಿರುವುದು ಎಂದು ರಾಜನು ಮಂತ್ರಿಗೆ ಹೇಳಲು, ವಲ್ಲಭದೇವನಿಗೆ ಗಾಬರಿಯಾಯಿತು.

ಮಹಾಸ್ವಾಮೀ ! ಜನಗಳು ಹುಟ್ಟಿಸಿರುವ ಸುದ್ದಿಯಂತೆ ಸೇನಾನಾಯಕನು ಆತ್ಮಹತ್ಯವನ್ನು ಮಾಡಿಕೊಳ್ಳಲಿಲ್ಲವೆಂದು ನನಗೆ ತಿಳಿಯಬಂದಿರುತ್ತದೆ ಎಂದ ಮಂತ್ರಿಯ ಮಾತನು ಕೇಳಿ ರಾಜನು ವಲ್ಲಭದೇವನ ಕಡೆಗೆ ತಿರುಗಿ, ಅಯ್ಯಾ ವಲ್ಲಭದೇವ, ಈ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು ? ಎನ್ನಲು, ವಲ್ಲಭದೇವನು ಆ ಸೇನಾನಾಯಕನು ಅವಿಛಿನ್ನರಾಜಭಕ್ತನಾಗಿದ್ದುದರಿಂದ ಅವನನ್ನು ರಾಜ್ಯಚ್ಯುತನಾದ ಆ ರಾಕ್ಷಸನ ಕಡೆಯವರಾರೋ ಕೊಂದಿರಬೇಕು ಎಂದು ತೋರುತ್ತದೆ ಎಂದನು

ಬಳಿಕ ಪೋಲೀಸು ಮಂತ್ರಿಯು ಮಹಾಸ್ವಾಮೀ, ಆ ದಿನ ಸೇನಾನಾಯಕನ ಮನೆಗೆ ಹೋಗಿದ್ದ ಮನುಷ್ಯನ ಜಾಡೆಯನ್ನು ಹಿಡಿದು ಹೋಗುತಲಿದ್ದೇವೆ ಎಂದು ರಾಜನಲ್ಲಿ ಅರಿಕೆಯಂ ಮಾಡಲು ಆ ಮನುಷ್ಯನನ್ನು ಗುರುತಿಸಲು ಸಾಧ್ಯವೋ ಎಂದು ವಲ್ಲಭದೇವನು ಕೇಳಿದನು ಅದಕ್ಕೆ ಪೋಲೀಸು ಮಂತ್ರಿಯು ಆತನಿಗೆ ಸುಮಾರು ಐವತ್ತು ಅಥವಾ ಐವತ್ತೆರಡು ವಯಸ್ಸು ; ನಿಮ್ಮಷ್ಟೇ ಎತ್ತರ; ಮುಖವು ಕೆಂದು ಬಣ್ಣ, ಕಣ್ಣು ಗುಡ್ಡೆ ಕಪ್ಪು ? ಹುಬ್ಬು ಕೂದಲುಗಳು ಕೆದರಿಕೊಂಡಿವೆ, ಮೀಸೆಯು ದಪ್ಪವಾಗಿರುವುದು, ಗಿರಲುಮೀಸೆಯೂ ಉಂಟು , ತೊಟ್ಟಿರುವುದು ನೀಲಿಯ ಅಂಗಿ, ಅದಕ್ಕೆ ಹಳದಿಯ ಕಶೆಗಳಿರುವುವು ಎಂದು ತಿಳಿದುಬಂದಿದೆ ಈ ಚಹರೆಗೆ ತಕ್ಕಂಥವನೊಬ್ಬನು ನೆನ್ನೆ ಸಿಕ್ಕಿದ್ದವನು ರಾಜಬೀದಿಯ ಜನರ ಸಂದಣಿಯಲ್ಲಿ ಎಲ್ಲೋ ತಪ್ಪಿಸಿಕೊಂಡು ಹೋದನು ಎಂದುತ್ತರವಂ ಕೊಟ್ಟನು.

ಈ ವರ್ಣನೆಯನ್ನು ಕೇಳುತ್ತಲೇ ಮೊದಲೇ ಗಾಬರಿಬಿದ್ದಿದ್ದ ವಲ್ಲಭದೇವನಿಗೆ ಒಂದು ವಿಧವಾದ ಸಂಕಟವುಂಟಾಗಿ ಕಾಲುಗಳು ನಡುಗಿ ಉಚ್ಛ್ವಾಸನಿಶ್ವಾಸಗಳು ನಿಂತುಹೋಗಿದ್ದು, ಆ ಮುದುಕನು ತಪ್ಪಿಸಿಕೊಂಡು ಹೋದನೆಂದು ಕೇಳಿ ಮೆಲ್ಲಗೆ ಉಸಿರಾಡತೊಡಗಿತು.

ರಾಜನು ಈ ಮಾತ ಕೇಳುತಲೆ "ನಮ್ಮ ವೀರಪ್ರಚಂಡನು ಈಗ ಬದುಕಿದ್ದರೆ ನಮಗೆ ಎಷ್ಟೋ ಅನುಕೂಲವಾಗುತ್ತಿದ್ದಿತು ಅವನನ್ನು ಕೊಂದವನನ್ನು ನಾವು ಅತಿ ಕ್ರೂರವಾದ ಶಿಕ್ಷೆಗೆ ಗುರಿಮಾಡುವೆವು. ಮಂತ್ರಿಯೇ! ಅವನನ್ನು ಹೇಗಾದರೂ ಹಿಡಿಯುವ ಪ್ರಯತ್ನಮಾಡಬೇಕು" ಎಂದನು.

ದೊರೆಯ ಅಪ್ಪಣೆಯನ್ನು ಕೇಳಿ ದಿಗಿಲಿನಿಂದ ವಲ್ಲಭದೇವನು ನೆಲಕ್ಕೆ ಕುಗ್ಗಿ ಬೀಳುವಂತಾದನು, ಮುಖವು ಬೆವರಿ ಪಕ್ಕದಲ್ಲಿದ್ದ ಕುರ್ಚಿಯನ್ನು ಒರಗಿಕೊಂಡು ತನ್ನ ಭಯವನ್ನು ಇತರರು ಕಾಣದೆ ಇರಬೇಕೆಂದು ಎಷ್ಟೋ ಸಾಹಸವನ್ನು ಮಾಡಿದನು. ದೈವಾಧೀನದಿಂದ ಯಾರೂ ಅವನನ್ನು ನೋಡಲಿಲ್ಲ.

ಇನ್ನು ಇಲ್ಲಿದ್ದರೆ ಸ್ವಾರಸ್ಯವಿಲ್ಲವೆಂದು ಯೋಚಿಸಿ, ವಲ್ಲಭದೇವನು "ಮಹಾಸ್ವಾಮಿ, ಅಪ್ಪಣೆಯಾದರೆ ಹೋಗಿ ಬರುತ್ತೇನೆ," ಎಂದು ಕೇಳಿಕೊಂಡನು. "ಒಳ್ಳೆಯದು, ಹೋಗಿ ಬಾ ಎಲ್ಲಿ ಇಳಿದು ಇದ್ದೀಯೆ? ತಂದೆಯ ಮನೆಯಲ್ಲಿ ತಾನೇ, ಎಂದು ರಾಜನು ಕೇಳಿದುದಕ್ಕೆ, "ಮಹಾಸ್ವಾಮೀ! ನಾನು ಅಷ್ಟು ದೂರ ಹೋಗಲಿಲ್ಲ; ಬಂಡಿಯಿಂದ ಇಲ್ಲಿಗೆ ನೆಟ್ಟಗೆ ಬಂದೆನು."

ನಿನ್ನ ತಂದೆಯನ್ನು ನೋಡಿದ್ದೆಯೋ?

ಇಲ್ಲ, ಮಹಾಸ್ವಾಮೀ! ಬಹುಶಃ ಅವನನ್ನು ನೋಡಲಾರೆ.

ಓಹೋ! ನಿನ್ನ ತಂದೆಯು ರಾಜ್ಯಾಪಹಾರಿಯ ಕಡೆಯವನಾದುದರಿಂದ ನಮಗೋಸುಗ ನೀನು ತಂದೆಯನ್ನು ಬಿಟ್ಟಿರುವೆ ಎಂಬುವುದನ್ನು ಮರೆತೆನು ಇದಕ್ಕಾಗಿ ಬೇರೆ ಉಪಕಾರವನ್ನು ನಾನು ನಿನಗೆ ಮಾಡಬೇಕಾಗಿದೆ.

ಮಹಾಸ್ವಾಮೀ! ಸೇವಕನ ಮೇಲೆ ತಮ್ಮ ವಿಶ್ವಾಸವೊಂದಿದ್ದರೆ ಸಾಕು

ಆಗ ರಾಜನು ತನ್ನ ಕೊರಲಲ್ಲಿದ್ದ ಅಮೌಲ್ಯವಾದ ಒಂದು ಹಾರವನ್ನು ತೆಗೆದು ವಲ್ಲಭದೇವನ ಕೊರಳಲ್ಲಿ ಹಾಕಿ ಅಯ್ಯಾ! ನೀನು ಹೋಗಿ ಬಾ ರಾಜ್ಯವು ನಮಗೆ ಉಳಿದರೆ

ನಿನಗೆ ಇನ್ನೂ ಹೆಚ್ಚು ಬಹುಮಾನಗಳನ್ನು ಮಾಡುವೆವು ಎಂದನು. ವಲ್ಲಭದೇವನು ಸಂತೋಷದಿಂದ ಮೈಯ್ಯುಬ್ಬಿ ಆನಂದಬಾಷ್ಪಗಳನ್ನು ಸುರಿಸುತ ರಾಜನಿಂದ ಅಪ್ಪಣೆ ಯನ್ನು ಪಡೆದು, ತನ್ನ ಬೀಡಾರಕ್ಕೆ ಹೊರಟನು. ಅವನ ಸಂಗಡಲೇ ಪೋಲೀಸು ಮಂತ್ರಿಯೂ ಹೊರಟನು

ಅರಮನೆಯನ್ನು ಬಿಟ್ಟು ಹೊರಗೆ ಹೋಗುತ್ತಲೇ ಮಂತ್ರಿಯು ವಲ್ಲಭದೇವನನ್ನು ನೋಡಿ ನಿನ್ನ ಅದೃಷ್ಟವು ತಲೆಯೆತ್ತಿತು, ಇನ್ನು ಮುಂದೆ ನಿನ್ನ ಭಾಗ್ಯಕ್ಕೆ ಆವ ಕೊರ ತೆಯೂ ಇಲ್ಲ ಎಂದುದಕ್ಕೆ, ವಲ್ಲಭದೇವನು ಎಷ್ಟು ದಿವಸಗಳು ಹೀಗಿರುವುದು ಎಂದು ಹೇಳಿ ಬಂಡಿಯಲ್ಲಿ ಕುಳಿತು ಅರಮನೆಯ ಸಮೀಪದಲ್ಲಿರುವ ಸತ್ರವನ್ನು ಸೇರಿದನು.

ಅವನು ಅಲ್ಲಿಗೆ ಬಂದ ಹತ್ತು ನಿಮಿಷದೊಳಗಾಗಿಯೇ ಯಾರೋ ತನ್ನ ಹೆಸ ರನ್ನು ಹಿಡಿದು ಕೂಗಿದಂತೆ ಕೇಳಿಸಲು, ಆಳನ್ನು ಕರೆದು ನನ್ನನ್ನು ಕೂಗಿದವರು ಆರೆಂದು ವಿಚಾರಿಸು, ಎಂದನು. ಆಳು ವಿಚಾರಿಸಿ, ಸ್ವಾಮೀ! ಆವನೋ ಒಬ್ಬ ಮುದುಕನ ತಮ್ಮನ್ನು ನೋಡುವುದಕ್ಕಾಗಿ ಬಂದಿದ್ದಾನೆ. ಹೆಸರೇನೆಂದು ಎಷ್ಟು ಕೇಳಿದರೂ ಅವನು ಹೇಳಲೊಲ್ಲನು ಎಂದನು.

ಅವನು ಹೇಗಿದ್ದಾನೆ.

ಬುದ್ಧೀ! ಅವರು ಸುಮಾರು ಐವತ್ತೆರಡು ವಯಸ್ಸುಳ್ಳವರು; ತಮ್ಮಷ್ಟೇ ಉದ್ದ.

ಅವನ ಮುಖವು ಹೇಗೆ ಇದೆ? ಕೆಂದು ಬಣ್ಣ.

ಕಣ್ಣುಗಳೋ? ಕಪ್ಪು.

ಮೀಸೆ ಇಟ್ಟಿರುವನೋ? ಅಹುದು, ಗಿರಲುಮೀಸೆ.

ಅವನೇ ಇರಬಹುದೆಂದು ಯೋಚಿಸುತ್ತಿರುವುದರೊಳಗೆ ಆ ಮುದುಕನು ಅಲ್ಲಿಗೆ ಬಂದು ನಿಂತು, ಮಗೂ! ನಿನ್ನನ್ನು ನೋಡೋಣವೆಂದು ಬಂದರೆ ಇಷ್ಟು ತಡವೇಕೆ ಎಂದನು.

ನಾನು ನ್ಯಾಯಾಧಿಪತಿಯಾಗಿರುವುದರಿಂದ ನನಗೆ ಅನೇಕಶತ್ರುಗಳುಂಟು. ಅವರಾರಾದರೂ ಬಂದಿರುವರೋ ಎಂದು, ಈ ಆಳನ್ನು ಬಂದವನ ವರ್ಣನೆಯನ್ನು ಕೇಳುತ್ತಲಿದ್ದೆ. ಅವನು ಹೇಳಿದ ಚಹರೆಯಿಂದ ತಾವೇ ಇರಬೇಕೆಂದು ನಿಶ್ಚೈಸಿದೆ.

ನಾನೇ ಎಂದು ತಿಳಿದೂ ಇಷ್ಟು ಹೊತ್ತು ನನ್ನನ್ನು ಬಾಗಿಲಿನಲ್ಲಿ ನಿಲ್ಲಿಸಿದ್ದೆಯೋ?

ಹಾಗಾದರೆ ನೀನು ಹಿರಿಯರಿಗೆ ಒಳ್ಳೆಯ ಮರ್ಯಾದೆಯನ್ನು ತೋರಿಸುತ್ತೀಯೆ ಎಂದನು.

ಮುದುಕನು ಮಾತಾಡುತಿದ್ದುದನ್ನು ಕೇಳುತ್ತಲಿದ್ದ ಆಳನ್ನು ನೋಡಿ ವಲ್ಲಭದೇವನು, ಎಲೋ! ನೀನು ಹೊರಗೆ ಇರು ಎಂದು ಅಪ್ಪಣೆಯ ಮಾಡಿ, ಅವನು ಹೊರಗೆ ಹೋಗುತ್ತಲೇ ಬಾಗಿಲನ್ನು ಮುಚ್ಚಿಕೊಂಡನು

ಈಗ ಒಳಕ್ಕೆ ಬಂದವನೇ ವಲ್ಲಭದೇವನ ತಂದೆ ದೀನನಾಥ.

---

# ಹನ್ನೊಂದನೆಯ ಅಧ್ಯಾಯ

## ತಂದೆಯೂ ಮಗನೂ

ದೀನನಾಥನು ಅವನ ಮಗನ ಸಮೀಪದಲ್ಲಿದ್ದ ಕುರ್ಚಿಯ ಮೇಲೆ ಕುಳಿತು, ಏನೋ ಮಗೂ! ನಿನ್ನನ್ನು ನಾನು ನೋಡುವುದು ನಿನಗೆ ಇಷ್ಟವಿಲ್ಲದಂತೆ ಇದೆ ಎಂದನು ಆಗ ವಲ್ಲಭದೇವನು ಎದ್ದು ಬಾಗಿಲನ್ನು ತೆರೆದು, ಆಳು ಬಾಗಿಲ ಸಮೀಪದಲ್ಲಿಯೇ ನಿಂತಿದ್ದುದನ್ನು ಕಂಡು, ಹೊರಗೆ ಹೋಗಿ ಕುಳಿತುಕೊಳ್ಳುವಂತೆ ಹೇಳಿ, ಹೊರಬಾಗಿಲನ್ನು ಮುಚ್ಚಿಕೊಂಡು ತಂದೆಯ ಬಳಿ ಕುಳಿತು, ಅಪ್ಪಾ! ನಿನ್ನನ್ನು ನೋಡಬೇಕೆಂದೇ ನಾನು ಇಲ್ಲಿಗೆ ಬಂದೆನು. ಹೀಗಿರುವಲ್ಲಿ ನೀನು ಹೀಗೆ ಹೇಳುವುದು ನ್ಯಾಯವೇ ಎಂದು ಕೇಳಿದನು.

ಮಲಯಪಟ್ಟಣದಲ್ಲಿ ನಿನ್ನ ಮದುವೆಯು ನಡೆಯುತಲಿದೆ ಎಂದು ಇದ್ದೆ; ಅದನ್ನು ಬಿಟ್ಟು ನೀನು ನನ್ನನ್ನು ನೋಡಲು ಬಂದೆಯೋ?

ಅಪ್ಪಾ! ಆಹುದು. ನಿನಗೆ ಒಂದು ದೊಡ್ಡ ಆಪತ್ತು ಬಂದಿದ್ದಿತು ಅದನ್ನು ತಪ್ಪಿಸುವುದಕ್ಕಾಗಿ ನಾನು ಬಂದೆನು.

ಅದೇನು ಅಂಥ ಆಪತ್ತು?

ಚಕ್ರವರ್ತಿಯನ್ನು ಪುನಃ ಈ ರಾಜ್ಯಕ್ಕೆ ಕರೆತರಲು ಒಂದು ಸಮಾಜವು ಏರ್ಪಾಡಾಗಿ ಒಳಸಂಚು ನಡೆಯುತಲಿದೆ ಎಂದು ನಿನಗೆ ತಿಳಿದೇ ಇದೆಯಷ್ಟೆ.

ಅಹುದು, ಆ ಸಮಾಜಕ್ಕೆ ನಾನೇ ಅಧಿಪತಿ. "ಅಪ್ಪಾ! ನೀನು ಹೀಗೆ ನಿರ್ಭಯವಾಗಿ ಹೇಳುವುದನ್ನು ನೋಡಿದರೆ ನನ್ನ ಮೈಯ್ ನಡುಗುತ್ತದೆ."

ನನಗೆ ರಾಜಾಜ್ಞೆಯಾಗಿರುವುದೆಂದು ನೀನು ಬಲ್ಲೆ ನನ್ನನ್ನು ಹಿಡಿಯಬೇಕೆಂದು ಪೋಲೀಸಿನವರು ಬೇಟೆನಾಯಿಗಳಂತೆ ಅಲ್ಲಿ ಇಲ್ಲಿ ಅಲೆದು ಎಷ್ಟೋ ಸಾಹಸಪಟ್ಟರು ನಾನೇನು ಅವರ ಕೈಗೆ ಸಿಕ್ಕಿದೆನೇ ! ನನಗೇನು ಭಯ ! ಒಳ್ಳೆಯದು, ಒಳಸಂಚಿನ ಸಮಾಚಾರವೇನು ಹೇಳು.

ಆ ಸಮಾಜಕ್ಕೆ ಸೇರಿದವರಲ್ಲಿ ಒಬ್ಬನು ಸೇನಾನಾಯಕವೀರಪ್ರಚಂಡನ ಮನೆಗೆ ಹೋಗಿ ಅವನನ್ನು ಎಲ್ಲಿಗೋ ಕರೆದುಕೊಂಡು ಹೋದನಂತೆ, ಪುನಃ ವೀರಪ್ರಚಂಡನು ಮನೆಯನ್ನು ಸೇರದೆ ಹತನಾದನಂತೆ, ಅವನ ಶವವು ನದಿಯ ದಡದಲ್ಲಿ ಮಾರನೆ ದಿನ ಸಿಕ್ಕಿತಂತೆ.

ನಿನಗೆ ಈ ವರ್ತಮಾನವು ಹೇಗೆ ತಿಳಿಯಿತು ?

ಅರಮನೆಗೆ ನಾನು ಹೋಗಿದ್ದಾಗ ರಾಜನೇ ಹೇಳಿದನು

ಅದು ಹಾಗಿರಲಿ. ನಾನು ಹೇಳುವುದನ್ನು ಸ್ವಲ್ಪ ಕೇಳು.

ಅಪ್ಪಾ ! ನೀನು ಹೇಳುವ ಸಂಗತಿಯು ನನಗೆ ಮೊದಲೇ ಗೊತ್ತಿದೆ.

ಚಕ್ರವರ್ತಿಯು ಅಮರದೇಶವನ್ನು ಸೈನ್ಯಸಮೇತನಾಗಿ ಸೇರಿದ ವರ್ತಮಾನವು ನಿನಗೆ ಗೊತ್ತಿದೆಯೋ ?

ಅಪ್ಪಾ ! ಸ್ವಲ್ಪ ಮೆಲ್ಲಗೆ ಮಾತನಾಡು ನಿನಗೆ ತಿಳಿಯುವುದಕ್ಕೆ ಒಂದುವಾರ ಹಿಂದೆಯೇ ಈ ವರ್ತಮಾನವು ನನಗೆ ತಿಳಿಯಿತು. ಆದುದರಿಂದಲೇ ನಾನು ಮಲಯ ಪಟ್ಟಣವನ್ನು ಬಿಟ್ಟು ಬಹುವೇಗವಾಗಿ ಪ್ರಯಾಣಮಾಡಿ ಇಲ್ಲಿಗೆ ಬಂದೆನು.

ಮಗೂ ನಿನಗೇನು ಹುಚ್ಚು ಹಿಡಿಯಿತೋ ? ಆರು ದಿವಸಗಳ ಹಿಂದೆ ಚಕ್ರವರ್ತಿಯು ಈ ದೇಶಕ್ಕೆ ಬಂದೇ ಇರಲಿಲ್ಲವಲ್ಲಾ ?

ಅವನು ಬಂದಿರದಿದ್ದರೂ ಬರುವನೆಂಬುದು ಗೊತ್ತಿದ್ದಿತು.

ಅದು ಹೇಗೆ ?

ನಿನ್ನ ಹೆಸರಿಗೆ ಏಲಾದ್ವೀಪದಿಂದ ಒಂದು ಪತ್ರ ಬಂದಿದ್ದಿತು. ಅದನ್ನು ಓದಿದುದರಿಂದ ನನಗೆ ಆ ಸಮಾಚಾರವು ತಿಳಿಯಿತು.

ನನ್ನ ಹೆಸರಿಗೆ ಕಾಗದ ಬಂದಿದ್ದಿತೋ ? ಅಹುದು. ಅದು ದೈವಾಧೀನದಿಂದ

ನನ್ನ ಕೈಗೆ ಸಿಕ್ಕಿತು. ಇನ್ನಾರ ಕೈಗಾದರೂ ಸಿಕ್ಕಿದ್ದರೆ ನಿನ್ನನ್ನು ಗುಂಡಿನ ಬಾಯಿಗೆ ಕಟ್ಟಿಸಿಬಿಡುತ್ತಿದ್ದರು

ಈ ಮಾತನ್ನು ಕೇಳಿ ದೀನನಾಥನು ನಕ್ಕು, ಮಗೂ! ನನ್ನನ್ನು ಗುಂಡಿನಿಂದ ಸುಡಿಸುವುದು ಬಾಯ ಮಾತಾಯಿತೋ? ಆ ಲೇಖನವೆಲ್ಲಿ? ನೀನು ಬುದ್ಧಿಮಂತ. ಅದು ನಿನ್ನ ಕೈ ಬಿಟ್ಟು ಹೊರಗೆ ಎಲ್ಲಿಗೂ ಹೋಗಿರಲಾರದು, ಎಂದನು.

ಅದು ಇತರರ ಕೈಗೆ ಸಿಕ್ಕಿದ್ದರೆ ನಿನ್ನ ಪರಿಣಾಮವು ಏನಾಗುವುದೋ ಎಂದು ದಿಗಿಲುಪಟ್ಟು, ಒಡನೆಯೇ ಅದನ್ನು ಸುಟ್ಟುಬಿಟ್ಟೆನು.

ನನ್ನ ಪರಿಣಾಮವು ಪೂರೈಸುವುದರೊಳಗಾಗಿ ನಿನ್ನ ಪರಿಣಾಮವೂ ಪೂರೈಸುವುದು. ಇದನ್ನು ನಾನು ಹೇಗೆ ಬಲ್ಲೆನೋ ನೀನೂ ಹಾಗೆಯೇ ಬಲ್ಲೆ; ಆದುದರಿಂದಲೇ ನೀನು ಅಷ್ಟು ಜಾಗರೂಕನಾಗಿದ್ದೆ ನೀನು ಹೀಗಿರುವಲ್ಲಿ ನನಗೇನು ಭಯ?

ಅಪ್ಪಾ! ಆ ಸಮಾಜದ ವರ್ತಮಾನವನ್ನು ಕೇಳು.

ಆ ಸಮಾಜವೆಂದರೆ ಪೋಲೀಸಿನವರಿಗೆ ತಲೆನೋವು ಉಂಟಾಗುತ್ತದೆ

ಅದು ನಿಜ ಅವರು ಅದನ್ನು ಇನ್ನೂ ಹುಡುಕುವ ಪ್ರಯತ್ನದಲ್ಲಿದಾರೆಯೇ ವಿನಾ ಪತ್ತೆಮಾಡಲಿಲ್ಲ.

ಸರಿಯಾಗಿ ಹುಡುಕಿದ್ದರೆ ಸಿಕ್ಕುತಲಿದ್ದಿತು. "ಅವರು ಏಕೆ ಸರಿಯಾಗಿ ಹುಡುಕಲಿಲ್ಲ?"

ವೀರಪ್ರಚಂಡನನ್ನು ಕರೆದುಕೊಂಡು ಹೋದ ಮನುಷ್ಯನನ್ನು ಅವರು ಗುರ್ತಿಸಿ ಇದಾರೆ. ಅವನು ಒಂದು ದಿನ ಸಿಕ್ಕಿಬಿದ್ದಿದ್ದು ಹೇಗೋ ಮೆಲ್ಲಗೆ ತಪ್ಪಿಸಿಕೊಂಡು ಹೋದನಂತೆ.

ಪೋಲೀಸಿನವರು ಆವಾಗಲೂ ಹೀಗೆಯೇ ಹೇಳುವರು. ಒಂದು ವೇಳೆ ತಾವು ಹುಡುಕುತ್ತಿರುವ ಮನುಷ್ಯನು ಹಠಾತ್ತಾಗಿ ಸಿಕ್ಕಿದರೆ ನಾವು ಬಲು ಕಷ್ಟಪಟ್ಟೆವೆಂದು ತಮ್ಮ ಸಾಹಸವನ್ನು ಹೊಗಳಿಕೊಳ್ಳುವರು. ಸಿಕ್ಕದಿದ್ದರೆ ಇನ್ನೂ ಪತ್ತೆಮಾಡುವುದರಲ್ಲಿದ್ದೇವೆ ಎಂದು ಹೇಳುವರು.

ಸೇನಾಪತಿಯನ್ನು ಯಾರೋ ಕೊಂದಿದ್ದಾರೆಂದು ಪೋಲೀಸಿನವರು ಹೇಳುತ್ತಾರೆ.

ಪ್ರತಿನಿತ್ಯವೂ ನದಿಯಲ್ಲಿ ಬಿದ್ದು ಎಷ್ಟೋ ಜನಗಳು ಸಾಯುವರು. ಅದರಂತೆ

ವೀರಪ್ರಚಂಡನೂ ಏಕೆ ಬಿದ್ದು ಸತ್ತಿರಬಾರದು? ನೀನು ಹೇಗೆ ಅದನ್ನು ಕೊಲೆಯು ಪಾತಕವೆಂದು ಹೇಳುವೆ ?

ಆ ಸೇನಾನಾಯಕನಿಗೆ ಆವ ವಿಧವಾದ ಚಿಂತೆಯೂ ಇರಲಿಲ್ಲ.

ಅವನು ನದಿಯಲ್ಲಿ ಈಸುವುದಕ್ಕೆ ಹೋಗಿ ಸತ್ತಿರಬಹುದು.

ಈ ಚಳಿಗಾಲದಲ್ಲಿ ನದಿಗೆ ಸ್ನಾನಕ್ಕೆ ಹೋಗುವುದೇ ಕಷ್ಟ ; ಅದರಲ್ಲಿ ಈ ಸಲು ಆರಾದರೂ ಹೋಗುವರೋ? ಆರೋ ಅವನನ್ನು ಕೊಂದಿರಬೇಕು. ಇದಲ್ಲದೆ ನೀರಿನಲ್ಲಿ ಬಿದ್ದು ಸತ್ತವನಿಗೆ ಮೈಯಲ್ಲಿ ಗಾಯವು ಇರುವುದುಂಟೇ?

ಅದು ಕೊಲೆಯೆಂದು ಆರು ನಿರ್ಧರಿಸಿದರು ?

ರಾಜನು. ಮಗೂ ! ನಾನು ಹೇಳುವುದನ್ನು ಸ್ವಲ್ಪ ಕೇಳು. ರಾಜಕಾರ್ಯಗಳಲ್ಲಿ ಕಾರ್ಯವು ಮುಖ್ಯವೇ ಹೊರತು ಜನರು ಮುಖ್ಯವಲ್ಲ, ಆದುದರಿಂದ ಅದರಲ್ಲಿ ಕೊಲೆಯೆಂಬುವುದಿಲ್ಲ ಕಾರ್ಯಕ್ಕೆ ಅಡ್ಡಲಾಗಿ ಬರುವವರನ್ನು ತಳ್ಳದಲ್ಲದೆ ಅದನು ಸಾಧಿಸುವುದಕ್ಕೆ ಆಗುವುದಿಲ್ಲ. ವೀರಪ್ರಚಂಡನು ನಂಬುಗೆಗೆ ಅರ್ಹನೆಂದು ಏಲಾದ್ವೀಪದಿಂದ ಲೇಖನವು ಬಂದಿದ್ದಿತು. ಅದರಂತೆ ನಮ್ಮಲ್ಲಿ ಒಬ್ಬರು ಅವನ ಮನೆಗೆ ಹೋಗಿ ನಮಗೆ ಬಂದಿದ್ದ ಲೇಖನದ ಸಮಾಚಾರವನ್ನು ಹೇಳಲು ಅವನು ಒಪ್ಪಿ ನಮ್ಮ ಸಮಾಜಕ್ಕೆ ಬಂದನು. ಅಲ್ಲಿ ಬಂದು ನಮ್ಮಿಂದ ಎಲ್ಲಾ ಸಮಾಚಾರವನ್ನು ತಿಳಿದುಕೊಂಡು ಕೊನೆಗೆ ನಾನು ಜಯಸಿಂಹರಾಜನ ಕಡೆ ; ನಿಮ್ಮ ಸಮಾಜಕ್ಕೆ ಸೇರುವುದಕ್ಕೆ ಆಗುವುದಿಲ್ಲ ಎಂದು ಹೇಳಿದನು. ಈ ಮಾತನ್ನು ಕೇಳುತಲೇ ಸಾಮಾಜಿಕರೆಲ್ಲರೂ ಭ್ರಾಂತರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದರು ಆಗ ನಾನು ಎದ್ದು ಅಲ್ಲಿ ಆಗ ನಡೆದ ಸಮಾಚಾರಗಳೊಂದನ್ನೂ ಮತ್ತೊಬ್ಬರೊಡನೆ ಉಸಿರುವುದಿಲ್ಲವೆಂದು ಅವನಿಂದ ಪ್ರಮಾಣಮಾಡಿಸಿದೆನು. ಆದರೆ ಆತನು ಆಗ ಮಾಡಿದ ಪ್ರಮಾಣದ ರೀತಿಯನ್ನು ನೋಡಿ ಸಾಮಾಜಿಕರಾರಿಗೂ ಅವನ ಮಾತಿನಲ್ಲಿ ನಂಬುಗೆ ಹುಟ್ಟಲಿಲ್ಲ. ಬಳಿಕ ನಾನು ಪುನಃ ಎದ್ದು ನಿಂತು ಆತನು ನಿರಾತಂಕವಾಗಿ ಹೋಗಲಿ ಎಂದು ಹೇಳಲು, ಎಲ್ಲರೂ ಸುಮ್ಮನಿದ್ದರು. ಅವನು ಅಲ್ಲಿಂದ ಹೊರಟು ಮನೆಗೆ ಹೋಗದೆ ಬೇರೆಕಡೆಗೆ ತಪ್ಪಿಹೋದಂತಿದೆ. ಇದರಲ್ಲಿ ಕೊಲೆಯಾವುದು? ನೀನು ನ್ಯಾಯಾಧಿಪತಿಯಾಗಿ ಪ್ರತಿದಿನವೂ ಎಷ್ಟೋ ಜನಗಳನ್ನು ಗಲ್ಲಿಗೆ ಹಾಕಿಸುತ್ತೀಯೆ. ಅದು ಕೊಲೆಯೋ ? ನಿಮಗೆ

ಅಧಿಕಾರವಿರುವುದರಿಂದ ನೀವು ಮಾಡುವುದೆಲ್ಲವೂ ನ್ಯಾಯ. ನಾಳೆ ನಮಗೆ ಅಧಿಕಾರವು ಬಂದರೆ ನಾವು ಮಾಡುವುದೆಲ್ಲವೂ ಆಗ ನ್ಯಾಯವಾಗುವುದು.

ಅಪ್ಪಾ! ನೀನು ಹೇಳುವುದೇನೋ ಸರಿಯೇ, ಆದರೆ ಈಗಿನ ಅಧಿಕಾರ ನಮ್ಮ ರಾಜನದು. ವೀರಪ್ರಚಂಡನನ್ನು ಕೊಂದ ಮನುಷ್ಯನ ಚಹರೆಪಟ್ಟಿಯು ಪೋಲೀಸಿನವರ ಹತ್ತಿರ ಇದೆ ಹೇಗಾದರೂ ಮಾಡಿ ಆ ಘಾತುಕನನ್ನು ಹಿಡಿದು ಶಿಕ್ಷಿಸಬೇಕೆಂದು ರಾಜನು ಪೋಲೀಸು ಅಧಿಕಾರಿಗೆ ಅಪ್ಪಣೆ ಮಾಡಿರುವನು.

ಚಹರೆಪಟ್ಟಿ ಯಾವುದು?

ಮುಖರಾಗವು ಸ್ವಲ್ಪ ಕೆಂದು ಬಣ್ಣ, ಕಣ್ಣು ಕಪ್ಪು; ಹುಬ್ಬುಗಳ ಕೂದಲು ಕೆದರಿಕೊಂಡಿದೆ, ಗಿರಲು ಮೀಸೆ, ಹಳದಿ ಕಶೆಗಳು ಹಾಕಿಗ ನೀಲಿಯ ಅಂಗಿ, ಸುಮಾರು ಐವತ್ತು ಐವತ್ತೆರಡು ವಯಸ್ಸು, ನಿನ್ನಷ್ಟೇ ಉದ್ದ

ಹಾಗಾದರೆ ಆ ಮನುಷ್ಯನನ್ನು ಅವರು ಏತಕ್ಕೆ ಹಿಡಿಯಲಿಲ್ಲ?

ಅವನು ರಾಜಬೀದಿಯ ಗುಂಪಿನಲ್ಲಿ ತಪ್ಪಿಸಿಕೊಂಡು ಹೋದನಂತೆ

ದೀನನಾಥನು ಸ್ವಲ್ಪ ನಕ್ಕು, ತಟ್ಟನೆ ಎದ್ದು ವಲ್ಲಭದೇವನು ಉಡುಪಿಟ್ಟಿದ್ದ ಪೆಟ್ಟಿಗೆಯ ಬಳಿಗೆ ಹೋಗಿ ತನ್ನ ಬಟ್ಟೆಗಳನ್ನೆಲ್ಲಾ ಕಳೆದು ಆ ಪೆಟ್ಟಿಗೆಯಲ್ಲಿದ್ದ ಉಡುಪುಗಳಲ್ಲಿ ತನಗೆ ಬೇಕಾದುವುಗಳನ್ನು ತೆಗೆದು ತೊಟ್ಟು, ತನ್ನ ಗಿರಲುಮೀಸೆಯನ್ನು ಬೋಳಿಸಿಕೊಂಡು ಕನ್ನಡಿಯನ್ನು ನೋಡಿಕೊಂಡು ತೃಪ್ತನಾಗಿ, ಮಗನನ್ನು ನೋಡಿ ಮಗೂ, ಈಗ ನಿನ್ನ ಪೋಲೀಸಿನವರು ಆ ಮನುಷ್ಯನ ಗುರುತು ಹಿಡಿಯಬಲ್ಲರೋ? ನಾನು ಇಲ್ಲಿ ಬಿಟ್ಟಿರುವ ಬಟ್ಟೆಗಳನ್ನು ಎಲ್ಲಿಗಾದರೂ ಜಾಗ್ರತೆಯಾಗಿ ಸಾಗಿಸು. ನಮ್ಮ ಚಕ್ರವರ್ತಿಯು ಇನ್ನು ಸ್ವಲ್ಪ ದಿವಸಗಳಲ್ಲಿಯೇ ದೊರೆತನಕ್ಕೆ ಬರುವನು. ಆಗ ನಾನು ನಿನಗೆ ಪ್ರತ್ಯುಪಕಾರವನ್ನು ಮಾಡುವೆನು ನಾನು ಹೋಗಿ ಬರುವೆನು ಎಂದು ಹೇಳಿ ಹೊರಟು ಹೋದನು.

ದೀನನಾಥನು ಬೀದಿಯಲ್ಲಿ ಹೋಗುತ್ತಲಿರುವುದನ್ನು ಕಿಟಕಿಯಿಂದ ನೋಡುತ್ತಲಿದ್ದ ವಲ್ಲಭದೇವನ ಮನಸ್ಸು ಕಳವಳಗೊಂಡು, ಎದೆಯು ಡಬಡಬನೆ ಹಾರಲಾರಂಭಿಸಿತು. ವೃದ್ಧನು ಆವ ತೊಂದರೆಯೂ ಇಲ್ಲದೆ ಬೇರೆ ಬೀದಿಗೆ ತಿರುಗಿದ ಕೂಡಲೆ ಮಗನ ಮನಸ್ಸು ಸಮಾಧಾನ ಸ್ಥಿತಿಗೆ ಬಂದು ಅವನು ನಿಟ್ಟುಸಿರನ್ನು ಬಿಟ್ಟು, ಒಡನೆ

ತಂದೆಯು ಉಟ್ಟು ಕಳೆದಿದ್ದ ಉಡುಪುಗಳನ್ನೆಲ್ಲಾ ತನ್ನ ಪೆಟ್ಟಿಗೆಯಲ್ಲಿಟ್ಟು ಬೀಗವನ್ನು ಹಾಕಿ ಮಲಯಪಟ್ಟಣಕ್ಕೆ ಪ್ರಯಾಣವನ್ನು ಮಾಡಿದನು.

ದೀನನಾಥನು ದೀರ್ಘದರ್ಶಿ ಎಂದು ಹೇಳಲು ಆವ ಸಂದೇಹವೂ ಇಲ್ಲ. ಅವನು ಹೇಳಿದಂತೆಯೇ ಚಕ್ರವರ್ತಿಯು ನಿಮಿಷಮಾತ್ರದಲ್ಲಿ ರಾಜ್ಯವನ್ನು ಸ್ವಾಧೀನ ಮಾಡಿಕೊಂಡನು ಅವನು ಸೈನ್ಯಸಮೇತನಾಗಿ ಅಮರಪುರವನ್ನು ಸೇರುವುದರೊಳಗಾಗಿಯೇ ಜಯಸಿಂಹನು ರಾಜ್ಯವನ್ನು ಬಿಟ್ಟು ಓಡಿಹೋದನು. ಪ್ರಜೆಗಳಲ್ಲಿ ಅನೇಕರು ಚಕ್ರವರ್ತಿಯ ಆಗಮನವನ್ನೇ ನಿರೀಕ್ಷಿಸುತಲಿದ್ದರಾದಕಾರಣ ರಾಜ್ಯವು ಬಹು ಸುಲಭವಾಗಿ ಅವನ ವಶವಾಯಿತು ಇಷ್ಟು ಸುಲಭವಾಗಿ ರಾಜ್ಯವು ಕೈಸೇರಿದುದನ್ನು ನಾವು ಹಿಂದೆ ಯಾವಾಗಲೂ ನೋಡಿರಲಿಲ್ಲ, ಮುಂದೆ ಯಾವಾಗಲೂ ಪ್ರಾಯಶಃ ನೋಡಲಾರೆವು.

ವಲ್ಲಭದೇವನಿಗೆ ಅಮರಪುರದ ಪ್ರಯಾಣದಿಂದ ರಾಜನು ಕೊಟ್ಟ ಹಾರವೊಂದೇ ಲಾಭ, ಆದರೆ ಅವನಿಗೆ ಅದನ್ನು ಅನುಭವಿಸುವ ಪ್ರಾಪ್ತಿಯಿರಲಿಲ್ಲ. ಅವನು ಕಾಲವನ್ನು ಬಲ್ಲವನಾದುದರಿಂದ ಅದನ್ನು ಒಳಗೆ ಮುಚ್ಚಿಟ್ಟಿದ್ದನು

ಚಕ್ರವರ್ತಿಯು ವಲ್ಲಭದೇವನನ್ನು ತೆಗೆದು ಬಿಡಲು ಉದ್ಯುಕ್ತನಾಗಿದ್ದರೂ ದೀನನಾಥನ ದಾಕ್ಷಿಣ್ಯಕ್ಕಾಗಿ ಹಾಗೆ ಮಾಡದೆ ಅವನನ್ನು ಮುಖ್ಯನ್ಯಾಯಾಧಿಪತಿಯನ್ನಾಗಿ ಮಾಡಿ ಮಲಯಪಟ್ಟಣದಲ್ಲೇ ಇಟ್ಟಿದ್ದನು.

ಈ ಸಂದರ್ಭದಲ್ಲಿ ತಾನು ರೇಣುಕೆಯನ್ನು ಮದುವೆ ಮಾಡಿಕೊಂಡರೆ ಚಕ್ರವರ್ತಿಗೆ ಅಸಮಾಧಾನವುಂಟಾಗಿ ಅದರಿಂದ ತನ್ನ ಅಭಿವೃದ್ಧಿಗೆ ಕುಂದಕವಾಗುವುದು, ಜಯಸಿಂಹನು ಪುನಃ ರಾಜ್ಯಕ್ಕೆ ಬರಬಹುದು, ಆಗ ಈ ಮದುವೆಯು ಸಮ, ಇಲ್ಲವಾದರೆ ಚಕ್ರವರ್ತಿಗೆ ಹಿತವಾದವರ ಸಂಬಂಧವನ್ನು ಮಾಡಿಕೊಳ್ಳುವುದು ಉಚಿತವೆಂದು ಯೋಚಿಸಿ, ವಲ್ಲಭದೇವನು ಗೊತ್ತಾಗಿದ್ದ ತನ್ನ ಮದುವೆಯನ್ನು ಆಗ ನಿಲ್ಲಿಸಿಬಿಟ್ಟನ.

---

# ಹನ್ನೆರಡನೆಯ ಅಧ್ಯಾಯ.

## ನೂರುದಿನದ ಬಾಳು.

ಧನಕೋಟಿಯು ವಿವೇಕಶಾಲಿಯಾಗಿದ್ದರೂ ಸ್ವಲ್ಪ ಪುಕ್ಕಲನು ಚಕ್ರವರ್ತಿಯು ರಾಜ್ಯಕ್ಕೆ ಒಂದಬಳಿಕ ಧೈರ್ಯವು ಹುಟ್ಟಿ ಧರ್ಮದೇವನನ್ನು ಬಿಡಿಸುವ ಪ್ರಯತ್ನಮಾಡಿ, ಒಂದು ದಿನ ವಲ್ಲಭದೇವನ ಮನೆಗೆ ಹೋದನು ಮತ್ತಾರಾದರೂ ಆಗಿದ್ದರೆ ಧನ ಕೋಟಿಯನ್ನು ಕಾಯಿಸದೆ ನೋಡಿ ಮಾತನಾಡುತಲಿದ್ದರು. ವಲ್ಲಭದೇವನು ಶಕ್ತನೂ ಉಪಾಯಗಾರನೂ ಆಗಿದ್ದುದರಿಂದ ಜನರು ತನ್ನೆಡೆಗೆ ಬಂದ ಒಡನೆ ಮಾತನಾಡಿಸು ವುದು ತರವಲ್ಲವೆಂದು ಅಭಿಪ್ರಾಯಪಟ್ಟು, ಅವುದೋ ಒಂದು ವೃತ್ತಾಂತಪತ್ರಿಕೆಯನ್ನು ಓದುತ್ತ ಧನಕೋಟಿಯನ್ನು ಅರ್ಧಘಂಟೆಯ ವರೆಗೂ ನಿಲ್ಲಿಸಿದ್ದು, ಅನಂತರ ಹೊರಗೆ ಬಂದು ಅವನಿಗೆ ದರ್ಶನಲಾಭವನ್ನು ಕೊಟ್ಟನು

ಜಯಸಿಂಹರಾಜನು ರಾಜ್ಯವನ್ನು ಬಿಟ್ಟುಹೋಗಿ ಚಕ್ರವರ್ತಿಯು ಬಂದಿದ್ದುದ ರಿಂದ ವಲ್ಲಭದೇವನು ಖಿನ್ನನಾಗಿರಬಹುದೆಂದು ಧನಕೋಟಿಯು ಯೋಚಿಸಿದ್ದನು. ವಲ್ಲಭದೇವನಿಗೆ ಮನಸ್ಸಿನಲ್ಲಿ ಖಿನ್ನತೆಯಿದ್ದರೂ ಹೊರಪಡಿಸದೆ ಎಂದಿನಂತೆಯೇ ಶಾಂತ ನಾಗಿಯೂ, ಸ್ಥಿರನಾಗಿಯೂ, ಕಪಟಮರ್ಯಾದೆಯನ್ನು ತೋರಿಸುವನಾಗಿಯೂ ಇದ್ದನು. "ನಾನು ಈಗ ವಲ್ಲಭದೇವನನ್ನು ನೋಡಿ ನಿನ್ನಿಂದ ಈ ಕೆಲಸವು ಆಗಬೇಕು" ಎಂದು ತಿಳಿಸಿದ ಕೂಡಲೆ, ಅವನು ಅದನ್ನು ಮಾಡಿಕೊಡದೆ ಇರಲಾರನೆಂದು ಧನಕೋಟಿಯು ನಂಬಿದ್ದನು. ಅಯ್ಯೋ ಪಾಪ! ವಲ್ಲಭದೇವನ ಗುಣವನ್ನು ಅವನೇನು ಬಲ್ಲನು?

ವಲ್ಲಭದೇವನು ಧನಕೋಟಿಯನ್ನು ನೋಡಿ, ಓಹೋ! ತಾವು ಧನಕೋಟಿ ಎಂಬುವರಲ್ಲವೇ ಎಂದನು. ಅಹುದು ಸ್ವಾಮೀ!

ಏನುಕಾರಣ ಇಷ್ಟುದೂರ ಬಿಜಯಮಾಡಿಸೋಣವಾಯಿತು?

ಸರ್ವಜ್ಞರಾದ ತಮಗೆ ಆ ಕಾರಣವು ತಿಳಿದೇ ಇದೆ.

ನಾನು ಅದನ್ನು ಅರಿಯೆನು ನನ್ನಿಂದ ಅವುದಾದರೂ ಕೆಲಸವಾಗಬೇಕಾಗಿದ್ದರೆ ಅದನ್ನು ಅಗತ್ಯವಾಗಿ ಸಂತೋಷದಿಂದ ಮಾಡಿಕೊಡುವೆನು.

ಅದಕ್ಕಾಗಿಯೇ ಈಗ ನಾನು ತಮ್ಮ ಬಳಿಗೆ ಬಂದಿರುವನು

ಅದು ಏನು ಕೆಲಸ?

ಚಕ್ರವರ್ತಿಯು ನಮ್ಮ ರಾಜ್ಯಕ್ಕೆ ಬರುವುದಕ್ಕೆ ಸ್ವಲ್ಪ ದಿವಸಗಳ ಹಿಂದೆ, ನಮ್ಮ ನೌಕಾಧಿಪನ ಸಹಾಯಕನಾಗಿದ್ದ ಒಬ್ಬ ಯುವಕನ ಸಲುವಾಗಿ, ನಾನು ತಮ್ಮಲ್ಲಿ ಬಂದು ಮಾತನಾಡಿದುದು ತಮಗೆ ಜ್ಞಾಪಕವಿರಬಹುದು ಅವನು ಮಾಡಿದ ಕಾರ್ಯವು ಆಗ ರಾಜದ್ರೋಹವೆನಿಸಿಕೊಂಡಿದ್ದಿತು ; ಈಗ ಅದೇ ರಾಜಭಕ್ತಿಯೆನಿಸಿಕೊಳ್ಳುವುದು ಆಗ ಜಯಸಿಂಹನು ದೊರೆಯಾಗಿದ್ದುದರಿಂದ ತಾವು ಆ ಯುವಕನಿಗೆ ಅವ ವಿಧವಾದ ಸಾಹಾಯ್ಯವನ್ನೂ ಮಾಡಲು ಸಾಧ್ಯವಾಗಲಿಲ್ಲ ಈಗ ಚಕ್ರವರ್ತಿಯ ರಾಜ್ಯವಾಗಿರುವುದರಿಂದ ಅವನನ್ನು ಸೆರೆಯಿಂದ ಬಿಡಿಸಿ ಕಾಪಿಡಬೇಕು. ಈ ಸಂಗತಿಯನ್ನು ತಮಗೆ ಜ್ಞಾಪಿಸಬೇಕೆಂದು ಬಂದೆನು.

ಧನಕೋಟಿಯು ಮಾತುಗಳನ್ನು ಕೇಳಿ ವಲ್ಲಭದೇವನು ಕಳೆಗುಂದಿ ಕಳವಳಗೊಂಡು, ಮೆಲ್ಲಗೆ ಆ ಯುವಕನ ಹೆಸರೇನು ಎಂದನು ಅವನ ಹೆಸರು ಧರ್ಮದೇವನೆಂದು ಧನಕೋಟಿಯು ಹೇಳಿದ ಕೂಡಲೆ, ವಲ್ಲಭದೇವನಿಗೆ ಗುಂಡಿನಬಾಯಿಗೆ ಕಟ್ಟಿದಂತಾಯಿತು ಆದರೂ, ಸಮಾಧಾನವನ್ನು ತಾಳಿ ಧರ್ಮದೇವ, ಧರ್ಮದೇವ, ಎಂದು ಎರಡುಸಾರಿ ಹೇಳಿ ಮೇಜಿನ ಮೇಲೆ ತನ್ನ ಇದಿರಿಗೆ ಇದ್ದ ಒಂದು ದೊಡ್ಡ ಸಂಪುಟವನ್ನು ಬಿಚ್ಚಿ, ಇದರಲ್ಲಿ ಅವನ ಹೆಸರು ಇದೆಯೋ ಎಂದನು

ಇರಬೇಕು ಹೋ! ತಾಳು ಸಿಕ್ಕಿತು ನಾವಿಕಯುವಕನು—ಮದುವೆಯೂಟದಲ್ಲಿದ್ದನು ಅವನೇ ಅಲ್ಲವೇ?

ಅವನೇ ಮಹಾಸ್ವಾಮೀ!

ಅವನು ಪ್ರಬಲವಾದ ರಾಜದ್ರೋಹಮಾಡಿದ್ದುದರಿಂದ ನಾನು ಮಾಡಬೇಕಾದ ವಿಚಾರಣೆಯನ್ನು ಮಾಡಿ ಮೇಲಕ್ಕೆ ಬರೆದೆನು ತರುವಾಯ ಅವನ ಗತಿಯೇನಾಯಿತೋ ನನಗೆ ತಿಳಿಯದು.

ತಮಗೆ ತಿಳಿಯದೇ ಇದೆಯೆಂಬುದು ಆಶ್ಚರ್ಯವೇ ಸರಿ. ಈಗ ಅವನೆಲ್ಲಿರುವನು?

ನಾನೇನ ಬಲ್ಲೆ, ಈ ರಾಜ್ಯದಲ್ಲಿರುವ ಅನೇಕ ಕಾರಾಗೃಹಗಳೊಂದರಲ್ಲಿ ಇದ್ದರೂ ಇರಬಹುದು ಅವ್ರುದಾದರೂ ಒಂದು ದಿನ ಅವನು ಬಿಡುಗಡೆಯಾಗಿ ನಿಮ್ಮ ಹಡಗಿನ ಆಧಿಪತ್ಯವನ್ನು ವಹಿಸಲು ಬರುವನು, ಭಯಪಡಲೇಕೆ?

ಅವನು ಆವಾಗ ಬಂದರೂ ನೌಕಾಧಿಪತ್ಯವು ಸಿದ್ಧವಾಗಿರುವುದು. ಚಕ್ರ

ವರ್ತಿಯ ಕಾರ್ಯಕ್ಕಾಗಿ ಕಾರಾಗೃಹವನ್ನು ಸೇರಿದವರನ್ನು ಬಿಡಿಸುವುದು ಅವನ ಅಧಿಕಾರವಲ್ಲವೇ?

ಅಹುದು; ಆದರೆ ಆವ ಅಧಿಕಾರಿಯು ಅವನನ್ನು ಕಾರಾಗೃಹಕ್ಕೆ ಕಳುಹಿಸಿದನೋ ಆ ಅಧಿಕಾರಿಯೇ ಅವನನ್ನು ಬಿಡುಗಡೆ ಮಾಡಬೇಕು. ಚಕ್ರವರ್ತಿಯು ಈಗತಾನೆ ಬಂದಿರುವನಾದಕಾರಣ ತನಗಾಗಿ ಸೆರೆಮನೆಯನ್ನು ಸೇರಿರುವವರನ್ನೆಲ್ಲಾ ಬಿಡುಗಡೆ ಮಾಡಿಸುವುದಕ್ಕೆ ಸ್ವಲ್ಪ ಸಾವಕಾಶವಾಗಬಹುದು. ಧರ್ಮದೇವನನ್ನು ಜಾಗ್ರತೆಯಾಗಿ ಬಿಡಿಸಲು ಉಪಾಯವಿಲ್ಲವೋ?

ಉಂಟು; ನಾನು ಹೇಳುವಂತೆ ಮಾಡಿದರೆ ಆಗುವುದು.

ಅಪ್ಪಣೆಯಾಗಲಿ.

ಪ್ರಧಾನನಿಗೆ ಒಂದು ಬಿನ್ನಹವನ್ನು ಬರೆಯಿರಿ.

ಪ್ರಧಾನನಿಗೆ ಪ್ರತಿದಿನವೂ ನೂರಾರು ಮನವಿಗಳು ಬರುವುವು. ಅವುಗಳಲ್ಲಿ ಒಂದನ್ನಾದರೂ ಕೂಡ ಅವನು ಓದುವನೋ ಇಲ್ಲವೋ?

ಸಾಧಾರಣವಾದ ಬಿನ್ನಹಗಳನ್ನು ಅವನು ಓದದೆ ಬಿಸುಡಬಹುದು. ನನ್ನ ಮೂಲಕ ಮನವಿಯನ್ನು ಕಳುಹಿಸಿದರೆ ಅದನ್ನು ಅವನು ಅಗತ್ಯನೋಡುವನು.

ತಾವು ನನಗೋಸ್ಕರ ಅಷ್ಟುಮಟ್ಟಿಗೆ ಶ್ರಮೆ ತೆಗೆದುಕೊಳ್ಳುವಿರೋ?

ಅಗತ್ಯವಾಗಿ ನಿಮ್ಮ ಮನವಿಯನ್ನು ಪ್ರಧಾನನಿಗೆ ಕಳುಹಿಸುವೆನು. ಧರ್ಮದೇವನು ಆಗ ತಪ್ಪಿತಸ್ಥನಾಗಿದ್ದನು, ಈಗ ಅವನು ನಿರಪರಾಧಿ; ಆಗ ಅವನನ್ನು ಶಿಕ್ಷಿಸುವುದು ಹೇಗೆ ನನ್ನ ಕರ್ತವ್ಯವಾಗಿದ್ದಿತೋ ಈಗ ಅವನನ್ನು ಬಿಡಿಸುವುದೂ ನನ್ನ ಕರ್ತವ್ಯವಾಗಿದೆ.

ಧನಕೋಟಿಯು ಗುಣವಂತನಾಗಿದ್ದರೂ ಅಷ್ಟು ಚುರುಕುಬುದ್ಧಿಯಿಲ್ಲದವನಾಗಿದ್ದುದರಿಂದ, ವಲ್ಲಭದೇವನು ನಯವಾದ ಮಾತುಗಳಿಂದ ತನ್ನನ್ನು ಮೋಸಗೊಳಿಸುವನೆಂದು ತಿಳಿಯಲಾರದೆ ಹೋದನು ತಾನು ಹೀಗೆ ಧನಕೋಟಿಯೊಡನೆ ಹೇಳದಿದ್ದಲ್ಲಿ ಅವನೆಲ್ಲಿ ಮೇಲಿನ ಅಧಿಕಾರಿಗಳಿಗೆ ಬರೆದು ತಾನು ಧರ್ಮದೇವನ ವಿಷಯದಲ್ಲಿ ಮಾಡಿದ ಅನ್ಯಾಯವು ತಿಳಿದು ರಚ್ಚೆಯಾಗುವುದೋ ಎಂಬ ಭಯದಿಂದ, ವಲ್ಲಭದೇವನು ಲೋಕಾಭಿರಾಮವಾದ ಮಾತುಗಳನ್ನು ಆಡಿದನು ಈ ಕೃತ್ರಿಮವೊಂದನ್ನೂ ಕಾಣದ

ಧನಕೋಟಿಯು ವಲ್ಲಭದೇವನ ಹೇಳಿಕೆಯಂತೆ ಧರ್ಮದೇವನು ಚಕ್ರವರ್ತಿಯ ಆಗ ಮನಕ್ಕೆ ಮಾಡಿದ ಸಾಹಾಯ್ಯಗಳನ್ನೆಲ್ಲಾ ವಿಸ್ತರಿಸಿ ಅವುಗಳನ್ನು ಹೆಚ್ಚಾಗಿ ಶ್ಲಾಘಿಸಿ, ಒಂದು ವಿಜ್ಞಾಪನಾಪತ್ರವೊಂದನ್ನು ಬರೆದನು. ಅದನ್ನು ವಲ್ಲಭದೇವನು ಓದಿನೋಡಿ ಇದು ಸಾಕು, ಎಂದನು.

ಇದನ್ನು ಈ ದಿವಸವೇ ಪ್ರಧಾನನಿಗೆ ಕಳುಹಿಸುವಿರೋ ?

ಅಡ್ಡಿಯಿಲ್ಲದೆ ಕಳುಹಿಸುವೆನು. ಇಗೋ ನೀವು ಬರೆದಿರುವುದನ್ನು ನಾನೂ ದೃಢೀಕರಿಸಿ ಬರೆಯುವೆನೆಂದು, ಮೇಲೆ ಹೇಳಿರುವುವೆಲ್ಲವೂ ಬಹಳ ಸರಿಯಾಗಿವೆ ಎಂದು ಆ ಬಿನ್ನಹದ ಕೆಳಗೆ ಬರೆದನು

ನಾನು ಇದಕ್ಕೆ ಇನ್ನೇನಾದರೂ ಮಾಡಬೇಕೋ ?

ನೀವು ಮಾಡಬೇಕಾದುದು ಆವುದೂ ಇಲ್ಲ. ತಾವು ಹೋಗಿಬರಬಹುದು. ಮುಂದಿನ ಕೆಲಸವನ್ನು ನಾನು ನೋಡಿಕೊಳ್ಳುವೆನು.

ವಲ್ಲಭದೇವನು ತನ್ನಿಂದಾಗುವ ಸಾಹಾಯ್ಯವನ್ನೆಲ್ಲಾ ಮಾಡಿಕೊಟ್ಟನೆಂದೂ, ಇನ್ನು ಧರ್ಮದೇವನಿಗೆ ಜಾಗ್ರತೆಯಾಗಿ ಬಿಡುಗಡೆಯಾಗುವುದೆಂದೂ ನಂಬಿ, ಧನಕೋಟಿಯು ಸಂತೋಷದಿಂದ ಭುಜಂಗಭೂಷಣನ ಮನೆಗೆ ಹೋಗಿ ಅವನಿಗೆ ಈ ಸಮಾಚಾರವನ್ನು ತಿಳಿಸಿದನು.

ಚಕ್ರವರ್ತಿಯು ರಾಜ್ಯದಲ್ಲಿ ಬಹಳ ದಿವಸಗಳು ಇರಲಾರನು, ಪುನಃ ಜಯಸಿಂಹನೇ ಬರಬಹುದು, ಎಂದು ಯೋಚಿಸಿ ವಲ್ಲಭದೇವನು ಧನಕೋಟಿಯು ಬಿನ್ನಹವನ್ನು ಮೇಲಕ್ಕೆ ಕಳುಹಿಸದೆ ಸುಮ್ಮನಿದ್ದು ಬಿಟ್ಟನು ಇತ್ತ ಧರ್ಮದೇವನು ಯಥಾಪ್ರಕಾರ ಬಂದಿಶಾಲೆಯಲ್ಲಿಯೇ ಇರುತ್ತಿದ್ದನು ಅವನಿಗೆ ಈ ರಾಜ್ಯದಲ್ಲಿ ನಡೆದ ವ್ಯತ್ಯಾಸಗಳಾವುವೂ ತಿಳಿಯಲೇ ಇಲ್ಲ.

ಚಕ್ರವರ್ತಿಯ ನೂರು ದಿವಸದ ಆರಸುತನದಲ್ಲಿ ಧನಕೋಟಿಯು ವಲ್ಲಭದೇವನ ಬಳಿಗೆ ಎರಡಾವೃತ್ತಿ ಹೋಗಿದ್ದನು. ಎರಡಾವೃತ್ತಿಯೂ ವಲ್ಲಭದೇವನು ನಯವಾಗಿ ಮಾತನಾಡಿ ಧರ್ಮದೇವನನ್ನು ಜಾಗ್ರತೆಯಾಗಿ ಬಿಡಿಸುವುದಾಗಿ ಹೇಳಿ ಕಳುಹಿಸಿದನು

ಹೀಗಿರುವಲ್ಲಿ ಹಿಂದೆ ಚಕ್ರವರ್ತಿಯಿಂದ ಬಾಧೆಪಟ್ಟಿದ್ದ ರಾಜರುಗಳೆಲ್ಲರೂ ಸೇರಿ ಚಕ್ರವರ್ತಿಯು ಪುನಃ ಅಮರರಾಜ್ಯಕ್ಕೆ ಬಂದನು , ನಾವೆಲ್ಲರೂ ಸುಮ್ಮನಿದ್ದರೆ ಅವನು

ನಮ್ಮನ್ನು ಪೂರ್ವದಂತೆಯೇ ಪೀಡಿಸಿ ನಮ್ಮ ರಾಜ್ಯಗಳನ್ನೆಲ್ಲಾ ಕಸುಕೊಳ್ಳುವನು ಎಂದು ಯೋಚಿಸಿ ಚಕ್ರವರ್ತಿಯ ಮೇಲೆ ದಂಡೆತ್ತಿ ಬಂದು ಅವನನ್ನು ಯುದ್ಧದಲ್ಲಿ ಸೋಲಿಸಿ ಏಲಾದ್ವೀಪದಲ್ಲಿಡದೆ ಬಹು ದೂರದಲ್ಲಿದ್ದ ಒಂದು ದ್ವೀಪದಲ್ಲಿ ಸೆರೆಯಿಟು ಜಯಸಿಂಹನಿಗೆ ಪುನಃ ಅಮರರಾಜ್ಯವನ್ನು ಕೊಟ್ಟರು ಇನ್ನು ವಲ್ಲಭದೇವನನ್ನು ನೋಡುವುದು ಸರಿಯಲ್ಲವೆಂದು ಧನಕೋಟಿಯು ಸುಮ್ಮನಾದನು. ಧರ್ಮದೇವನು ಸೆರೆಯಿಂದ ಬಂದು ತನ್ನನ್ನೇನು ಮಾಡುವನೋ ಎಂಬ ಭಯವು ವಲ್ಲಭದೇವನಿಗೆ ತಪ್ಪಿತು

ವಲ್ಲಭದೇವನು ಮಲಯಪಟ್ಟಣದಲ್ಲಿ ಬಹು ದಿವಸಗಳು ಇದ್ದು ಅನೇಕರಿಗೆ ಅನ್ಯಾಯವನ್ನು ಮಾಡಿ ಅದರಿಂದ ಉಂಟಾದ ಅನುತಾಪವನ್ನು ಸಹಸಲಾರದೆ, ಅನೇಕ ಶತ್ರುಗಳು ಇರುವ ಕಡೆ ತಾನಿದ್ದರೆ ಆರೇನಮಾಡಿಬಿಡುವರೋ ಎಂದು ಭಯಪಟ್ಟು, ಆ ಊರನ್ನು ಬಿಟ್ಟು ಬೇರೆ ಕಡೆಗೆ ಹೋದರೆ ತನ್ನ ಮನಸ್ಸು ನೆಮ್ಮದಿಯಾಗಿ ಇರುವು ದೆಂದು ಯೋಚಿಸಿ, ಜಯಸಿಂಹರಾಜನು ರಾಜ್ಯಕ್ಕೆ ಬಂದ ಸ್ವಲ್ಪದಿವಸಗಳಲ್ಲಿಯೇ ದೂರ ದಲ್ಲಿದ್ದ ತುಲಸೀಪಟ್ಟಣಕ್ಕೆ ಬದಲಾಯಿಸಿಕೊಂಡು ಹೋಗಿ, ಕಾಂತವೀರನು ಜಯ ಸಿಂಹನಲ್ಲಿ ಪ್ರಬಲನಾಗಿದ್ದುದರಿಂದ ಅವನ ಮಗಳನ್ನು ಮದುವೆಯಾಗುವುದು ಲೇಸೆಂದು ತಿಳಿದು ಅವಳನ್ನು ಮದುವೆಯಾದನು.

ಚಕ್ರವರ್ತಿಯು ರಾಜ್ಯಕ್ಕೆ ಬರುತಲೆ ದುರ್ಮತಿಗೆ ಧರ್ಮದೇವನ ಭಯವು ಹೆಚ್ಚಾಗಿ, ಅವನಿಗೆ ಬಿಡುಗಡೆಯಾಗಿ ಬಂದರೆ ತನ್ನನ್ನು ಏನ ಮಾಡಿಬಿಡುವನೋ ಎಂದು ಹೆದರಿ, ಧನಕೋಟಿಯನ್ನು ಆಶ್ರಯಿಸಿ ಸಮುದ್ರಪ್ರಯಾಣ ಮಾಡುವುದು ತನ್ನಿಂದ ಆಗುವುದಿಲ್ಲವೆಂದು ಹೇಳಿ, ಅವನಿಗೆ ವಿಶೇಷಪರಿಚಯವಿದ್ದ ಅನ್ಯದೇಶದ ವರ್ತಕನೊಬ್ಬನಿಗೆ ಸಿಫಾರಸ್ಸು ಕಾಗದವನ್ನು ತೆಗೆದುಕೊಂಡು ಹೋಗಿ ಅವನಲ್ಲಿ ಕೆಲ ಸಕ್ಕೆ ಸೇರಿ ಅಮರದೇಶವನ್ನು ಬಿಟ್ಟು ಹೊರಟುಹೋದನು.

ವಿಷಯಲಂಪಟನಿಗೆ ಧರ್ಮದೇವನೇನಾದನೋ ಎಂಬ ಯೋಚನೆಯೇ ಹುಟ್ಟ ಲಿಲ್ಲ ; ಅವನು ಊರಲ್ಲಿಲ್ಲವೆಂಬುದು ವಿನಾ ಮತ್ತಾವುದೂ ತಿಳಿಯದು. ತಾನು ಲಲಿ ತಾಂಗಿಯನ್ನು ಮದುವೆಮಾಡಿಕೊಂಡು ಆವ ದೇಶಕ್ಕಾದರೂ ಹೊರಡಬೇಕೆಂದೂ ಈ ಮಧ್ಯೆ ಧರ್ಮದೇವನು ಒಂದು ವೇಳೆ ತಿರುಗಿ ಬಂದರೆ ಆವನನ್ನು ಕೊಂದು ತಾನೂ

ಪ್ರಾಣ ಬಿಡಬೇಕೆಂದೂ ನಿಶ್ಚಯಿಸಿದ್ದನು. ವಿಷಯಾಸಕ್ತರು ನಿಜವಾಗಿಯೂ ಪ್ರಾಣ ತ್ಯಾಗ ಮಾಡುವರೇ? ತಮ್ಮ ದುರಾಶೆಗಳನ್ನು ಪೂರ್ತಿಮಾಡಿಕೊಳ್ಳುವರೇ ಹೊರತು ಪ್ರಾಣತ್ಯಾಗವನ್ನು ಅವರು ಎಂದಿಗೂ ಮಾಡರು.

ವಿಷಯಲಂಪಟನ ಯೋಚನೆಯು ಹೀಗಿರುವಲ್ಲಿ, ಚಕ್ರವರ್ತಿಯು ತನ್ನ ನೂರು ದಿನಗಳ ಬಾಳಿನಲ್ಲಿ ದಂಡನ್ನು ಹೆಚ್ಚಿಸಬೇಕೆಂದು ಯೋಚಿಸಿ ರಾಜ್ಯದಲ್ಲಿರತಕ್ಕ ಯುವಕರನ್ನೆಲ್ಲಾ ಸೈನ್ಯಕ್ಕೆ ಸೇರಿಸುವಂತೆ ಅಪ್ಪಣೆಯನ್ನು ಮಾಡಿದನು. ಆದರಿಂದ ವಿಷಯಲಂಪಟನು ಲಲಿತಾಂಗಿಯನ್ನು ಬಿಟ್ಟು ಹೊರಡಬೇಕಾಯಿತು. ತಾನು ಊರಲ್ಲಿಲ್ಲದ ಕಾಲದಲ್ಲಿ ಎಲ್ಲಿ ಧರ್ಮದೇವನು ಬಂದು ಅವಳನ್ನು ಮದುವೆಯಾಗುವನೋ ಎಂಬ ಭಯವೊಂದು ವಿಷಯಲಂಪಟನಿಗೆ ಹೆಚ್ಚಾಗಿದ್ದಿತು ಅವನು ಪ್ರಾಣತ್ಯಾಗವನ್ನು ಮಾಡಬೇಕಾಗಿದ್ದರೆ ಇದು ಸಕಾಲವಾಗಿದ್ದಿತು. ಆದರೆ ದುರಾತ್ಮರು ದುರಾಶಾಪೂರ್ತಿಯಲ್ಲಿಯೇ ಆಸಕ್ತರಾಗಿರುವವರಾದಕಾರಣ ಅವರು ಎಂದಿಗೂ ಆತ್ಮಹತ್ಯವನ್ನು ಮಾಡಿಕೊಳ್ಳರು.

ಲಲಿತಾಂಗಿಯು ಗುಣಗ್ರಾಹಿಯಾದುದರಿಂದ ತನ್ನ ಕಷ್ಟಕಾಲದಲ್ಲಿ ವಿಷಯಲಂಪಟನು ಮಾಡಿದ ಸಾಹಾಯ್ಯಕ್ಕಾಗಿ ಕೃತಜ್ಞಳಾಗಿದ್ದಳು. ಅವನ ಕೃತ್ರಿಮದ ಕಾರ್ಯವು ಇವಳಿಗೆ ತಿಳಿಯದಾದುದರಿಂದ ಲಲಿತಾಂಗಿಗೆ ಅವನಲ್ಲಿ ಎಂದಿನಂತೆ ಭ್ರಾತೃವಾತ್ಸಲ್ಯವಿದ್ದಿತು. ಆದುದರಿಂದಲೇ ಅವನು ಸೈನ್ಯವನ್ನು ಸೇರಲು ಹೊರಟಾಗ ಅವಳು ಅಣ್ಣಾ, ನಿನ್ನ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೋ ನಿನಗೇನಾದರೂ ಆಪತ್ತು ಸಂಭವಿಸಿದರೆ ಈ ಲೋಕದಲ್ಲಿ ನನಗಿನ್ನಾರು ದಿಕ್ಕು? ಎಂದು ಮೃದುವಾದ ಮಾತುಗಳಿಂದ ಅವನನ್ನು ಸಂತೈಸಿ ಕಳುಹಿದಳು. ಆದರಿಂದ ವಿಷಯಲಂಪಟನ ಮನಸ್ಸಿನಲ್ಲಿ ಧರ್ಮದೇವನು ಪುನಃ ಬಾರದೆ ಇದ್ದರೆ ಇವಳು ತನ್ನನ್ನೇ ಮದುವೆಯಾಗುವಳೆಂಬ ನಂಬುಗೆಯು ಉಂಟಾಗಿ, ಅವನು ನಿಶ್ಚಿಂತನಾಗಿ ಪ್ರಯಾಣಮಾಡಿದನು

ಈಗ ಲಲಿತಾಂಗಿಗೆ ಜತೆಯಿಲ್ಲದೆ ಆವಾಗಲೂ ಕಣ್ಣೀರನ್ನು ಸುರಿಸುತ್ತ ಹುಚ್ಚಿಯಂತೆ ಪಾಳೆಯವನ್ನು ಸುತ್ತುತ್ತಲೂ, ಕೆಲವು ವೇಳೆ ಸ್ತಂಭೀಭೂತಳಾಗಿ ಧರ್ಮದೇವನು ಬರುವನೋ ಎಂಬ ಆಸೆಯಿಂದ ಮಲಯಪಟ್ಟಣದ ಮಾರ್ಗವನ್ನೇ ನೋಡುತ್ತಲೂ ಇರುತಿದ್ದಳು. ಕೆಲವು ವೇಳೆ ಸಮುದ್ರವನ್ನು ನೋಡಿ ಇದರಲ್ಲಿ ನಾನು ಬಿದ್ದು

ಸತ್ತರೆ ನನ್ನ ಕಷ್ಟವೆಲ್ಲವೂ ಪರಿಹಾರವಾಗುವುದೆಂದು ಯೋಚಿಸುತ್ತಲಿದ್ದಳು ; ಆದರೆ ಪ್ರಾಣವನ್ನು ಬಿಡಲು ಭಯವಿಲ್ಲದಿದ್ದರೂ ಹಾಗೆ ಮಾಡುವುದು ಸರಿಯಲ್ಲವೆಂದು ಅವಳು ಸುಮ್ಮನಿದ್ದಳು.

ಕದರ್ಥಕನೂ ಕೂಡ ಸೈನ್ಯದಲ್ಲಿ ಸೇರಬೇಕಾಗಿ ಬಂದಿತು ; ಆದರೆ ಅವನಿಗೆ ಈ ಮಧ್ಯೆ ವಿವಾಹವಾಗಿದ್ದುದರಿಂದ, ಅವನನ್ನು ಅನ್ಯದೇಶಕ್ಕೆ ಯುದ್ಧಕ್ಕೆ ಕಳುಹಿಸದೆ ಅಮರದೇಶದಲ್ಲಿಯೇ ಇಟ್ಟಿದ್ದರು.

ಧನಕೋಟಿಯು ಹೇಳಿದಂತೆ ಮಗನು ಬಿಡುಗಡೆಯಾಗಿ ಬರುವನೆಂದು ಬಹಳ ಆಸೆಯಿಂದ ಇದ್ದು, ಭುಜಂಗಭೂಷಣನು ಚಕ್ರವರ್ತಿಯು ಸೋತು ಜಯಸಿಂಹನು ರಾಜ್ಯಕ್ಕೆ ಬಂದನೆಂಬ ಸುದ್ದಿಯನ್ನು ಕೇಳಿ ಹತಾಶನಾಗಿ, ಕೆಲವುಕಾಲ ಜಡದಲ್ಲಿದ್ದು ಕೊನೆಗೆ ಲಲಿತಾಂಗಿಯ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು ಪ್ರಾಣವನ್ನು ಬಿಟ್ಟನು ಅವನು ರುಗ್ಣಶಯ್ಯಾಗತನಾದನೆಂದು ಕೇಳಿದ ದಿನದಿಂದ ಲಲಿತಾಂಗಿಯು ಅವನಿಗೆ ಉಪಚಾರಮಾಡುತ್ತ ಅವನು ಸಾಯುವ ವರೆಗೂ ಅವನ ಮನೆಯಲ್ಲಿಯೇ ಇದ್ದಳು. ಧನಕೋಟಿಯು ಭುಜಂಗಭೂಷಣನು ಜೀವಿಸಿರುವಲ್ಲಿ ಅವನಿಗೆ ವೆಚ್ಚಕ್ಕೆ ಬೇಕಾದುದನ್ನು ಕೊಟ್ಟು ಅವನು ಸತ್ತಮೇಲೆ ಅವನ ಉತ್ತರಕ್ರಿಯೆಗಳನ್ನು ಮಾಡಿಸಿ ಅವನಿಗಿದ್ದ ಅಲ್ಪಸ್ವಲ್ಪ ಸಾಲವನ್ನೂ ತೀರಿಸಿದನು

---

## ಹದಿಮೂರನೆಯ ಅಧ್ಯಾಯ.

### ಇಬ್ಬರು ಬಂದಿವಾನರು.

ಜಯಸಿಂಹನು ಪುನಃ ತನ್ನ ರಾಜ್ಯಕ್ಕೆ ಬಂದು ಸೇರಿದ ಅನಂತರ ಕಾರಾಗೃಹಗಳ ಮೇಲುವಿಚಾರಕ ಭಾಸ್ಕರನೆಂಬವನು ಜಾಲದುರ್ಗದ ಕಾರಾಗೃಹವನ್ನು ನೋಡಲು ಹೊರಟನು. ಇವನು ಬರುವನೆಂಬ ಸುದ್ದಿಯು ತಿಳಿದು ಆ ಕಾರಾಗೃಹದ ಅಧಿಪತಿಯು ನಡೆಸುತ್ತಲಿದ್ದ ಕೆಲಸಗಳ ಗಲಭೆಯು ಪಾತಾಳದಲ್ಲಿದ್ದ ಧರ್ಮದೇವನ ನೆಲಮಾಳಿಗೆಗೂ ಕೇಳಿಸಿದ್ದುದರಿಂದ, ಮನುಷ್ಯಲೋಕದಲ್ಲಿ ಅವುದೋ ಒಂದು ಅಸಾಧಾರಣವಾದ ಕಾರ್ಯವು ನಡೆಯುತ್ತಲಿರುವುದೆಂದು ಅವನಿಗೆ ಬೋಧೆಯಾಯಿತು.

ಕೆಲವುದಿವಸಗಳಾದ ಮೇಲೆ ಭಾಸ್ಕರನು ಜಾಲದುರ್ಗಕ್ಕೆ ಬಂದನು ಅವನೂ ಅಲ್ಲಿನ ಅಧಿಕಾರಿಯೂ ಅಲ್ಲಿಯ ಪ್ರತಿಯೊಂದು ಕೊಟ್ಟಡಿಯನ್ನೂ ಪ್ರವೇಶಿಸಿ ಅಲ್ಲಿಯ ನಿವಾಸಿಯನ್ನು ನಿನಗೆ ಒಳ್ಳೆಯ ಆಹಾರ ದೊರಕುವುದೋ ? ನೀನು ಹೇಳಿಕೊಳ್ಳ ತಕ್ಕದು ಏನಾದರೂ ಉಂಟೋ ಎಂದು ಕೇಳುತ್ತ ಬಂದನು ಸಾಧಾರಣವಾಗಿ ಎಲ್ಲರೂ ಆಹಾರ ಸರಿಯಾಗಿಲ್ಲ , ಬಿಡುಗಡೆಮಾಡಿಸಬೇಕು ಎಂದು ಉತ್ತರವಂ ಕೊಟ್ಟರು ಭಾಸ್ಕರನು ಅಧಿಕಾರಿಯನ್ನು ನೋಡಿ ವರ್ಷವರ್ಷ ಬಂದಿವಾನರನ್ನು ನೋಡಿ ಅವರನ್ನು ವಿಚಾರಿಸಬೇಕೆಂದು ಸರ್ಕಾರದವರು ಆವ ಅಭಿಪ್ರಾಯದಿಂದ ಕಟ್ಟಳೆಮಾಡಿರುವರೋ ತಿಳಿಯದು. ಒಬ್ಬನನ್ನು ವಿಚಾರಿಸಿದರೆ ಎಲ್ಲರನ್ನೂ ವಿಚಾರಿಸಿ ದಂತೆಯೇ ಆಗುವುದು ಮೇಲೂ, ಬಂದಿವಾನರು ಕೇಳಿಕೊಳ್ಳುವಂತೆ ಸರ್ಕಾರದವರು ಬೇರೆ ನಡಿಸಿಕೊಡುವುದಿಲ್ಲ. ಇನ್ನಾರನ್ನಾದರೂ ನೋಡತಕ್ಕದು ಉಂಟೋ ಎಂದು ಕೇಳಿದನು.

ಕೆಳಗಣ ಎರಡು ನೆಲಮಾಳಿಗೆಗಳಲ್ಲಿ ಭಯಂಕರವಾದ ಹಟವಾದಿಯೊಬ್ಬನು, ಹುಚ್ಚು ಸನ್ಯಾಸಿಯೊಬ್ಬನು ಇರುವರು. ಬೇಕಾದರೆ ಅವರಿಬ್ಬರನ್ನೂ ಪರಾಂಬರಿಸ ಬಹುದು.

ಅವರನ್ನೂ ನೋಡಿದಂತೆ ಮಾಡಿ ನಮ್ಮ ಕೆಲಸವನ್ನು ಮುಗಿಸೋಣ

ಆಗಬಹುದು ಹಾಗಾದರೆ ಇಬ್ಬರು ಸೈನಿಕರನ್ನು ಮೊದಲು ಕರೆಸುವೆನು

ಏತಕ್ಕೆ ?

ಕೆಲವು ವೇಳೆ ಬಂದಿವಾನರು ತಮಗೆ ಉಂಟಾಗುವ ಕಷ್ಟದಿಂದ ಬೇಸರವನ್ನು ಹೊದ್ದಿ ಜಾಗ್ರತೆಯಾಗಿ ಸಾಯಲಾಶಿಸಿ ತಮ್ಮ ಬಳಿಗೆ ಬಂದವರನ್ನು ಕೊಲ್ಲುವರು

ಅವಶ್ಯಕವಿದ್ದರೆ ಸೈನಿಕರು ಬರಲಿ.

ಇಬ್ಬರು ಸೈನಿಕರಿಗೆ ಹೇಳಿ ಕಳುಹಿಸಿ ಅವರು ಬಂದ ಅನಂತರ ಅವರನ್ನು ಮುಂ ದಿಟ್ಟುಕೊಂಡು ಭಾಸ್ಕರನೂ ಅಧಿಕಾರಿಯೂ ಕತ್ತಲೆ, ಶೀತ, ನಾತಗಳಿಂದ ತುಂಬಿದ ನೆಲಮಾಳಿಗೆ ಮೆಟ್ಟಲುಗಳನ್ನು ಇಳಿವಾಗ ಇದರಲ್ಲಿ ಆರಿರುವರು ಎಂದು ವಿಚಾರಕನು ಕೇಳಿದನು.

ಹಟವಾದಿಯಾಗಿಯೂ ಭಯಂಕರನಾಗಿಯೂ ಇರುವ ರಾಜದ್ರೋಹಿಯೊಬ್ಬ ನಿರುವನು.

ಅವನೊಬ್ಬನೇ ಇರುವನೋ? "ಹೂಂ."

ಎಷ್ಟು ದಿವಸಗಳಿಂದ ಇರುವನು? "ಒಂದು ವರ್ಷದಿಂದ."

ಅವನು ಇಲ್ಲಿಗೆ ಬಂದಂದಿನಿಂದ ಇದರಲ್ಲಿಯೇ ಇರುತ್ತಲಿದ್ದಾನೆಯೋ?

ಇಲ್ಲ, ಮೊದಲು ಇಲ್ಲಿರಲಿಲ್ಲ ಒಂದು ದಿನ ತನಗೆ ಆಹಾರವನ್ನು ಕೊಡುತ್ತಲಿದ್ದ ಆಳನ್ನು ಅವನು ಕೊಲ್ಲಲು ಯತ್ನಪಟ್ಟನು. ಅಂದಿನಿಂದ ಅವನನ್ನು ಇಲ್ಲಿಗೆ ಸೇರಿಸಿದೆವು.

ಹಾಗಾದರೆ ಅವನು ಹುಚ್ಚನಾಗಿರಬೇಕು.

ಅವನು ಹುಚ್ಚನಲ್ಲ, ಪಿಶಾಚಿ

ಹಾಗಾದರೆ ಮೇಲಕ್ಕೆ ಬರೆಯಲೋ?

ಅನವಶ್ಯಕ. ಈಗಲೇ ಅವನಿಗೆ ಪೂರಾ ಹುಚ್ಚು ಹಿಡಿದಿರಬೇಕು. ಹಾಗೆ ಇಲ್ಲದಿದ್ದರೆ ಇನ್ನೊಂದು ವರ್ಷದಲ್ಲಿ ಹಿಡಿಯುವುದು.

ಹುಚ್ಚು ಹಿಡಿದರೆ ಬಂದಿಗೆ ಅನುಕೂಲವೇ ಸರಿ; ಅವನಿಗೆ ಕಷ್ಟಾನುಭವವು ಗೊತ್ತಾಗುವುದಿಲ್ಲ

ತಾವು ಹೇಳಿದುದು ಬಹಳ ಅನುಭವಸಿದ್ಧವಾದ ಮಾತು. ಈ ಬಲದ ಪಕ್ಕದಲ್ಲಿ ಇನ್ನೊಂದು ಬಿಲವಿರುವುದು; ಅದರಲ್ಲಿ ಒಬ್ಬ ಸನ್ಯಾಸಿಯು ಇರುವನು. ಅವನು ಇಂದ್ರಪ್ರಸ್ಥದೇಶದಲ್ಲಿ ರಾಜ್ಯಪರಿವರ್ತನೆಗೆ ಪ್ರಯತ್ನಮಾಡಿದುದರಿಂದ ಅಲ್ಲಿಯ ದೊರೆಯು ಅವನನ್ನು ಹಿಡಿದು ಕೆಲವು ಕಾಲ ಅಲ್ಲಿಯೇ ಸೆರೆಯಲ್ಲಿಟ್ಟಿದ್ದು, ಅನಂತರ ಆ ದೇಶದಲ್ಲಿ ಅವನಿದ್ದರೆ ಅವನ ಪಿತೂರಿಯು ತಪ್ಪದೆಂದು ಯೋಚಿಸಿ, ನಮ್ಮ ರಾಜರ ಒಪ್ಪಿಗೆಯನ್ನು ಪಡೆದು ಈ ಸೆರೆಮನೆಯಲ್ಲಿಟ್ಟಿರುವನು. ಅವನು ಇಲ್ಲಿಗೆ ಬಂದ ಒಂದೆರಡು ವರ್ಷಗಳವರೆಗೆ ಸರ್ವದಾ ಅಳುತ್ತ ಕೃಶನಾಗಿದ್ದು ಈಗ ಯಾವಾಗಲೂ ನಗುತ್ತಲಿದ್ದಾನೆ; ಅವನ ಶರೀರವೂ ಪುಷ್ಟಿಯಾಗುತ್ತಲಿದೆ. ಈ ಪಿಶಾಚಿಗಿಂತ ಅವನನ್ನು ನೋಡುವುದು ಒಂದು ವಿನೋದ

ವಿಚಾರಕ ಭಾಸ್ಕರನು ಇಲ್ಲಿಗೆ ಬಂದುದು ಇದೇ ಮೊದಲು ಸಾರಿಯಾದುದರಿಂದ ತನ್ನ ಅಧಿಕಾರವನ್ನು ತೋರಿಸಲು ಅಸಕ್ತನಾಗಿ, ಬಂಧನಾಲಯದ ಅಧಿಕಾರಿಯನ್ನು ನೋಡಿ, ನಾನು ಮಾಡುವ ಕೆಲಸವು ನನ್ನ ಮನಸ್ಸಿಗೆ ಒಪ್ಪಿಗೆಯಾಗಬೇಕು. ಆದುದರಿಂದ ಇವನನ್ನು ನೋಡಿದ ಬಳಿಕ ಅವನನ್ನು ನೋಡುವೆನು ಎಂದನು.

ಧರ್ಮದೇವನಿದ್ದ ಬಿಲದ ಬಾಗಿಲನ್ನು ತೆಗೆಸಿ ಸೈನಿಕರು ಮುಂದಾಗಿ ಈ ಇಬ್ಬರು ಅಧಿಕಾರಿಗಳೂ ಒಳಗೆ ಪ್ರವೇಶಿಸಿದರು ಆಗ ಮೂಲೆಯಲ್ಲಿ ಅಡಗಿಕೊಂಡಿದ್ದು ಬೆಳಕನ್ನು ನಿರೀಕ್ಷಿಸುತಲಿದ್ದ ಧರ್ಮದೇವನು ಇವರ ಜತೆಯಲ್ಲಿ ಬಂದಿದ್ದ ದೀವಟಿಗೆಯ ಬೆಳಕನ್ನು ನೋಡಿ ತಟ್ಟನೆದ್ದು ತನ್ನ ಕೂಪಕ್ಕೆ ಬಂದವನು ಆರೋ ಒಬ್ಬ ದೊಡ್ಡ ಅಧಿಕಾರಿಯಾಗಿರಬೇಕೆಂದು ಯೋಚಿಸಿ, ಎರಡು ಕೈಗಳನ್ನೂ ಜೋಡಿಸಿಕೊಂಡು ಒಂದೇ ನೆಗೆತದಲ್ಲಿ ಬಂದು ಅವನ ಮುಂದೆ ನಿಂತನು. ಅಷ್ಟರಲ್ಲಿಯೇ ಸೈನಿಕರು ಭಾಸ್ಕರನಿಗೆ ಅವ್ಯದಾದರೂ ಅಪಾಯ ಸಂಭವಿಸೀತು ಎಂದು, ಧರ್ಮದೇವನು ಇನ್ನು ಮುಂದೆ ಬಾರದಂತೆ ತಮ್ಮ ಕತ್ತಿಯನ್ನು ಚಾಚಲು ಅದನ್ನು ನೋಡಿ ಧರ್ಮದೇವನು ಹೆದರಿ ಸ್ವಲ್ಪ ಹಿಂಜರಿದು, ನಮ್ರತೆಯಿಂದ ಮೇಲುವಿಚಾರಕನನ್ನು ಕುರಿತು ಕೆಲವು ಮಾತುಗಳನ್ನಾಡಿದನು. ಅವುಗಳನ್ನು ಕೇಳಿದುದರಿಂದ ವಿಚಾರಕನಲ್ಲಿ ಅಂತರ್ಗತವಾಗಿದ್ದ ಕರುಣೆಯು ಹೊರಪಟ್ಟಂತೆ ಧರ್ಮದೇವನಿಗೆ ತೋರಿತು.

ಆಗ ವಿಚಾರಕನು ಅಧಿಕಾರಿಯನ್ನು ನೋಡಿ, ಕತ್ತಿಗಳನ್ನು ಕಂಡು ಹೆದರುವುದರಿಂದ ಈಚಿಗೆ ಇವನಿಗೆ ಹುಚ್ಚು ಬಿಟ್ಟಿರುವಂತೆ ತೋರುತ್ತದೆ ಹೀಗೆಯೇ ಇದ್ದರೆ ಇವನಿಗೆ ಮುಂದೆ ಭಕ್ತಿಯು ಉಂಟಾಗುವುದು ಎಂದು ಹೇಳಿ, ಧರ್ಮದೇವನನ್ನು ನೋಡಿ ನಿನಗೇನು ಬೇಕೆಂದು ಹೇಳಿದೆ? ಎಂದು ಕೇಳಿದನು

ಮಹಾಸ್ವಾಮೀ! ನನ್ನ ತಪ್ಪು ಇಂತಹುದೆಂದು ಹೇಳದೆ ವಿಚಾರಣೆಯನ್ನೂ ಮಾಡದೆ ನನ್ನನ್ನು ಇಲ್ಲಿಟ್ಟಿರುವರು ಈಗ ನಾನು ತಮ್ಮನ್ನು ಬೇಡಿಕೊಳ್ಳುವುದೇನೆಂದರೆ— ನನ್ನನ್ನು ವಿಚಾರಣೆ ಮಾಡಿ ನನ್ನ ಮೇಲೆ ತಪ್ಪು ಅಪಾದನೆಯಾದರೆ ನನ್ನನ್ನು ಗುಂಡಿನಿಂದ ಸುಡಿಸಬಹುದು. ನಾನು ತಪ್ಪಿತಸ್ಥನಲ್ಲವೆಂದು ತಿಳಿಯಬಂದರೆ ನನ್ನ ಬಿಡುಗಡೆಗೆ ಅಪ್ಪಣೆಯಾಗಬೇಕು.

ನಿನಗೆ ಕೊಡುತ್ತಲಿರುವ ಆಹಾರವು ಸರಿಯಾಗಿದೆಯೋ?

ಇರಬಹುದು, ಆದರೆ ಅದು ನನಗೆ ಮುಖ್ಯವಾದುದಲ್ಲ ನಿರಪರಾಧಿಯಾಗಿರುವವನನ್ನು ಈ ಬಿಲದಲ್ಲಿ ಹಾಕಿ ಕೊಲ್ಲುವುದು ಯಾವ ನ್ಯಾಯ?

ಅಧಿಕಾರಿಯು ಧರ್ಮದೇವನನ್ನು ನೋಡಿ ಈ ದಿನ ನೀನು ಬಹಳ ನಮ್ರತೆಯನ್ನು ತೋರಿಸುತ್ತಿದ್ದೀಯೆ. ಆಳನ್ನು ಕೊಲ್ಲಲು ಯತ್ನಪಟ್ಟ ದಿನ ನೀನು ಹೀಗಿರಲಿಲ್ಲ ಎಂದನು

ಸ್ವಾಮೀ! ಅದು ನಿಶ್ಚಯ. ಆ ದಿನ ನನಗೆ ಹುಚ್ಚು ಹಿಡಿದಂತೆ ಇದ್ದಿತು. ನಾನು ಮಾಡಿದುದು ಅನ್ಯಾಯ, ನನ್ನನ್ನು ಮನ್ನಿಸಬೇಕು.

ಈಗ ನಿನಗೆ ಹುಚ್ಚಿಲ್ಲವೋ? ಎಂದು ವಿಚಾರಕನು ಕೇಳಲು ಸ್ವಾಮೀ! ಕಾರಾಗೃಹದ ದೀರ್ಘವಾಸವು ಕೋಪ, ತಾಪ, ಹುಚ್ಚು ಎಲ್ಲವನ್ನೂ ಬಿಡಿಸುವುದು ಎಂದನು. ದೀರ್ಘವಾಸವೇ? ನೀನು ಇಲ್ಲಿಗೆ ಬಂದು ಎಷ್ಟು ದಿವಸಗಳಾದವು?

ನನಗೆ ಗೊತ್ತಿಲ್ಲ — ನಿನ್ನನ್ನು ಆವಾಗ ಸೆರೆ ಹಿಡಿದರು?

ಪರೀಧಾವಿ ಸಂವತ್ಸರದ ಚೈತ್ರ ಶುಕ್ಲ ದಶಮಿಯ ದಿನ.

ಇದು ಪ್ರಮಾದೀಚ ಸಂವತ್ಸರದ ಭಾದ್ರಪದ ಶುದ್ಧ ಚತುರ್ಥಿ; ಆದುದರಿಂದ ನೀನಿಲ್ಲಿಗೆ ಬಂದು ಹದಿನೇಳು ತಿಂಗಳುಗಳಾದವು. ಇದೇನು ಅಂತಹ ದೀರ್ಘಕಾಲ!

ಸ್ವಾಮೀ! ಕಾರಾಗೃಹದ ವಾಸವು ತಮಗೆ ಅನುಭವವಿಲ್ಲವೆಂದು ತೋರುತ್ತದೆ, ಆದರಿಂದ ಹೀಗೆ ಹೇಳುತ್ತೀರಿ. ದೈವಕೃಪೆಯಿಂದ ಕೈಸೇರಿದ ನೌಕಾಧಿಪತ್ಯವನ್ನು ಹೊಂದಿ, ನಾನು ಪ್ರೀತಿಸುತ್ತಲಿದ್ದ ಸುಂದರಿಯನ್ನು ವರಿಸಿ ಅವಳೊಡನೆ ಸುಖವಾಗಿದ್ದು, ಅಶಕ್ತನಾಗಿಯೂ ಅಸಹಾಯನಾಗಿಯೂ ಇರುವ ತಂದೆಯನ್ನು ಉಪಚರಿಸುವ ಯೋಗ್ಯತೆಯುಂಟಾದ ಕಾಲಕ್ಕೆ ಸರಿಯಾಗಿ 'ಎಣ್ಣೆ ಒಂದಾಗ ಕಣ್ಣು ಮುಚ್ಚಿಕೊಂಡರು' ಎಂಬಂತೆ ನನ್ನ ಆಶಾಭಂಗವಂ ಮಾಡಿ ನನ್ನನ್ನು ಇಲ್ಲಿ ತಂದು ಹಾಕಿದರೆ ನನಗೆ ಪ್ರತಿಯೊಂದು ನಿಮಿಷವೂ ಒಂದೊಂದು ಯುಗದಂತೆ ಕಾಣುವುದಿಲ್ಲವೇ? ತಾವೇ ಯೋಚಿಸಿ

ಈ ಮಾತನ್ನು ಕೇಳುತಲೆ ಮೇಲುವಿಚಾರಕನಿಗೆ ಕನಿಕರ ಹುಟ್ಟಿ ಬಂದಿಶಾಲೆಯ ಅಧಿಕಾರಿಯನ್ನು ನೋಡಿ ಇವನ ವಿಷಯವಾದ ಪತ್ರಗಳನ್ನು ನಾನು ನೋಡಬೇಕು. ಸ್ವಲ್ಪ ತೋರಿಸಿರಿ ಎಂದನು.

ಆಗಬಹುದು. ಇವನ ತಪ್ಪು ಬಲವತ್ತರವಾದುದೆಂದು ಅವುಗಳಲ್ಲಿ ಬರೆದಿದೆ

ಇವರು ಇಲ್ಲಿಂದ ಮುಂದೆ ಹೊರಡುವುದನ್ನು ಕಂಡು, ಧರ್ಮದೇವನು ವಿಚಾರಕನನ್ನು ಕುರಿತು ಸ್ವಾಮೀ! ನನ್ನನ್ನು ವಿಚಾರಣೆ ಮಾಡದೆ ನನಗೆ ಬಿಡುಗಡೆಯಾಗಬೇಕೆಂದು ಕೇಳುವುದಿಲ್ಲ. ತಾವು ಕೂಲಂಕಷವಾಗಿ ನನ್ನ ಅಹವಾಲನ್ನು ವಿಚಾರಣೆ ಮಾಡಿದರೆ ಸಾಕು ಎಂದನು.

ಒಳ್ಳೆಯದು, ನೋಡೋಣ.

ಸ್ವಾಮೀ! ತಾವು ಹೀಗೆ ಅಪ್ಪಣೆ ಕೊಡಿಸುವುದರಿಂದ ತಮಗೆ ನನ್ನಲ್ಲಿ ಕುತುಕವುಂಟಾದಂತೆ ತೋರುತ್ತಿದೆ. ನನ್ನ ಕೋರಿಕೆಯನ್ನು ತಾವು ನಡೆಸಿ ಕೊಡಬೇಕು

ನಾನು ಈಗ ಆವುದನ್ನೂ ಹೇಳಲಾರೆ. ನಿನ್ನ ವಿಷಯವಾದ ಪತ್ರಗಳನ್ನು ನೋಡಿ ಸಾಧ್ಯವಾದರೆ ನಿನಗೆ ಸಾಹಾಯ್ಯವಂ ಮಾಡುವೆನು. ನಿನ್ನನ್ನು ಸೆರೆಯಲ್ಲಿಡಿಸಿದವರಾರು?

ವಲ್ಲಭದೇವನು. ಆತನನ್ನು ಕಂಡು ತಾವು ಮಾತನಾಡಿದರೆ ನನ್ನ ಸಂಗತಿಯೆಲ್ಲಾ ತಮಗೆ ಗೊತ್ತಾಗುವುದು.

ಆತನು ಈಗ ಮಲಯಪಟ್ಟಣದಲ್ಲಿಲ್ಲ.

ನನಗೆ ರಕ್ಷಕನಾಗಿದ್ದವನು ಅಲ್ಲಿಲ್ಲದುದರಿಂದಲೇ ನನಗೆ ಈಗತಿಯಾಗಿದೆ.

ನಿನ್ನ ಮೇಲೆ ವಲ್ಲಭದೇವನಿಗೇನಾದರೂ ದ್ವೇಷವಿದ್ದಿತೋ?

ಇಲ್ಲ, ಇಲ್ಲ, ಆತನು ನನ್ನನ್ನು ವಿಶೇಷ ಕರುಣೆಯಿಂದ ಕಾಣುತ್ತಿದ್ದನು

ಹಾಗಾದರೆ ಆತನು ನಿನ್ನ ವಿಷಯದಲ್ಲಿ ಬರೆದಿರುವುದೆಲ್ಲಾ ಸರಿಯುಷ್ಟೋ.

ಎಲ್ಲವೂ ಸರಿ, ಮಹಾಸ್ವಾಮಿ.

ಒಳ್ಳೆಯದು, ಹಾಗಾದರೆ ನಾನು ಅದನ್ನೆಲ್ಲಾ ನೋಡುತ್ತೇನೆ. ಅದುವರೆಗೆ ಆತ್ತುರಪಡದೆ ಸುಮ್ಮನಿರು.

ಅಪ್ಪಣೆ. ಎಂದು ಧರ್ಮದೇವನು ಭಾಸ್ಕರನಿಗೆ ನಮಸ್ಕಾರ ಮಾಡಿದನು. ಕೂಡಲೆ ಬಿಲದ ಬಾಗಿಲು ಮುಚ್ಚಲ್ಪಟ್ಟಿತು. ಇಷ್ಟು ದಿವಸಗಳು ಬಾಗಿಲು ಮುಚ್ಚಿದಾಗಲೆಲ್ಲ ಧರ್ಮದೇವನು ಒಬ್ಬನೇ ಇರುತ್ತಿದ್ದನು, ಈ ದಿನ "ಆಸೆ" ಎಂಬುದು ಅವನಿಗೆ ಜತೆಯಾಗಿ ಬಂದು ಸೇರಿತು.

ಬಳಿಕಲಾ ಅಧಿಕಾರಿಗಳು ಸನ್ಯಾಸಿಯ ಬಿಲದ ಕಡೆಗೆ ಹೊರಟರು. ದಾರಿಯಲ್ಲಿ ಕಾರಾಗೃಹದ ಅಧಿಕಾರಿಯು ವಿಚಾರಕನನ್ನು ನೋಡಿ ಇದರಲ್ಲಿರುವ ಸನ್ಯಾಸಿಯ ಹುಚ್ಚು ಬಹು ವಿನೋದಕರವಾದುದು ಎಂದನು. ಅದೇನು?

ತನಗೆ ಅಪಾರವಾದ ಧನವಿರುವುದೆಂದೂ ತನಗ್ಗೆ ಬಿಡುಗಡೆ ಮಾಡಿಕೊಟ್ಟರೆ ಒಂದು ಕೋಟಿ ವರಹಗಳನ್ನು ಕೊಡುವೆನೆಂದೂ ಮೊದಲನೆಯ ವರ್ಷ ಹೇಳಿದನು; ಆ ಮೇಲೆ ವರ್ಷಗಳು ಹೆಚ್ಚಿದ ಹಾಗೆಲ್ಲಾ ಒಂದೊಂದು ಹೆಚ್ಚು ವರ್ಷಕ್ಕೂ ಒಂದೊಂದು ಕೋಟಿ ವರಹಗಳನ್ನು ಹೆಚ್ಚಾಗಿ ಕೊಡುವೆನೆಂದು ಹೇಳುತ್ತಾ ಇದ್ದಾನೆ ಇದು ಐದನೆಯ ವರ್ಷವಾದುದರಿಂದ ಐದುಕೋಟಿ ವರಹಗಳನ್ನು ಕೊಡುತ್ತೇನೆಂದು ಹೇಳುತ್ತಾನೆ

ಅವನ ಹೆಸರೇನು? ಯೋಗಾನಂದ.

ಹುಚ್ಚರು ಯಾವಾಗಲೂ ಆನಂದರೇ; ಆದುದರಿಂದ ಆನಂದನೆಂಬುದು ಅವನಿಗೆ ತಕ್ಕ ಹೆಸರು. ಅವನಿಗೆ ಯೋಗವಾವುದು?

ಇಲ್ಲಿ ನರಳುತ್ತಿರುವುದೇ.

ಈರೀತಿಯಾಗಿ ಇವರು ಸರಸವಾಡುತ್ತ ನಗುತ್ತಿದ್ದ ವೇಳೆಗೆ ಸರಿಯಾಗಿ ಸನ್ಯಾಸಿಯಿದ್ದ ಬಿಲದ ಬಾಗಿಲು ತೆಗೆದರು. ಒಳಗೆ ಹೋಗಿ ನೋಡಲು ಯೋಗಾನಂದನು ಬಿಲದ ನಡುವೆ ಕುಳಿತು ಗೋಡೆಯ ಗಾರೆ ಚೂರಿನಿಂದ ನೆಲದ ಮೇಲೆ ಲೆಖ್ಖಗಳನ್ನು ಬರೆಯುತ್ತ ಕುಳಿತಿದ್ದನು. ಬಾಗಿಲನ್ನು ತೆರೆದುದೂ ಜನರು ಒಳಗೆ ಬಂದುದೂ ಯಾವುದೂ ಅವನಿಗೆ ಗೊತ್ತಾಗಲಿಲ್ಲ. ದೀವಿಟಿಗೆಯ ಬೆಳಕನ್ನು ಕಂಡು ತಲೆಯೆತ್ತಿ ನೋಡಿ, ತನ್ನ ಮೈಮೇಲಿದ್ದ ಹರಕು ಬಟ್ಟೆಯನ್ನು ಸರಿಮಾಡಿಕೊಂಡು ಮೇಲುವಿಚಾರಕನ ಮುಖವನ್ನು ನೋಡುತ ಕುಳಿತಿದ್ದ ಹಾಗೆ ಇದ್ದನು.

ನೀನು ಏನು ಮಾಡುತ್ತಲಿದೀಯೆ? ಎಂದು ವಿಚಾರಕನು ಕೇಳಲು, ಆನಂದನು ಜ್ಯೋತಿಶ್ಶಾಸ್ತ್ರದಲ್ಲಿ ಅನೇಕ ಸಂಗತಿಗಳು ಗೂಢವಾಗಿರುವುವು; ಅವುಗಳನ್ನು ಪ್ರಕಟಿಸುವುದಕ್ಕಾಗಿ ಒಂದು ಶಾಸ್ತ್ರವನ್ನು ಬರೆಯುತ್ತಲಿದೇನೆ.

ನಿನಗೇನು ಬೇಕು? ನನಗೇನೂ ಬೇಡ.

ನಿನಗೇನು ಬೇಕೆಂಬುದನ್ನು ತಿಳಿದುಕೊಂಡು ಬರುವುದಕ್ಕಾಗಿ ಸರ್ಕಾರದವರು ನನ್ನನ್ನು ಇಲ್ಲಿಗೆ ಕಳುಹಿಸಿರುವರು.

ಹಾಗಿದ್ದ ಪಕ್ಷದಲ್ಲಿ ತಮ್ಮಲ್ಲಿ ಗುಟ್ಟಾಗಿ ಹೇಳಬೇಕಾದುದು ಒಂದು ಮಾತಿದೆ

ಆಗ ಕಾರಾಗೃಹಾಧಿಪತಿಯು ಭಾಸ್ಕರನನ್ನು ನೋಡಿ ಸ್ವಾಮೀ ! ತಮಗೆ ಮೊದಲೇ ನಾನು ಹೇಳಿರಲಿಲ್ಲವೇ ಎಂದನು.

ಯೋಗಾನಂದನು ವಿಚಾರಕನನ್ನು ನೋಡಿ ಸ್ವಾಮೀ ! ನಾನು ಇಂದ್ರಪ್ರಸ್ಥದ ರಾಜ್ಯದಲ್ಲಿ ಹುಟ್ಟಿ ಪ್ರಸಿದ್ಧರಾದ ಬ್ರಹ್ಮಾನಂದರಲ್ಲಿ ಇಪ್ಪತ್ತು ಸಂವತ್ಸರಗಳು ಶಿಷ್ಯವೃತ್ತಿಯಂ ಮಾಡಿ ಅವರಿಂದ ಉಪದೇಶವಂ ಹೊದ್ದಿ ಯಾತ್ರಾರ್ಥವಾಗಿ ಹೊರಟಾಗ ನನ್ನನ್ನು ಹಿಡಿದು ಇಲ್ಲಿ ಹಾಕಿದಾರೆ. ಏತಕ್ಕೊ ಗೊತ್ತಾಗಲಿಲ್ಲ ಎಂದನು.

ನಿನ್ನ ಆಹಾರವು ಸರಿಯಾಗಿದೆಯೋ ?

ಈ ಅನಾರೋಗ್ಯವಾದ ಅಂಧಕೂಪಕ್ಕೆ ತಕ್ಕಂತೆಯೇ ಇದೆ.

ನೀನು ಹೇಳಿಕೊಳ್ಳುವುದು ಆವುದಾದರೂ ಉಂಟೋ ?

ರಹಸ್ಯವಾದ ಒಂದು ಮಾತುಂಟು.

ಅದನ್ನು ನಾನು ಬಲ್ಲೆ ; ಅದು ಅಸಾಧ್ಯ

ಸ್ವಾಮೀ ! ಗುಟ್ಟು ಏತಕ್ಕೆ ? ನನ್ನಲ್ಲಿ ವಿಶೇಷ ಧನವಿರುವುದು. ನನ್ನನ್ನು ಬಿಡುಗಡೆ ಮಾಡಿದರೆ ಸರ್ಕಾರಕ್ಕೆ ಐದುಕೋಟಿ ವರಹಗಳನ್ನು ಕೊಡುವೆನು

ಅಷ್ಟು ಧನವು ನಿನಗೆಲ್ಲಿರುವುದು !

ಅದು ಇಲ್ಲಿಗೆ ಸುಮಾರು ಇನ್ನೂರು ಮೈಲಿಗಳ ದೂರದಲ್ಲಿ ಒಂದು ಕಡೆ ಇರುವುದು. ತಾವು ಅಲ್ಲಿಗೆ ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋದರೆ ಅದರಲ್ಲಿ ಐದು ಕೋಟಿ ವರಹಗಳನ್ನು ತೆಗೆದು ಕೊಡುವೆನು.

ಸನ್ಯಾಸಿಗಳು ಬಹಳ ಯುಕ್ತಿವಂತರೆಂದು ಕೇಳಿದ್ದೆನು , ಇಲ್ಲಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಇದೊಂದು ಒಳ್ಳೆಯ ಉಪಾಯವನ್ನು ತೆಗೆದೆಯೋ ?

ನನ್ನ ಮಾತಿನಲ್ಲಿ ತಮಗೆ ಅಷ್ಟು ಅನುಮಾನವಿದ್ದರೆ ಒಂದು ಕೆಲಸ ಮಾಡೋಣವಾಗಲಿ. ನಾನು ಇಲ್ಲಿಯೇ ಇರುವೆನು, ನಾನು ಹೇಳುವ ಕಡೆಗೆ ತಾವು ಹೋಗಿ ಅಲ್ಲಿರುವ ಧನದಲ್ಲಿ ಐದುಕೋಟಿ ವರಹಗಳನ್ನು ತೆಗೆದುಕೊಂಡು ಮಿಕ್ಕಾದುದನ್ನು ನನಗೆ ಕೊಟ್ಟು ನನ್ನನ್ನು ಸ್ವೇಚ್ಛೆಯಾಗಿ ಬಿಡುವುದಾಗಿ ತಾವು ನನಗೆ ಮಾತುಕೊಟ್ಟರೆ ನಾನು ಆ ಸ್ಥಳವನ್ನು ಈಗಲೇ ತಿಳಿಸುವೆನು

ನನ್ನ ಮಾತಿಗೆ ನೀನು ಪ್ರತ್ಯುತ್ತರ ಕೊಡಲೇ ಇಲ್ಲ

ನನ್ನ ಮಾತಿಗೂ ತಾವು ಪ್ರತ್ಯುತ್ತರ ಕೊಡಲಿಲ್ಲ. ನನ್ನ ದ್ರವ್ಯವು ನಿಮಗೆ ಪ್ರಾಪ್ತಿಯಿಲ್ಲ; ನಿಮ್ಮಿಂದ ನನ್ನ ವಿಮೋಚನೆಯೂ ಆಗಲಾರದು.

ಹೀಗೆಂದು ಮಾತುಕತೆಗಳು ನಡೆದ ಮೇಲೆ ಕೊಪದ ಬಾಗಿಲ ಬೀಗವಂ ಹಾಕಿಸಿ ಎಲ್ಲರೂ ಮೇಲಕ್ಕೆ ಹೊರಟರು. ಆಗ ವಿಚಾರಕನು ಅಧಿಕಾರಿಯ ಕಡೆಗೆ ತಿರುಗಿ ಇವನು ಇಷ್ಟು ಹಣಗಾರನಾಗಿದ್ದರೆ ಅಧಿಕಾರಿಗಳನ್ನೆಲ್ಲಾ ತನ್ನ ವಶಮಾಡಿಕೊಂಡು ಸುಖವಾಗಿಯೂ ಗೌರವವಾಗಿಯೂ ಇರುತ್ತಿದ್ದನು ಎಂದನು.

ಅವನು ಹೇಳುವ ದ್ರವ್ಯವು ಕನಸಿನ ಗಂಟು ಹುಚ್ಚನಾದುದರಿಂದ ಅದು ನಿಜವೆಂದು ನಂಬಿರುವನು.

ಭಾಸ್ಕರನು ಧರ್ಮದೇವನಿಗೆ ಮಾತುಕೊಟ್ಟಿದ್ದಂತೆ ಅವನ ಸಂಬಂಧವಾದ ಪತ್ರಗಳನ್ನು ತರಿಸಿ ನೋಡಲು ಅವುಗಳಲ್ಲಿ ಈರೀತಿ ಇದ್ದಿತು:—

"ಧರ್ಮದೇವ—ಇವನು ಏಲಾದ್ವೀಪದ ರಾಕ್ಷಸನ ಆಗಮನಕ್ಕೆ ವಿಶೇಷ ಸಾಹಸ
ಮಾಡಿದವನು ಇವನನ್ನು ಯಾವಜ್ಜೀವವೂ ಸೆರೆಯಲ್ಲಿಟ್ಟು
ಬಲು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು"

ಇದನ್ನು ನೋಡಿ ವಿಚಾರಕನು ಆವ ಸಹಾಯವನ್ನೂ ಮಾಡಲಾಗುವುದಿಲ್ಲ ಎಂದು ಅದರ ಕೆಳಗೆ ಬರೆದಿಟ್ಟನು.

ಚಾಲದುರ್ಗಕ್ಕೆ ಬಂದ ಕೆಲವು ದಿವಸಗಳ ಮೇಲೆ ಧರ್ಮದೇವನಿಗೆ ತಿಥಿವಾರಗಳೇ ಗೊತ್ತಾಗುತ್ತಿರಲಿಲ್ಲ. ವಿಚಾರಕನು ಬಂದು ಹೋದ ಮೇಲೆ ಪ್ರತಿಯೊಂದು ದಿನದ ತಿಥಿಯನ್ನು ಗೋಡೆಯ ಮೇಲೆ ಗುರುತು ಹಚ್ಚುತ ಬಂದನು. ದಿವಸಗಳು ಒಂದೊಂದಾಗಿ ಕಳೆಯುತ್ತ ಬಂದುವು; ವಾರಗಳೂ ಕಳೆದುವು; ತಿಂಗಳುಗಳೂ ಆದುವು; ತನ್ನ ವಿಮೋಚನೆಯ ಪ್ರಸ್ತಾಪವೇ ಕಾಣಲಿಲ್ಲ. ಇದಕ್ಕೆ ಕಾರಣವೇನೆಂದು ಯೋಚಿಸಿ, ವಿಚಾರಕನು ವಲ್ಲಭದೇವನನ್ನು ಬಹುಶಃ ಇನ್ನೂ ನೋಡಿರಲಾರನು; ಒಂದು ವೇಳೆ ನೋಡಿದ್ದರೂ ಇದು ರಾಜನಿಗೆ ತಿಳಿಸಿ ಮಾಡತಕ್ಕಕಾರ್ಯವಾದುದರಿಂದ ನಾವಕಾಶವಾಗ ಬಹುದೆಂದು ಧರ್ಮದೇವನು ಸುಮ್ಮನಾದನು. ಕೊನೆಗೆ ವರ್ಷವೂ ಕಳೆಯಿತು,

ಆದರೂ ಏನೂ ಆಗದೆ ಆ ವಿಚಾರಕನು ಅಲ್ಲಿಗೆ ಬಂದಿದ್ದುದೂ ಅವನು ಹೇಳಿದ ಮಾತುಗಳೂ ಅವನಿಗೆ ಕನಸು ಕಂಡಂತಾಗಿ ಹೋಯಿತು.

ಈ ಮಧ್ಯೆ ಚಾಲದುರ್ಗದ ಅಧಿಕಾರಿಗೆ ಬೇರೆ ಕಡೆಗೆ ವರ್ಗವಾದುದರಿಂದ ಅಲ್ಲಿಗೆ ಬಂದ ಹೊಸ ಅಧಿಕಾರಿಗೆ ಬಂದಿವಾನರ ಹೆಸರುಗಳನ್ನು ಜ್ಞಾಪಕದಲ್ಲಿಡುವುದು ಅತಿ ಕಷ್ಟವಾಗಿ ತೋರಿತು. ಅವನು ಪ್ರತಿಯೊಂದು ಕೊಟ್ಟಡಿಗೂ ಒಂದು ಸಂಖ್ಯೆಯನ್ನು ಹಾಕಿಸಿ ಆಯಾಯ ಕೊಟ್ಟಡಿಯಲ್ಲಿರುವನಿಗ ಆಯಾಯ ಸಂಖ್ಯೆಯೇ ಸಂಕೇತನಾಮವಾಗಿರಬೇಕೆಂದು ಅಪ್ಪಣೆಯಂ ಮಾಡಿದನು. ಅದು ಮೊದಲು ಧರ್ಮದೇವನೆಂಬ ಹೆಸರೂ ಕೂಡ ಅಳಸಿಹೋಗಿ ೩೪ ಎಂಬ ಸಂಖ್ಯೆಯೇ ಅವನ ಸಂಕೇತನಾಮವಾಯಿತು ದೈವವಿಲಾಸವನ್ನು ಏನೆಂದು ಹೇಳೋಣ !

ಧರ್ಮದೇವನು ಕಾರಾಗೃಹದಲ್ಲಿ ಅನುಭವಿಸಬೇಕಾದ ಎಲ್ಲಾ ಯಾತನೆಗಳನ್ನು ಅನುಭವಿಸಿದನು. ನಾನು ನಿರಪರಾಧಿ, ನನ್ನನ್ನು ಜಾಗ್ರತೆಯಾಗಿ ಇಲ್ಲಿಂದ ಬಿಟ್ಟೇ ಬಿಡಬೇಕು ಎಂದು ಮೊದಲು ಮೊದಲು ಅವನಿಗೆ ಸ್ವಲ್ಪ ಕೆಚ್ಚಿದ್ದಿತು ; ಆ ಮೇಲೆ ಅಹಂಕಾರವು ಉಡಿಗಿ ಹೋಗಿ ಮನುಷ್ಯರನ್ನು ನಮ್ರೀಭಾವದಿಂದ ಪ್ರಾರ್ಥಿಸತೊಡಗಿದನು ; ಅದರಿಂದಲೂ ಆಶಾಪೂರ್ತಿಯಾಗದಿದ್ದುದರಿಂದ ಕೊನೆಗೆ "ಸಂಕಟ ಬಂದರೆ ವೆಂಕಟರಮಣ" ಎಂಬಂತೆ ಭಗವಂತನಲ್ಲಿ ಮೊರೆಯಿಡಲಾರಂಭಿಸಿದನು.

ಲೋಕದಲ್ಲಿ ದೈವಸಹಾಯವಿಲ್ಲದೆ ಕಾರ್ಯಸಾಧನೆಯಾಗದೆಂಬ ಜ್ಞಾನವು ಪ್ರಾಯಶಃ ಜನಗಳಲ್ಲಿ ಇರುವುದಿಲ್ಲ ; ನಮ್ಮ ಬುದ್ಧಿಚಾತುರ್ಯದಿಂದ ಆವ ಕೆಲಸವನ್ನಾದರೂ ಮಾಡಿಕೊಳ್ಳಬಲ್ಲೆವೆಂಬ ದುರಭಿಮಾನವು ಇರುವುದು ಕೆಲಸವು ಕೈಗೂಡಿದರೆ ಆಹಾ ! ನಾನೆಷ್ಟು ಬುದ್ಧಿವಂತನೆಂದು ತಮ್ಮನ್ನು ತಾವೇ ಕೊಂಡಾಡಿಕೊಂಡು ಇತರರಲ್ಲಿ ಬಡಾಯಿಯನ್ನು ಕೊಚ್ಚಿಕೊಳ್ಳುವರು. ಕೆಲಸವಾಗದಿದ್ದರೆ ಅವರಿವರ ಮೇಲೆ ತಪ್ಪುಹಾಕಿ ಬಯ್ಯುವರು ತಮ್ಮ ಬುದ್ಧಿಯಿಂದಲೇ ಕಾರ್ಯವು ಕೈಗೂಡದೆಂದು ತಿಳಿದ ಬಳಿಕ ಇಂಥವರನ್ನು ಆಶ್ರಯಿಸಿದರೆ ತಮ್ಮ ಕೆಲಸವಾದೀತೆಂದು ನಂಬಿ ಅಂಥವರನ್ನೂ ಅವರ ಪರಿವಾರವನ್ನೂ ಆಶ್ರಯಿಸಿ ಅವರ ಬಳಿ ನಿಹೀನವಾದ ಸೇವಾವೃತ್ತಿಯನ್ನು ಮಾಡುವರು. ಅದರಿಂದಲೂ ಕೆಲಸವಾಗದಿದ್ದರೆ ಕೊನೆಗೆ ದೇವರಲ್ಲಿ ಮೊರೆಯಿಡುವರು. ಆವ ಉಪಾಯದಿಂದಲೂ ತನ್ನ ಕಾರ್ಯವಾಗದೆ ಇದ್ದುದರಿಂದ ಧರ್ಮದೇವನು

ಕೊನೆಕೊನೆಗೆ ದೇವರೇ ಗತಿಯೆಂದು ನಂಬಿ, ತಾನು ಚಿಕ್ಕವಯಸ್ಸಿನಲ್ಲಿ ಕಲಿತುಕೊಂಡಿದ್ದ ಸ್ತೋತ್ರಗಳನ್ನು ಜ್ಞಾಪಿಸಿಕೊಂಡು ಅವುಗಳನ್ನು ಪ್ರತಿನಿತ್ಯವೂ ಭಕ್ತಿಯುಕ್ತನಾಗಿ ಹೇಳುತ್ತ ಬಂದನು. ಒಳ್ಳೆಯ ಸ್ಥಿತಿಯಲ್ಲಿ ತಾನಿರುವಾಗ ಇವುಗಳನ್ನೇ ಎಷ್ಟೋಸಾರಿ ಹೇಳುತ್ತಲಿದ್ದನು, ಆದರೂ ಅರ್ಥ ಚೆನ್ನಾಗಿ ತೋರುತ್ತಿರಲಿಲ್ಲ. ಈಗ ಅವನಿಗೆ ಸ್ತೋತ್ರಾರ್ಥಗಳು ಸ್ಪಷ್ಟವಾಗಿ ತೋರಿಬರುತ್ತಲಿದ್ದುವು

ಲೋಕದಲ್ಲಿ ಆರಿಗಾದರೂ ಸರಿಯೆ ವಿದ್ಯೆಬುದ್ಧಿಗಳು ಎಷ್ಟಿದ್ದರೂ, ವಿವೇಕವಿಲ್ಲದಿದ್ದರೆ ಭಗವದ್ಭಾಗವತರಲ್ಲಿ ಶ್ರದ್ಧಾಭಕ್ತಿಗಳು ಇರುವುದಿಲ್ಲ ಧರ್ಮದೇವನು ಬುದ್ಧಿವಂತನು, ಆದರೆ ವಿದ್ಯೆಬಾರದು. ಆದುದರಿಂದಲೇ ತನಗೆ ಬೇಕಾದ ವೇಳೆಯಲ್ಲಿ ದೈವಸಹಾಯವು ದೊರೆಯಲಿಲ್ಲವೆಂದು ಅವನಿಗೆ ಕೋಪವು ಹುಟ್ಟಿತು ವಿಚಾರಣೆಯ ಕಾಲದಲ್ಲಿ ವಲ್ಲಭದೇವನು ತೋರಿಸಿದ ಕಾಗದದಲ್ಲಿ ಪ್ರತಿಯೊಂದು ಮಾತನ್ನೂ ಜ್ಞಾಪಿಸಿಕೊಂಡು ತನ್ನ ಈ ವಿಪತ್ತಿಗೆ ಕಾರಣಭೂತರಾದ ದುರಾತ್ಮರನ್ನೆಲ್ಲಾ ಅತಿಕ್ರೂರವಾಗಿ ಹಿಂಸಿಸದೆ ಬಿಡೆನೆಂದು ಶಪಥಮಾಡಿಕೊಂಡನು.

ದಿನಗಳು ಕಳೆದ ಹಾಗೆಲ್ಲಾ ಧರ್ಮದೇವನ ಮನೋವ್ಯಥೆಯು ಹೆಚ್ಚುತ್ತ ಬಂದಿತು. ಈ ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಮನುಷ್ಯಯತ್ನದಿಂದ ಬೇರೆ ಆಗುವುದಿಲ್ಲ, ನನ್ನ ಸಂಕಟಕ್ಕೆ ಮರಣವೇ ಪರಿಹಾರ ಎಂದು ನಿಶ್ಚಯಿಸಿದನು. ಆತ್ಮಹತ್ಯವನ್ನು ಮಾಡಿಕೊಳ್ಳಲು ತನಗೆ ತಿಳಿದಿದ್ದ ಮೂರು ಉಪಾಯಗಳನ್ನೂ ವಿಮರ್ಶಿಸಿ, ಅದರಲ್ಲಿ ನೇಣು ಹಾಕಿಕೊಂಡು ಪ್ರಾಣಬಿಡುವುದು ಹೆಂಗುಸರ ಕೆಲಸ; ಮತ್ತೊಬ್ಬನನ್ನು ಕೊಂದು ಪ್ರಾಣಬಿಡುವುದು ಕ್ರೂರಕೃತ್ಯ, ಆಹಾರವನ್ನು ತ್ಯಜಿಸಿ ಪ್ರಾಣಬಿಡುವುದೇ ಸುಖವಾದುದೆಂದು ನಿಶ್ಚಯಿಸಿಕೊಂಡು, ಅದು ಮೊದಲು ಪ್ರತಿನಿತ್ಯವೂ ಆಹಾರವು ಬಂದ ಕೂಡಲೇ, ಹತ್ತಿರದಲ್ಲಿದ್ದರೆ ಆಸೆಯು ಬಾಧಿಸುವುದೆಂದು ಅದನ್ನು ತೆಗೆದು ತನ್ನ ಬಿಲದಲ್ಲಿದ್ದ ಕಿಟಕಿಯಿಂದ ಕೈಗೆ ಸಿಕ್ಕದಂತೆ ಬಿಸುಡುತ್ತ ಬಂದನು. ಮೊದಲನೆಯ ದಿನವೇನೂ ತೋರಲಿಲ್ಲ. ಎರಡನೆಯ ದಿವಸ ಹಸಿವಿನಿಂದ ಬಳಲಿದನು. ಮೂರನೆಯ ದಿನ ಕೈಕಾಲುಗಳನ್ನು ಅಲ್ಲಾಡಿಸಲಿಕ್ಕೂ ಶಕ್ತಿಸಾಲದೆ ಹೋಯಿತು. ನಾಲ್ಕನೆಯ ದಿನ ಹೊಟ್ಟೆಯಲ್ಲಿ ಒಂದು ವಿಧವಾದ ನೋವುಂಟಾಯಿತು. ಐದನೆಯ ದಿನ ಅವನಿಗೆ ಆವುದೂ ತೋರದೆ ಅಮಲು ಒಂದಂತೆ ಆಗಿ ಕಣ್ಣು ಮುಚ್ಚಿದರೆ ಸಾವಿರಾರು

ದೀಪಗಳು ಇರುವಂತೆ ತೋರುತ್ತಲಿದ್ದವು. ಆಗ ಮರಣಕಾಲವು ಸಮೀಪಿಸಿತೆಂದು ಅವನು ಸಂತೋಷಪಟ್ಟನು.

ಆ ದಿನ ರಾತ್ರಿ ಸುಮಾರು ಒಂಭತ್ತು ಘಂಟೆಯ ಸಮಯದಲ್ಲಿ ಇವನು ಮಲಗಿದ್ದ ಕಡೆಯ ಗೋಡೆಯ ಒಳಗೆ ಒಂದು ವಿಧವಾದ ಸದ್ದು ಕೇಳಿಸಿತು. ಇವನಿದ್ದ ಬಿಲದಲ್ಲಿ ಎಷ್ಟೋ ಹುಳಹೊಪ್ಪಟ್ಟೆಗಳು ಸದ್ದು ಮಾಡುತ್ತಲಿದ್ದರೂ ಅದರಿಂದ ಇವನಿಗೆ ಒಂದು ದಿನವಾದರೂ ಎಚ್ಚರವಾಗುತ್ತಿರಲಿಲ್ಲ ಈಗ ಕೇಳಿದ ಶಬ್ದವು ಹಾಗಿರಲಿಲ್ಲ. ಇದು ಬಹುಶಃ ತನ್ನ ವಿಮೋಚನೆಗೆ ಸಹಾಯಕವಾಗಿರಬಹುದೆಂದು ಯೋಚಿಸಿ, ಕೊನೆಗೆ ದೇವರು ತನ್ನ ಪ್ರಾರ್ಥನೆಯನ್ನು ಅಂಗೀಕರಿಸಿದನೆಂದು ಆನಂದಪಟ್ಟನು.

ಸುಮಾರು ಮೂರು ಘಂಟೆಗಳ ಕಾಲ ಹೀಗೆ ಸದ್ದು ಕೇಳುತ್ತಲಿದ್ದಿತು. ಆಮೇಲೆ ಅವ್ಯದೋ ಒಂದು ಭಾರವಾದ ಪದಾರ್ಥವು ಧೊಪ್ಪನೆ ಕೆಳಗೆ ಬಿದ್ದ ಸದ್ದಾ ಕೇಳಿಸಿತು ಬಳಿಕ ಸದ್ದೇ ಆಗಲಿಲ್ಲ. ಧರ್ಮದೇವನಿಗೆ ರಾತ್ರಿಯೆಲ್ಲಾ ನಿದ್ದೆ ಬಾರಲಿಲ್ಲ. ಇದೇನಿರಬಹುದು? ತನ್ನಂಥ ದುರದೃಷ್ಟದ ಬಂದಿಯೇನಾದರೂ ಗೋಡೆಯನ್ನು ಕೊರೆಯುವನೋ? ಇಲ್ಲವೇ ಸರ್ಕಾರದವರು ಶಿಥಿಲವಾದ ಗೋಡೆಗಳನ್ನು ಸರಿಮಾಡಿಸುವರೋ? ಸರ್ಕಾರದವರು ಈ ನಿಶೆಯಲ್ಲಿ ಏತಕ್ಕೆ ಕೆಲಸ ಮಾಡಿಸುವರು? ಇದು ಅವರ ಕೆಲಸವಾಗಿರಲಾರದು ಎಂದು ಆಲೋಚನೆ ಮಾಡುತ್ತಾ ಇದ್ದನು ಅಷ್ಟರಲ್ಲಿಯೇ ಬೆಳಗಾಯಿತು.

---

## ಹದಿನಾಲ್ಕನೆಯ ಅಧ್ಯಾಯ

### ಇಂದ್ರಪ್ರಸ್ಥದ ಘನವಿದ್ವಾಂಸ

ಧರ್ಮದೇವನು ಪ್ರಾಯೋಪವೇಶಮಾಡಿ ಸಾಯಬೇಕೆಂದು ನಿಶ್ಚಯಿಸಿದ್ದುದರಿಂದ ತನ್ನ ಕೂಪಕ್ಕೆ ಬರುತ್ತಲಿದ್ದ ಆಳಿನ ಸಂಗಡ ಒಂದು ಮಾತನ್ನೂ ಆಡುತ್ತಿರಲಿಲ್ಲ, ಅವನು ಕೇಳಿದ ಪ್ರಶ್ನೆಯೊಂದಕ್ಕಾದರೂ ಉತ್ತರವನ್ನು ಕೊಡುತ್ತಿರಲಿಲ್ಲ ಅವನ ಕಡೆಗೇ ತಿರುಗುತ್ತಿರಲಿಲ್ಲ. ಒಂದೆರಡು ವೇಳೆ ಇವನಿಗೆ ಮೆಯ್ಯು ಸ್ವಸ್ಥವಿಲ್ಲದಿರಬಹುದೆಂದು ಆಳು ಹತ್ತಿರ ಬಂದು ಮಾತನಾಡಿಸಿದಾಗ ಇವನು ತನ್ನ ಮೋರೆಯನ್ನು ಗೋಡೆಯ ಕಡೆಗೆ ತಿರುಗಿಸಿಕೊಳ್ಳುತ್ತಿದ್ದನು.

ಈ ದಿನ ಆಳು ಆಹಾರವನ್ನು ತಂದ ಒಡನೆಯೇ ಧರ್ಮದೇವನು ಅವನ ಸಂಗಡ ವಿಪರೀತವಾಗಿ ಮಾತನಾಡಲು ಆರಂಭಿಸಿದನು ಇವನು ಇಷ್ಟು ಮಾತನ್ನಾಡುವುದನ್ನು ಕಂಡು, ಆಳು "ಇವನಿಗೆ ಏನಾದರೂ ಸಂದು ಆಗಿರಬಹುದೇನೋ" ಎಂದುಕೊಂಡು ಮಾತನ್ನೂ ಆಡದೆ ತನ್ನ ಕೆಲಸ ಮಾಡಿಕೊಂಡು ಹೊರಟು ಹೋದನು. ನೆನ್ನೆಯ ಒಂದು ರಾತ್ರಿ ಕೇಳುತ್ತಿದ್ದ ಶಬ್ದವು ಒಂದು ವೇಳೆ ಪುನಃ ಪ್ರಾರಂಭವಾಗಿ ಅದು ಎಲ್ಲಿ ಆಳಿನ ಕಿವಿಗೆ ಬಿದ್ದು ಅಧಿಕಾರಿಗಳಿಗೆ ಗೊತ್ತಾಗಿ, ತನ್ನಂತೆ ಅವನೋ ಒಬ್ಬ ಅದೃಷ್ಟ ಹೀನನು ಮಾಡುತಲಿರುವ ಪ್ರಯತ್ನಕ್ಕೆ ಭಂಗವುಂಟಾದೀತೋ ಎಂಬ ಭಯದಿಂದ ಧರ್ಮದೇವನು ಅವನ ಸಂಗಡ ಅಷ್ಟು ಗಟ್ಟಿಯಾಗಿ ಮಾತನಾಡಿದನು. ಆಳಿಗೆ ಇದಾವುದೂ ಗೊತ್ತಾಗಲಿಲ್ಲ

ನನ್ನಂತೆ ಮತ್ತೊಬ್ಬನು ಮಾಡುತ್ತಲಿರುವ ಪ್ರಯತ್ನವನ್ನು ನಾನೂ ಏತಕ್ಕೆ ಮಾಡ ಬಾರದು? ಸಾಧ್ಯವಾದರೆ ಇಬ್ಬರೂ ಕಲೆತು ಏತಕ್ಕೆ ಒಬ್ಬರಿಗೊಬ್ಬರು ಒತ್ತಾಸೆಮಾಡ ಬಾರದು? ಪ್ರಾಣವೊಂದಿದ್ದರೆ ಅವುದಾದರೂ ಒಂದು ದಿನ ಈ ಕಾರಾಗೃಹವನ್ನು ಬಿಟ್ಟು ಹೊರಗೆ ಹೋಗಬಹುದು. ಪ್ರಾಣವನ್ನು ಕಳೆದುಕೊಂಡರೆ ದೈವಸಹಾ ಯವೂ ತಪ್ಪಿ ಹೋಗುವುದು. "ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ" ಎಂದು ಹಿರಿಯರು ಹೇಳುವರಲ್ಲವೇ? ಆದುದರಿಂದ ಪ್ರಾಣವನ್ನು ಹೇಗಾದರೂ ಕಾಪಿ ಟ್ಟುಕೊಳ್ಳಬೇಕು ಎಂದು ಯೋಚಿಸಿ, ಧರ್ಮದೇವನು ಆ ದಿನ ತಂದಿಟ್ಟಿದ್ದ ಆಹಾರವನ್ನು ಒಂದೇ ತುತ್ತಾಗಿ ಬಾಯಿಗೆ ಹಾಕಿಕೊಳ್ಳುವುದರಲ್ಲಿದ್ದು, ಅಷ್ಟರಲ್ಲಿಯೇ ಸಮುದ್ರದಲ್ಲಿ ಅನೇಕದಿನ ಆಹಾರ ಸಿಕ್ಕದಿದ್ದು, ಸಿಕ್ಕಿದ ವೇಳೆಯಲ್ಲಿ ಅತ್ಯಾತುರದಿಂದ ಮಿತಮೀರಿ ತಿಂದು ಸತ್ತ ನಾವಿಕರ ವಿಷಯಗಳನ್ನು ಜ್ಞಾಪಕಕ್ಕೆ ತಂದುಕೊಂಡು, ಸ್ವಲ್ಪಸ್ವಲ್ಪವಾಗಿ ತಿನ್ನುತ್ತ ಮೆಲ್ಲಮೆಲ್ಲಗೆ ತಿರುಗಾಡುತ್ತ ಆ ದಿನವನ್ನು ಕಳೆದನು

ಇವನಿಗೆ ಆ ರಾತ್ರಿ ಮಲಗಿದ ಕೂಡಲೆ ನಿದ್ದೆಯು ಬಂದಿತು. ಹಿಂದಿನ ರಾತ್ರಿ ತನ್ನ ಮಂಚದ ಪಕ್ಕದ ಗೋಡೆಯಲ್ಲಿ ಕೇಳಿಸಿದ ಶಬ್ದವು ಪುನಃ ಯಾವಾಗ ಪ್ರಾರಂಭ ವಾಗುವುದೋ ಎಂದು ಯೋಚಿಸುತ್ತ ಮಲಗಿದನಾದಕಾರಣ ರಾತ್ರಿ ಸುಮಾರು ಹನ್ನೊಂದು ಗಂಟೆಯ ಹೊತ್ತಿನಲ್ಲಿ ಗೋಡೆಯಬಳಿ ಸದ್ದಾದ ಕೂಡಲೇ ಇವನಿಗೆ ಎಚ್ಚರ ವಾಯಿತು ಆಗ ಎದ್ದು ಕಿವಿಗೊಟ್ಟು ಕೇಳಲು, ಕಲ್ಲುಗಳು ಸಡಿಲಿ ಮೆಲ್ಲಗೆ ಬೀಳು

ವಂತೆಯೂ ತನ್ನ ಕೂಪದ ಹತ್ತಿರದಲ್ಲಿಯೇ ಸದ್ದಾಗುವಂತೆಯೂ ತೋರಿದುದರಿಂದ, ಈ ಕಡೆಯಿಂದ ನಾನೂ ಗೋಡೆಯನ್ನು ಕೊರೆಯುತ್ತ ಹೋದರೆ ಇಬ್ಬರೂ ಸೇರಿ ತಪ್ಪಿಸಿಕೊಂಡು ಹೋಗುವ ಉಪಾಯಗಳನ್ನು ಮಾಡಬಹುದು ಅಂದರೆ ಆವ ಆಯುಧವೂ ಇಲ್ಲದೆ ಕೆಲಸವನ್ನು ಹೇಗೆ ಮಾಡುವುದು ಎಂದು ರಾತ್ರಿಯೆಲ್ಲಾ ಯೋಚಿಸುತ್ತಾ ಆವುದೂ ಒಗೆಹರಿಯದಿದ್ದನು

ಮುಂಜಾನೆ ಎದ್ದು ಗೋಡೆಯನ್ನು ಸವರಿನೋಡಿ ಸಂದುಗಾರೆಯು ತೇವವಾಗಿರುವುದನ್ನು ಕಂಡು ತನ್ನ ಉಗುರುಗಳಿಂದ ಕೆರೆಯಲು ಯತ್ನಪಟ್ಟನು; ಅದು ಸಾಧ್ಯವಾಗಲಿಲ್ಲ. ಮಂಚದಲ್ಲಿ ಕಬ್ಬಿಣದ ಕಂಬಿಗಳಿದ್ದರೆ ಅವುಗಳಲ್ಲಿ ಒಂದನ್ನು ಕಿತ್ತು ಉಪಯೋಗಿಸೋಣವೆಂದು ನೋಡಿದನು, ಮಂಚಕ್ಕೆ ಕಬ್ಬಿಣದ ಕಂಬಿಯನ್ನೇ ಹಾಕಿರಲಿಲ್ಲ. ಬಾಗಿಲ ಕಿಂಡಿಗೆ ಹಾಕಿದ್ದ ಸಲಾಕಿಗಳನ್ನು ಕೀಳಲು ನೋಡಿ ಅದು ಸಾಧ್ಯವಾಗದೆ ಬಿಟ್ಟುಬಿಟ್ಟನು. ತನ್ನ ಪ್ರಯತ್ನವು ಆವ ವಿಧದಲ್ಲೂ ಫಲಿಸಲಿಲ್ಲವಲ್ಲಾ ಎಂದು ಖಿನ್ನನಾಗಿ, ಅಯ್ಯೋ ದೇವರೇ! ನಾನೇನ ಮಾಡಲಿ, ನನಗೇನು ಗತಿ? ಎಂದು ಕೂಗಿಕೊಂಡು ತಾನು ಆಹಾರಗಳನ್ನು ಇಟ್ಟುಕೊಳ್ಳುವ ದಪ್ಪ ಗಾಜಿನ ತಟ್ಟೆಯು ಈ ಕೆಲಸಕ್ಕೆ ಉಪಯೋಗವಾಗಬಹುದೆಂದು ನಸದು ಅದನ್ನು ಒಡೆದು ಹಾಕಿ ತನಗನುಕೂಲವಾದ ಕೆಲವು ಚೂರುಗಳನ್ನು ಒಂದು ಮೂಲೆಯಲ್ಲಿ ಬಚ್ಚಿಟ್ಟನು.

ತನಗೆ ಆಹಾರವು ಬರುವ ವೇಳೆಗೆ ಸರಿಯಾಗಿ ಧರ್ಮದೇವನು ಮಂಚದ ಮೇಲೆ ಮಲಗಿದ್ದನು. ಆಹಾರವನ್ನು ತಂದ ಆಳು ತಟ್ಟೆಯು ಚೂರುಚೂರಾಗಿರುವುದನ್ನು ಕಂಡು ಏತಕ್ಕೆ ಇದನ್ನು ಒಡೆದ ಎಂದು ಕೇಳಲು, ಧರ್ಮದೇವನು ಅಯ್ಯಾ, ಕೈತಪ್ಪಿ ಬಿದ್ದು ಒಡೆದು ಹೋಯಿತು ಎಂದನು ಇನ್ನೊಂದು ತಟ್ಟೆಯನ್ನು ತಂದಿಟ್ಟರೆ ಅದನ್ನೂ ಹೀಗೆಯೇ ಮಾಡುತ್ತೀಯೋ ಏನೋ? ನಿನಗೆ ಈ ಮರದ ತಟ್ಟೆಯೇ ಸರಿ ಎಂದು ತಾನು ಆಹಾರವನ್ನು ತಂದಿದ್ದ ಕಬ್ಬಿಣದ ಕೈಪಿಡಿ ಹಾಕಿದ್ದ ಮರದ ತಟ್ಟೆಯನ್ನು ಆಹಾರ ಸಮೇತ ಅಲ್ಲಿಟ್ಟು ಬಾಗಿಲನ್ನು ಮುಚ್ಚಿಕೊಂಡು ಹೊರಟುಹೋದನು.

ಅದನ್ನು ಕಂಡು ನಾನು ಒಂದು ಆಯುಧಕ್ಕಾಗಿ ಪ್ರಯತ್ನ ಮಾಡಿದೆನು, ಎರಡು ಆಯುಧಗಳು ದೊರಕಿದವು. ಸಂದು ಗಾರೆಯನ್ನು ಗೀರುವುದಕ್ಕೆ ತಟ್ಟೆಯ ಚೂರುಗಳೂ, ಕಲ್ಲುಗಳನ್ನು ಮೀಟುವುದಕ್ಕೆ ಕಬ್ಬಿಣದ ಕಂಬಿಯೂ ಆಯಿತು ಇದು ದೈವ

ಕೃಪೆಯಲ್ಲದೆ ಬೇರೆ ಅಲ್ಲವೆಂದು ಭಾವಿಸಿ ಸಂತೋಷದಿಂದ ದೇವರನ್ನು ಬಹುವಿಧವಾಗಿ ಸ್ತುತಿಸಿದನು

ಊಟವಾದ ಮೇಲೆ ತಾನು ಇಂಥ ಕಡೆಯಲ್ಲಿ ಕೊರೆದಿರುವೆನೆಂದು ಒಬ್ಬರಿಗೂ ಕಾಣದೆ ಇರುವ ಸ್ಥಳವನ್ನು ಹುಡುಕಿ, ಕೊನೆಗೆ ತನ್ನ ಮಂಚದ ಕೆಳಗಡೆಯೇ ಸರಿಯಾದ ಕಡೆ ಎಂದು ನಿಶ್ಚಯಿಸಿ, ಒಡನೆಯೇ ಕೆಲಸ ಮಾಡಲು ಪ್ರಾರಂಭಿಸಿ ಸಂಜೆಯ ವೇಳೆಗೆ ಸುಮಾರು ಹತ್ತು ಬೊಗಸೆಯಷ್ಟು ಗಾರೆಯನ್ನು ತೆಗೆದು ಗೋಡೆಯ ಒಂದು ಕಲ್ಲನ್ನು ಕದಲಿಸಿ, ಆಳು ಬರುವುದರೊಳಗಾಗಿ ಅದೆಲ್ಲವನ್ನೂ ತನ್ನ ಕೂಪದ ಮೂಲೆಯಲ್ಲಿದ್ದ ಒಂದು ಹಳ್ಳದಲ್ಲಿ ಹಾಕಿ, ಅದರ ಮೇಲೆ ಅಷ್ಟು ಮಣ್ಣನ್ನು ಎರಚಿ, ಗೋಡೆಯಲ್ಲಿ ರಂಧ್ರವು ಕಾಣದಂತೆ ಆ ಕಲ್ಲನ್ನು ಅದರ ಸ್ಥಾನದಲ್ಲಿಯೇ ಇಟ್ಟನು.

ಇವನು ಇತ್ತ ಕೆಲಸವನ್ನು ಪ್ರಾರಂಭಿಸಿದೊಡನೆಯೇ ಆ ಕಡೆಯವನು ತನ್ನ ಕೆಲಸವನ್ನು ನಿಲ್ಲಿಸಿರಬೇಕೆಂದು ಯೋಚಿಸಿ, ಅವನು ನನ್ನಲ್ಲಿಗೆ ಬರಲು ಅನುಮಾನ ಪಟ್ಟರೆ ನಾನು ಅವನಲ್ಲಿಗೆ ಹೋಗುವುದೇ ಸರಿ ಎಂದು ನಿಶ್ಚಯಿಸಿದನು.

ಆಳು ರಾತ್ರಿಯ ತಿಂಡಿಯನ್ನು ತಂದಿಟ್ಟು ಹೋದಬಳಿಕ ಧರ್ಮದೇವನು ಜಾಗ್ರತೆಯಾಗಿ ತಿಂದು ಪುನಃ ಕೆಲಸವನ್ನು ಪ್ರಾರಂಭಮಾಡಿ ನಾಲ್ಕೈದು ಕಲ್ಲುಗಳನ್ನು ಕಿತ್ತು ನೋಡಲು, ದೊಡ್ಡ ಮರದ ದೂಲವೊಂದು ಅಡ್ಡಲಾಗಿ ಸಿಕ್ಕಿತು. ಅದನ್ನು ಕಂಡು ಧರ್ಮದೇವನು ಧೈರ್ಯಗೆಟ್ಟು, ಅಯ್ಯೋ ದೇವರೇ! ನಾನು ಇದುವರೆಗೂ ಕಷ್ಟಪಟ್ಟು ಮಾಡಿದ ಕೆಲಸವು ವ್ಯರ್ಥವಾಯಿತಲ್ಲಾ! ನನ್ನ ವಿಮೋಚನೆಯನ್ನು ತಪ್ಪಿಸಿ, ನಾನು ಪ್ರಾಣಬಿಡಬೇಕೆಂದಿದ್ದುದನ್ನೂ ತಪ್ಪಿಸಿ, ಜೀವವನ್ನು ಕಾಪಿಟ್ಟುಕೊಳ್ಳಬೇಕೆಂಬ ಬುದ್ಧಿಯನ್ನು ಹುಟ್ಟಿಸಿ, ಕೊನೆಗೆ ಈ ಕೂಪದಲ್ಲಿ ಸಾಯುವಂತೆ ನನ್ನನ್ನು ಕೈಬಿಟ್ಟೆಯಾ ಎಂದು ಗಟ್ಟಿಯಾಗಿ ಅತ್ತನು. ಆಗ ದೇವರನ್ನು ನಂಬಿ ನಿರಾಶನಾದವನಾರು ಎಂದು ಪಾತಾಳದಿಂದ ಆರೋ ಹೇಳಿದಂತೆ ಕೇಳಿ, ಧರ್ಮದೇವನಿಗೆ ಮೆಯ್ಯೆಲ್ಲ ಜುಮ್ಮೆಂದಿತು.

ಇದೇನು? ಇಲ್ಲಿ ಯಾರೋ ಮಾತನಾಡುವಂತಿದೆಯೆಂದು ಅವನಿಗೆ ಬಹು ಆಶ್ಚರ್ಯವಾಯಿತು. ಬಂದಿಶಾಲೆಯ ಆಳಿನ ಸಂಗಡ ಅವನು ಆಗಾಗ್ಗೆ ಮಾತನಾಡುತ್ತಲಿದ್ದರೂ,

ಬಂದಿಗಳು ಆಳುಗಳನ್ನು ಅಸ್ಥಿಮಾಂಸ ಚರ್ಮಗಳಿಂದ ಮೂಡಿದ ಬಲವಾದ ಬಾಗಿಲುಗಳೆಂದು ಎಣಿಸುವರೇ ಹೊರತು ಮನುಷ್ಯರೆಂದು ಎಣಿಸುವುದಿಲ್ಲ

ಪಾತಾಳದಿಂದ ಮಾತನಾಡುವ ಈ ಧ್ವನಿಯನ್ನು ಕೇಳಿದರೆ ನನಗೆ ಹೆದರಿಕೆಯಾಗುವುದು ; ಆದರೂ ಚಿಂತೆಯಿಲ್ಲ, ಮಾತನಾಡಿ ನೋಡೋಣ ಎಂದು ಯೋಚಿಸಿ, ಧರ್ಮದೇವನು ಅಯ್ಯಾ, ನೀನಾರು ಎಂದು ಕೇಳಿದನು.

ನೀನಾರು ಎಂದು ಅವನೂ ಕೇಳಿದನು.

ನಾನು ಒಬ್ಬ ಅದೃಷ್ಟಹೀನನಾದ ಬಂದಿ.

ನಿನ್ನದು ಆವ ದೇಶ ? "ಅಮರದೇಶ."

ನಿನ್ನ ವೃತ್ತಿಯೇನು? "ನಾವಿಕನು"

ನೀನಿಲ್ಲಿಗೆ ಬಂದು ಎಷ್ಟು ದಿವಸಗಳಾದುವು ?

ನಾನು ಪರೀಧಾವಿಸಂವತ್ಸರದ ಚೈತ್ರಶುಕ್ಲದಶಮಿಯ ದಿನ ಬಂದೆನು.

ನೀನಾವ ತಪ್ಪನ್ನು ಮಾಡಿದೆ ?

ನಾನು ಆವ ತಪ್ಪನ್ನೂ ಮಾಡಲಿಲ್ಲ.

ಸರ್ಕಾರದವರು ಹೇಳುವುದೇನು ?

ಚಕ್ರವರ್ತಿಯು ಅಮರದೇಶಕ್ಕೆ ಮರಳಿ ಬರುವುದಕ್ಕೆ ಸಹಾಯಮಾಡಿದೆನೆಂದು

ಹಾಗಾದರೆ ಚಕ್ರವರ್ತಿಯು ಅಮರದೇಶದಲ್ಲಿಲ್ಲವೋ ?

ಇಲ್ಲ, ಅವನನ್ನು ಏಲಾದ್ವೀಪದಲ್ಲಿಟ್ಟಿರುವರು ಇದು ನಿನಗೆ ತಿಳಿಯದೆ ಇರುವುದನ್ನು ನೋಡಿದರೆ ನೀನು ಬಹಳ ದಿವಸಗಳಿಂದ ಇಲ್ಲಿರುವಂತೆ ತೋರುತ್ತದೆ

ನಾನು ಇಲ್ಲಿಗೆ ಬಂದು ಹದಿನಾರು ವರ್ಷಗಳಾದವು

ಇವನು ತನಗಿಂತಲೂ ಹೆಚ್ಚಾಗಿ ನಾಲ್ಕು ವರ್ಷಗಳು ಇಲ್ಲಿ ಇದ್ದಾನಲ್ಲಾ ಎಂದು ಧರ್ಮದೇವನು ಗಡಗಡನೆ ನಡುಗಿದನು.

ನಿನ್ನ ಕೊಟ್ಟಡಿಗೆ ಎಷ್ಟು ಎತ್ತರದಲ್ಲಿ ರಂಧ್ರವನ್ನು ಮಾಡಿರುವೆ ಎಂದು ಕೆಳಗಿನ ಕೂಪದವನು ಕೇಳಲು, ಧರ್ಮದೇವನು ನೆಲಮಟ್ಟಕ್ಕೆ ಸರಿಯಾಗಿ ಮಾಡಿರುವೆನು ಎಂದನು.

ರಂಧ್ರವನ್ನು ಹೇಗೆ ಮುಚ್ಚಿರುವೆ ?

ಅದರ ಬಾಯಿಗೆ ಮೊದಲಿದ್ದ ಕಲ್ಲನ್ನೇ ಮುಚ್ಚಿ ಮಲಗುವ ಮಂಚವನ್ನು ಮರೆಯಾಗಿಟ್ಟಿರುವೆನು

ಅದು ಸರಿ. ನಿನ್ನ ಕೂಪಕ್ಕೆ ಆಕಡೆ ಏನಿರುವುದು ?

"ಗೂಢಪಥ"        ಅದರ ಆಚೆಗೆ ?        "ಅಂಗಳ."

ಅಯ್ಯೋ ! ಎಂದು ಕೆಳಗಿನ ಕೂಪದವನು ಹೇಳಲು ಇವನು ಏತಕ್ಕೆ ಸಂಕಟ ? ವೆಂದು ಕೇಳಿದನು.

ತಪ್ಪುತಿಳುವಳಿಕೆಯಿಂದ ಕೆಲಸವೆಲ್ಲಾ ಕೆಟ್ಟು ಹೋಯಿತು. ನಿನ್ನ ಕೂಪದ ಗೋಡೆಯನ್ನೇ ಈ ಬಂದಿಶಾಲೆಗೆ ಸಮುದ್ರದ ಒತ್ತಿನ ಹೊರಗೋಡೆಯೆಂದು ತಿಳಿದಿದ್ದೆ. ನನ್ನ ಪ್ರಯತ್ನವೆಲ್ಲಾ ಅಸಾರ್ಥಕವಾಯಿತು

ಒಂದು ವೇಳೆ ಇದೇ ಸಮುದ್ರದ ಒತ್ತಿನ ಹೊರಗೋಡೆಯಾಗಿದ್ದಿದ್ದರೆ ಏನು ಮಾಡುತ್ತಲಿದ್ದೆ ?

ಸಮುದ್ರದಲ್ಲಿ ದುಮ್ಮಿಕ್ಕಿ ಈಸುತ್ತ, ಸಮೀಪದಲ್ಲಿರುವ ಅವುದೋ ಒಂದು ದ್ವೀಪವನ್ನು ಸೇರಿ, ಮುಂದೆ ಹೇಗಾದರೂ ಆವ ದೇಶವನ್ನಾದರೂ ಸೇರಿ ಜೀವಿಸಬೇಕೆಂದಿದೆ

ಅಷ್ಟು ದೂರ ಈಸಲು ಸಾಧ್ಯವೋ ?

ದೈವಸಹಾಯವಿದ್ದರೆ ಏಕೆ ಆಗಬಾರದು ? ಈಗ ನನ್ನ ಆಸೆಯೆಲ್ಲವೂ ಭಂಗವಾಯಿತು.

ಆಸೆಯೆಲ್ಲಾ ಭಂಗವಾಯಿತೋ ?

ಆಹುದು ಆದರೂ ನೋಡೋಣ. ಮುಂದೆ ನಾನು ಹೇಳುವ ವರೆಗೂ ನೀನು ರಂಧ್ರವನ್ನು ಕೊರೆಯ ಬೇಡ.

ಇಲ್ಲ. ನಿನ್ನ ಹೆಸರೇನು ?

ನನ್ನ ಸಂಕೇತನಾಮ ಇಪ್ಪತ್ತೇಳು ಎಂದು ಅವನು ನಕ್ಕ ಶಬ್ದವಾಯಿತು. ಈ ರೀತಿ ತನ್ನ ಹೆಸರನ್ನು ಹೇಳಲು ಅನುಮಾನಪಟ್ಟುದನ್ನು ನೋಡಿ, ಅವನು ಮಾಡುವ ಪ್ರಯತ್ನದಲ್ಲಿ ತನ್ನನ್ನು ಸೇರಿಸಿಕೊಳ್ಳಲು ಅವನಿಗೆ ಇಷ್ಟವಿಲ್ಲವೋ ಏನೋ ಎಂದು ಧರ್ಮದೇವನಿಗೆ ತೋರಿ, ಅಯ್ಯಾ, ಇದುವರೆಗೆ ನನ್ನ ಸಾಮರ್ಥ್ಯವನ್ನೆಲ್ಲಾ ವೆಚ್ಚಮಾಡಿದೆನು ; ಇನ್ನು ಮುಂದೆ ನನ್ನಿಂದಾವುದೂ ಸಾಧ್ಯವಿಲ್ಲ. ನನ್ನನ್ನು ನೀನು

ಕೈಬಿಡುವುದಾದರೆ ನಾನು ತಲೆಯನ್ನು ಚಚ್ಚಿಕೊಂಡು ಪ್ರಾಣವನ್ನು ಬಿಡುವೆನು. ಆ ಪಾಪವು ನಿನ್ನನ್ನೇ ಸೇರುವುದು

ನಿನ್ನ ಧ್ವನಿಯಿಂದ ನೀನು ಚಿಕ್ಕ ವಯಸ್ಸಿನವನಂತೆ ತೋರುತ್ತಲಿದೆ.

ನನಗೆ ಸುಮಾರು ಮೂವತ್ತು ವಯಸ್ಸಾಗಿರಬಹುದು.

ಇಷ್ಟು ಚಿಕ್ಕ ವಯಸ್ಸಿನಲ್ಲಿ ವಿಶ್ವಾಸಘಾತಕತನವು ಇರುವುದಿಲ್ಲ

ಅಯ್ಯಾ! ನಾನು ಆರಿಗೂ ಎಂದೂ ಕೆಟ್ಟುದನ್ನು ಯೋಚಿಸಿದವನಲ್ಲ ನನ್ನನ್ನು ಛಿನ್ನಭಿನ್ನವಾಗಿ ಕತ್ತರಿಸಿದರೂ ನಾನು ವಿಶ್ವಾಸಘಾತುಕನಾಗುವುದಿಲ್ಲ. ಏನು ಪ್ರಮಾಣಬೇಕಾದರೂ ಮಾಡುವೆನು. ನನ್ನನ್ನು ಮಾತ್ರ ನೀನು ಕೈಬಿಡಬೇಡ.

ಈಗ ನೀನು ಈ ಮಾತನ್ನಾಡಿದುದು ಒಳ್ಳೆಯದಾಯಿತು. ಹಾಗಿಲ್ಲದಿದ್ದರೆ ನಾನು ಬೇರೆ ಏರ್ಪಾಡನ್ನು ಮಾಡಬೇಕೆಂದಿದ್ದೆನು. ನೀನು ಹೆದರಬೇಡ

ಅಯ್ಯಾ! ಸಾಧ್ಯವಾದರೆ ನಾವಿಬ್ಬರೂ ಯತ್ನಪಟ್ಟು ಇಲ್ಲಿಂದ ತಪ್ಪಿಸಿಕೊಂಡು ಹೋಗೋಣ. ಅದು ಆಗದಿದ್ದರೆ ಇಬ್ಬರೂ ಸೇರಿ ಕಾಲಕಳೆಯೋಣ. ನೀನು ದೊಡ್ಡವನಾಗಿದ್ದರೆ ನನ್ನ ತಂದೆಯಂತೆ ಭಾವಿಸುವೆನು; ಇಲ್ಲವಾದರೆ ಸಹೋದರನಂತೆ ಕಾಣುವೆನು.

ಒಳ್ಳೆಯದು, ನಾಳೆಯವರೆಗೂ ಸುಮ್ಮನಿರು.

ಇದುವರೆಗೆ ಒಬ್ಬನೇ ಇದ್ದು ಧರ್ಮದೇವನು ಬೇಸತ್ತಿದ್ದನು. ಈಗ ಮತ್ತೊಬ್ಬನು ಜತೆಗೆ ಸಿಕ್ಕಿದನಲ್ಲಾ ಎಂದು ಸಂತೋಷಪಟ್ಟು, ದೇವರನ್ನು ಸ್ತೋತ್ರಮಾಡಿ, ತಾನು ಅಗೆದಿದ್ದ ಕಲ್ಲುಗಾರೆಗಳನ್ನು ಎತ್ತಿಹಾಕಿ ಮಂಚವನ್ನು ಸರಿಮಾಡಿಕೊಂಡು ಸುಖವಾಗಿ ಮಲಗಿದನು.

ಮರುದಿನ ಬೆಳಿಗ್ಗೆ ಎಂದಿನಂತೆ ಆಳು ತನ್ನ ಕೂಪಕ್ಕೆ ಬಂದಾಗ, ಧರ್ಮದೇವನು ಇನ್ನೂ ಮಲಗಿದ್ದನು, ಅದನ್ನು ಕಂಡು ಆಳು ಮಾತನ್ನಾಡದೆ ತಿಂಡಿಯನ್ನು ಇಟ್ಟು ಹೊರಟುಹೋದನು ಆಮೇಲೆ ಇವನು ಎದ್ದು, ತಿಂಡಿಯನ್ನು ತಿಂದು, ನಿಂತ ಕಡೆ ನಿಲ್ಲದೆ ತನ್ನ ಕೂಪವನ್ನು ಸುತ್ತುತ್ತಲಿದ್ದು ನೆರೆಯವನು ಯಾವಾಗ ಮಾತನಾಡುವನೋ ಎಂದು ಪ್ರತಿಕ್ಷಣವೂ ನಿರೀಕ್ಷಿಸುತ್ತಲಿದ್ದನು ಆವ ಶಬ್ದವೂ ಕೇಳಿಬರಲಿಲ್ಲ. ಸಾಯಂಕಾಲವೂ ಆಯಿತು. ಆಳು ಆಹಾರವನ್ನು ತಂದಿಟ್ಟ ಕಾಲದಲ್ಲಿ ಧರ್ಮದೇವನು ಮಂಚದ

ಮೇಲೆ ಕುಳಿತಿದ್ದನು. ಅವನ ಮುಖವಿಕಾಸವನ್ನೂ ಕಣ್ಣುಗಳ ವಿಶೇಷಕಾಂತಿಯನ್ನೂ ನೋಡಿ ಆಳು ನಿನಗೆ ಪುನಃ ಹುಚ್ಚು ಹಿಡಿಯುವಂತೆ ತೋರುತ್ತದ ಎಂದು ಹೇಳಿ ಹೊರಟು ಹೋದನು.

ರಾತ್ರಿಯೆಲ್ಲಾ ನೆರೆಯವನ ಸೊಲ್ಲು ಕೇಳಿಸಲಿಲ್ಲ. ಧರ್ಮದೇವನು ಬೆಳಗಿನ ಜಾವದಲ್ಲೇ ಎದ್ದು ಕೂಪದಲ್ಲಿ ತಿರುಗಾಡುತ್ತಲಿದ್ದನು. ಆಳು ಆಹಾರವನ್ನಿಟ್ಟು ಹೊರಟು ಹೋದ ಮೇಲೆ ಆರೋ ಒಬ್ಬ ಮನುಷ್ಯನು ಸುರಂಗದಿಂದ ತನ್ನ ಬಲಕ್ಕೆ ಬರುವಂತೆ ಸದ್ದಾಯಿತು. ಒಡನೆಯೇ ಮಂಚವನ್ನೆತ್ತಿ ರಂಧ್ರದ ಬಾಯಿಗೆ ಇಟ್ಟಿದ್ದ ಕಲ್ಲನ್ನು ತೆಗೆದು, ನೆಲದ ಮೇಲೆ ತನ್ನ ಎರಡು ಮಂಡಿಗಳನ್ನೂ ಕೈಗಳನ್ನೂ ಊರಿ ಬಗ್ಗಿ ನೋಡುತಲಿರುವಾಗ, ನೀನಲ್ಲಿದ್ದೀಯ ಎಂದು ಕೇಳಿದಂತಾಯಿತು. ನಾನಿಲ್ಲಿದ್ದೇನೆ ಎಂದು ಹೇಳಿ ಧರ್ಮದೇವನು ರಂಧ್ರವನು ಚೆನ್ನಾಗಿ ಗುರ್ತಿಸಿ ನೋಡುತ್ತಲಿದ್ದನು.

ನಿನ್ನ ಆಳು ಬಂದಿದ್ದನೋ ಎಂದು ಕೇಳಿದುದಕೆ, ಧರ್ಮದೇವನು ಹೂ, ಆಗಲೇ ಬಂದಿದ್ದನು ಎಂದು ಹೇಳಲು, ಹಾಗಾದರ ಕಲ್ಲನ್ನು ಕೀಳುವೆನು ಎಂದು ಹೇಳಿದ ಒಡನೆಯೇ ಇವನು ಮಾಡಿದ ರಂಧ್ರದಿಂದ ಒಂದು ಕಲ್ಲು ಕುಸಿದುಕೊಂಡಿತು. ಇದೇನಂದು ಧರ್ಮದೇವನು ಗಾಬರಿಯಿಂದ ನೋಡುವುದರಲ್ಲಿ, ರಂಧ್ರದಿಂದ ಮೊದಲು ತಲೆ, ಆಮೇಲೆ ಭುಜಗಳು, ಅನಂತರ ಶರೀರ, ಈರೀತಿ ಒಬ್ಬ ಮನುಷ್ಯನು ಈಚೆಗೆ ಬಂದನು. ಹೊರಗೆ ಬರುತಲೆ ಧರ್ಮದೇವನು ಅವನನ್ನು ತಬ್ಬಿಕೊಂಡು ಎತ್ತಿ ಬೆಳಕಿನಲ್ಲಿ ಅವನ ಮುಖವನ್ನು ನೋಡಿ ಆನಂದಪಟ್ಟನು.

ಅವನು ಮಟ್ಟವಾಗಿದ್ದನು. ಕೂದಲು ಬೆಳ್ಳಗಾಗಿದ್ದರೂ ಹೆಚ್ಚಾಗಿ ವಯಸ್ಸಾಗಿದ್ದಂತೆ ತೋರಲಿಲ್ಲ. ಅವನ ಮುಖದ ವರ್ಚಸ್ಸೂ, ಕಣ್ಣುಗಳ ಕಾಂತಿಯೂ, ಶರೀರದ ದಾರ್ಢ್ಯವೂ ಲವಲವಿಕೆಯೂ ಪೂರ್ವವಯಸ್ಸನ್ನೇ ಸೂಚಿಸುತ್ತಿದ್ದುವು. ಈಗ ಪಟ್ಟ ಶ್ರಮದಿಂದ ಮುಖವು ಸ್ವಲ್ಪ ಬೆವರಿದ್ದಿತು. ಅವನು ಬರಿಯ ಚಿಂದಿಯನ್ನುಟ್ಟಿದ್ದನು. ಆ ಚಿಂದಿಯನ್ನು ನೋಡಿದರ ಅದರ ಪೂರ್ವಾವಸ್ಥೆಯು ಹೀಗಿತ್ತೆಂದು ಊಹಿಸಲು ಕೂಡ ಅಸಾಧ್ಯವಾಗಿದ್ದಿತು.

ಧರ್ಮದೇವನು ತನ್ನನ್ನು ಆದರದೊಡನೆ ಉಪಚರಿಸಿದುದನ್ನು ಕಂಡು ನೆರೆಯವನು

ತೃಪ್ತನಾಗಿ ಅಲ್ಲಿ ಕಲ್ಲು ಕಿತ್ತಿದ್ದುದನ್ನು ನೋಡಿ ನೀನು ಒಹು ಅಜಾಗರೂಕತೆಯಿಂದ ಈ ರಂಧ್ರದ ಬಾಯ ಕಲ್ಲನ್ನು ಕಿತ್ತಹಾಗಿದೆ ನಿನ್ನಲ್ಲಿ ಆಯುಧಗಳಿಲ್ಲವೋ ಎಂದನು.

ನಿಮ್ಮಲ್ಲಿ ಇರುವುವೋ? "ಕೆಲವನ್ನು ನಾನು ಮಾಡಿಕೊಂಡಿದೇನೆ"

ಹಾಗೆಯೋ! ನಾನು ಅವುಗಳನ್ನು ನೋಡಬೇಕಲ್ಲ

ಅದಕ್ಕೇನು ಆಗಲಿ ಇಗೋ ನೋಡು, ಇದು ನನ್ನ ಉಳಿ. ಇದರಿಂದಲೇ ಈ ಐವತ್ತಡಿಯು ಮಂದವಾದ ಗೋಡೆಯನ್ನು ಕೊರೆದು ಸುರಂಗಮಾಡಿಕೊಂಡು ಬಂದೆನು ಎಂದು ಹೇಳಿ, ಒಂದು ಮರದ ಹಿಡಿ ಹಾಕಿದ್ದ ಕಬ್ಬಿಣದ ಸಲಾಕಿಯನ್ನು ತೋರಿಸಿದನು.

ಅಬ್ಬಬ್ಬಾ, ಇದರಿಂದ ಐವತ್ತಡಿಯು ಮಂದವಾದ ಈ ಗೋಡೆಯನ್ನು ಕೊರೆದಿರಾ! ಎಂದು ಧರ್ಮದೇವನು ಗಟ್ಟಿಯಾಗಿ ಕೂಗಿಕೊಳ್ಳಲು, ಉಷ್! ಮಲ್ಲಗೆ ಮಾತಾಡು, ಇಂಥ ಬಂದಿಶಾಲೆಗಳಲ್ಲಿ ಬಂದಿಗಳು ಏನ ಮಾಡುತ್ತಲಿರುವರೋ ತಿಳಿಯಬೇಕಂದು ಅಲ್ಲಲ್ಲೇ ಜನಗಳನ್ನಿಟ್ಟಿರುವರು.

ಈ ಗೋಡೆ ಐವತ್ತಡಿಗಳ ದಪ್ಪವಿದಯೋ?

ಅಹುದು ಈ ಗೋಡೆಯನ್ನೇ ಸಮುದ್ರದ ಪಕ್ಕದಲ್ಲಿರುವ ಹೊರಗಿನ ಗೋಡೆಯೆಂದು ನಾನು ತಿಳಿದುಕೊಂಡಿದ್ದೆ ನಾನು ಮಾಡಿದ ಲೆಕ್ಕಾಚಾರವು ಸ್ವಲ್ಪ ತಪ್ಪಾಯಿತು, ಆದರಿಂದ ನಿನ್ನ ಕೊಟ್ಟಡಿಗೆ ಸುರಂಗವು ಬಿದ್ದಿತು ಇದರ ಹೊರಗೇನು ಇರುವುದೋ ನೋಡೋಣ

ಹೀಗೆನ್ನಲು, ಕೂಡಲೇ ಅಲ್ಲಿದ್ದ ಮೇಜನ್ನು ಕಿಟಿಕಿಯ ಕೆಳಗೆ ಎಳೆದು, ಧರ್ಮದೇವನು ಅದರ ಮೇಲೆ ಹತ್ತಿದನು. ಇನ್ನೊಬ್ಬನೂ ಮೇಜಿನ ಮೇಲೆ ಹತ್ತಿ ಧರ್ಮದೇವನ ಹೆಗಲಿನ ಮೇಲೆ ಏರಿ ಕಿಟಿಕಿಯಿಂದ ನೋಡಲು ಒಂದು ಕಡೆ ಗೂಢಪಥವೂ, ಅದರ ಆಚೆಗೆ ಸಿಪಾಯಿಗಳು ಇರುವ ಅಂಗಳವೂ, ಇನ್ನೊಂದು ಕಡೆ ಅಧಿಕಾರಿಯ ಮನೆಯೂ, ಮತ್ತೊಂದು ಕಡೆ ಬಂಡೆಯೂ ಕಾಣಬಂದುವು. ಅವುಗಳನ್ನು ನೋಡಿ ಅವನು ತಲೆಯನ್ನು ಅಲ್ಲಾಡಿಸುತ ಕೆಳಗೆ ಇಳಿದನು.

ಧರ್ಮದೇವನು ಅವನ ಮುಖವನ್ನೇ ನೋಡುತ್ತಲಿದ್ದು ಅವನು ಶಿರಃಕಂಪನ

ಮಾಡಿದುದನ್ನು ಕಂಡು ಭೀತನಾದನು ಸೆರೆಯವನೂ ಕೂಡ ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ಅಸಾಧ್ಯವೆಂದನು.

ಹಾಗಾದರೆ ಗತಿ ?　　"ದೇವರೇ ಗತಿ"

ಇಷ್ಟು ದಿವಸಗಳು ಎಷ್ಟೋ ಸಾಹಸಮಾಡಿ ಆಶಾಭಂಗನಾದರೂ, ಸ್ವಲ್ಪವೂ ವ್ಯಥೆಪಡದೆ, ದೇವರು ಮಾಡಿದಂತಾಗಲಿ ಎಂದು ನೆಮ್ಮದಿಯಾಗಿರುವ ಮಹಾನುಭಾವನನ್ನು ನೋಡಿ, ಧರ್ಮದೇವನಿಗೆ ಪರಮಾಶ್ಚರ್ಯವಾಯಿತು.

ಸ್ವಾಮೀ ! ನಿಮ್ಮ ಮುಖವರ್ಚಸ್ಸನ್ನೂ ಶಾಂತಿಯನ್ನೂ ನೋಡಿದರೆ ತಾವು ಮಹಾನುಭಾವರೆಂದು ತೋರುತ್ತಿದೆ ತಾವು ಆರೋ ದಯೆಮಾಡಿ ನನಗೆ ತಿಳಿಸಬೇಕು.

ಅಪ್ಪಾ ! ನಾನೊಬ್ಬ ಪರದೇಶಿ ; ನನ್ನ ವಿಷಯವನ್ನು ತಿಳಿಯಲು ನಿನಗೆ ಕೌತುಕವಿದ್ದರೆ ಹೇಳುವೆನು. ಅದರಿಂದ ನಿನಗೇನೂ ಪ್ರಯೋಜನವಿರಲಾರದು. ನಾನು ನಿನಗೆ ಆವ ಸಹಾಯವನ್ನೂ ಮಾಡಲರಿಯೆನು.

ತಾವು ಹಾಗೆ ಹೇಳಕೂಡದು, ಇನ್ನಾವ ಸಹಾಯವಾಗದಿದ್ದರೂ ತಮ್ಮ ಮನೋದಾರ್ಢ್ಯದಿಂದ ನನ್ನನ್ನು ಸಮಾಧಾನಪಡಿಸಿ ಈ ಕಾರಾಗೃಹವಾಸವು ಸಹ್ಯವಾಗುವಂತೆ ಮಾಡಬಹುದು.

ಹಾಗಾದರೆ ಕೇಳು ನನ್ನನ್ನು ಯೋಗಾನಂದನೆಂದು ಕರೆಯುತ್ತಾರೆ. ಇಂದ್ರಪ್ರಸ್ಥವು ನನ ಸ್ಥಳ ; ನಾನಿಲ್ಲಿಗೆ ಬಂದು ಹದಿನಾರು ವರ್ಷಗಳಾದುವು. ನಾನಿಲ್ಲಿದ್ದಾಗ ಇಂದ್ರಪ್ರಸ್ಥವು ಅನೇಕ ಪಾಳೆಯಗಾರರ ಪಾಲಾಗಿ ನೆಪಮಾತ್ರಕ್ಕೆ ಅಲ್ಲೊಬ್ಬ ರಾಜನಿದ್ದನು. ಅಲ್ಲಿ ಸ್ವರಾಜ್ಯಕಲಹವು ವಿಶೇಷವಾಗಿ, ಜನಗಳಿಗೆ ಕಿರುಕುಳವು ಅಧಿಕವಾದುದರಿಂದ, ಅದನ್ನು ಏಕರಾಜಾಧಿಪತ್ಯವನ್ನಾಗಿ ಮಾಡಿ ಅದಕ್ಕೆ ಒಬ್ಬ ಶೂರನಾದ ದೊರೆಯನ್ನು ಏರ್ಪಡಿಸಿದರೆ ಜನಗಳಿಗೆ ನೆಮ್ಮದಿಯೂ ಸುಖವೂ ಉಂಟಾಗುವುದೆಂದು ಒಂದು ಗ್ರಂಥವನ್ನು ಬರೆಯಬೇಕೆಂದಿದ್ದೆನು. ಅದಕ್ಕನುಕೂಲವಾಗಿ, ಅಸಹಾಯಶೂರನಾದ ಅಮರರಾಜ್ಯದ ಚಕ್ರವರ್ತಿಗೆ ಒಂದು ಗಂಡು ಮಗು ಹುಟ್ಟಿತೆಂದೂ, ಅದಕ್ಕೆ ಇಂದ್ರಪ್ರಸ್ಥದ ರಾಜನೆಂದು ಆಗಲೇ ನಾಮಕರಣ ಮಾಡಿದನೆಂದೂ ಕೇಳಿ, ನನ್ನ ಕೋರಿಕೆಯು ಕೈಗೂಡಿತೆಂದು ಸಂತೋಷವಾಗಿದ್ದೆನು ನಾನು ಆ ಪುಸ್ತಕವನ್ನು ಬರೆಯಬೇಕೆಂದಿರುವ ಸಮಾಚಾರವು ಇಂದ್ರಪ್ರಸ್ಥದ ಅರಸನಿಗೆ ಹೇಗೋ ತಿಳಿದು ಅವನು

ನನ್ನ ಮೇಲೆ ಕಣ್ಣಿಟ್ಟಿದ್ದನು. ಸ್ವಲ್ಪ ದಿವಸಗಳಲ್ಲಿಯೇ ನಾನು ಪ್ರಯಾಣಮಾಡಬೇಕಾಗಿ ಬಂದಿತು. ಆಗ ರಾಜನಿಗೆ ನನ್ನ ವಿಷಯದಲ್ಲಿ ಹುಟ್ಟಿದ್ದ ಅನುಮಾನವು ಹೆಚ್ಚಿ ನನ್ನನ್ನು ಹಿಡಿದು ಸೆರೆಯಲ್ಲಿಟ್ಟು, ಕೆಲವು ಕಾಲಾನಂತರ ನಾನು ಇಂದ್ರಪ್ರಸ್ಥದ ರಾಜ್ಯದಲ್ಲಿರುವ ವರೆಗೆ ತನಗೆ ತೊಂದರೆ ತಪ್ಪದೆಂದು ತಿಳಿದು ಅಮರರಾಜ್ಯದ ಅರಸನ ಒಪ್ಪಿಗೆಯಂ ಪಡೆದು ನನ್ನನ್ನು ಇಲ್ಲಿಡಿಸಿದನು ಚಕ್ರವರ್ತಿಯು ಪರಾಜಿತನಾಗಿ ಏಲಾದ್ವೀಪದಲ್ಲಿರುವ ಸಮಾಚಾರ ನನಗೆ ಗೊತ್ತೇ ಇಲ್ಲ. ಇದನ್ನು ನೋಡಿದರೆ ದೈವಯತ್ನದ ಮುಂದೆ ಮನುಷ್ಯಯತ್ನವು ನಾಟುವುದಿಲ್ಲವೆಂಬುದು ನಿಜವೆಂದೇ ತೋರುತ್ತಲಿದೆ. ಚಕ್ರವರ್ತಿಯು ರಾಜ್ಯಭ್ರಷ್ಟನಾದುದರಿಂದಲೇ ನಮ್ಮ ರಾಜನು ನನ್ನನ್ನಿಲ್ಲಿರಿಸಿದನು

ಈಗ ಅಮರದೇಶದರಸನಾರು ? ' ಜಯಸಿಂಹ "

ಅಯ್ಯೋ ದೇವರೇ! ದೇವೇಂದ್ರನಂತೆ ಬಲಶಾಲಿಯಾಗಿ, ಸೂರ್ಯನಂತೆ ಪರಾಕ್ರಮದಿಂದ ಜ್ವಲಿಸುತ್ತಲಿರುವ ಚಕ್ರವರ್ತಿಯನ್ನು ರಾಜ್ಯಭ್ರಷ್ಟನೆನಿಸಿ ಬಲಹೀನನಾದ ಜಯಸಿಂಹನನ್ನು ಅಮರದೇಶದಲ್ಲಿಯೂ, ಉತ್ತರನಂತೆ ಶತ್ರುಗಳನ್ನು ನೋಡಿ ಓಡುವ ಸೋಮೇಂದ್ರನನ್ನು ಇಂದ್ರಪ್ರಸ್ಥದಲ್ಲಿಯೂ ಇಡುವುದು ನಿನ್ನ ಸಂಕಲ್ಪವೆಂದು ಕಾಣುತ್ತೆ. ಇದು ಆವುದೋ ಒಳ್ಳೆಯದಕ್ಕೇ ಆಗಿರಬೇಕು

ಈ ರೀತಿ ತನ್ನ ಕಷ್ಟಗಳನ್ನೆಲ್ಲಾ ಮರತು ರಾಜ್ಯದ ಮತ್ತು ಜನರ ಸೌಖ್ಯಕ್ಕಾಗಿ ಮರುಗುತ್ತಿರುವ ಆ ಮಹಾತ್ಮನನ್ನು ಕಂಡು ಧರ್ಮದೇವನು ಬೆರಗಾದನು

ದೇವರೇ! ಹೀಗೆ ನೀನು ಮಾಡುವುದು ಒಳ್ಳೆಯದಕ್ಕಲ್ಲದೆ ಬೇರೆಯಿಲ್ಲ. ರಾಜರು ದುರ್ಬಲರಾದರೆ ಪ್ರಜೆಗಳು ಬಲಿಷ್ಠರಾಗುವರು. ಪ್ರಜೆಗಳು ಬಲಿತರೆ ರಾಜ್ಯವನ್ನು ಒಂದೇ ರೀತಿಗೆ ತಂದು ನಿರಂಕುಶರಾದ ರಾಜರನ್ನು ಓಡಿಸಿ ತಮ್ಮ ಇಷ್ಟಾನುಸಾರವಾಗಿ ಎಲ್ಲ ಕೆಲಸಗಳನ್ನು ನಡೆಯಿಸುವರು ಎಂದು ಹೇಳಿ ಧರ್ಮದೇವನನ್ನು ನೋಡಿ, ನನಗೆ ವಯಸ್ಸಾದುದರಿಂದ ರಾಜ್ಯವು ಆ ಸ್ಥಿತಿಗೆ ಬರುವ ವರೆಗೆ ಬದುಕಿರಲಾರೆ ನೀನು ಇನ್ನೂ ಸಣ್ಣವನು ; ಅದನ್ನೆಲ್ಲಾ ಮುಂದೆ ನೋಡುವೆ ಎಂದನು.

ಇಲ್ಲಿಂದ ಹೊರಗೆ ಹೋದರಲ್ಲವೇ. ನಾನು ಅವುಗಳನ್ನು ನೋಡುವುದು

ನಿಜವಪ್ಪಾ, ನಿಜ. ಈ ಆಲೋಚನೆಗಳುಂಟಾದಾಗ ಕಾರಾಗೃಹದಲ್ಲಿರುವೆನೆಂಬ ಜ್ಞಾನವೇ ನನಗಿರುವುದಿಲ್ಲ.

ಸ್ವಾಮೀ! ಇಲ್ಲಿ ಅಸ್ಪಸ್ಥರಾದ ಸನ್ಯಾಸಿಯೊಬ್ಬರು ಇರುವರೆಂದು ಕೇಳಿದ್ದೆನು, ತಾವೇ ಅವರೆಂದು ಕಾಣುತ್ತದೆ

ಅಸ್ವಸ್ಥನೆಂದು ಯಾಕೆ ಮರೆಮಾಡಿ ಹೇಳುವೆ? ಹುಚ್ಚುಹಿಡಿದವನೆಂದು ಸರಿಯಾಗಿ ಹೇಳು

ಹಾಗೆ ಹೇಳಲು ಸಂಕೋಚವಾಯಿತು

ಅಹುದಪ್ಪಾ ಅಹುದು ನಾನೇ ಆ ಹುಚ್ಚು ಸನ್ಯಾಸಿ. ಇಲ್ಲಿರುವವರೆಲ್ಲರೂ ನನ್ನನ್ನು ಹುಚ್ಚನೆಂದು ತಿಳಿದುಕೊಂಡಿದ್ದಾರೆ ಅದು ಒಂದು ವಿಷಯಕ್ಕೆ ನನಗೆ ಅನುಕೂಲವೇ; ನನ್ನ ಗೋಜಿಗೆ ಆರೂ ಬರುವುದಿಲ್ಲ. ಇಲ್ಲಿರುವವರೆಗೂ ನೆಮ್ಮದಿಯಾಗಿರಬಹುದು.

ತಾವು ಹೀಗೆ ಹೇಳುವುದನ್ನು ನೋಡಿದರ ಹೊರಗೆ ಹೋಗುವ ಪ್ರಯತ್ನವನ್ನು ಬಿಟ್ಟಂತೆ ತೋರುತ್ತದೆ

ಇನ್ನೇನ ಮಾಡಲಿ?

ತಾವು ಹೀಗೆ ಧೈರ್ಯಗೆಡಕೂಡದು. ಬೇರಾವ ಉಪಾಯವನ್ನಾದರೂ ಯೋಚಿಸಿ ಹೇಳಿದರೆ ನಾನು ಅದನ್ನು ಶಿರಸಾವಹಿಸಿ ನಡೆಸುವೆನು

ಅಪ್ಪಾ! ನಿನಗೆ ಅನುಭವವು ಸಾಲದು ಈ ರಂಧ್ರವನ್ನು ಮಾಡುವುದಕ್ಕೆ ನಾನು ಎಷ್ಟುದಿವಸ ಕಷ್ಟಪಟ್ಟೆನೋ ನನಗೇ ಗೊತ್ತು. ಆಯುಧಗಳನ್ನು ಮಾಡಿಕೊಳ್ಳುವುದಕ್ಕೆ ಮೂರು ವರ್ಷಗಳು ರಂಧ್ರವನ್ನು ಕೊರೆಯಲು ಮೂರು ವರ್ಷಗಳು; ಕಲ್ಲು ಮಣ್ಣು ಗಾರೆಗಳನ್ನು ಹೊತ್ತು ನನ್ನ ಕೂಪದಲ್ಲಿದ್ದ ಪಾಳುಬಾವಿಯಲ್ಲಿ ಹಾಕಿದುದು ಸುಮಾರು ಒಂದು ವರ್ಷ ಇಷ್ಟು ದೀರ್ಘಕಾಲ ಶ್ರಮಪಟ್ಟು ಕೈಗೂಡುವುದೆಂದಿದ್ದ ಕಾರ್ಯವು ಕೆಟ್ಟು ಹೋದರೆ, ನಾನು ಇಲ್ಲಿಂದ ಹೊರಡಕೂಡದೆಂದು ದೈವಚಿತ್ತದಲ್ಲಿ ಇರುವಂತಿದೆ ಹಾಗಿರುವಲ್ಲಿ ಮರಳಿ ನಾನೇಕೆ ಪ್ರಯತ್ನಮಾಡಲಿ?

ಯೋಗಾನಂದನ ಕಾರ್ಯವನ್ನೂ, ಆಲೋಚನೆಯನ್ನೂ, ಸಾಹಸವನ್ನೂ ಕೇಳಿ ಧರ್ಮದೇವನು ಬೆರಗಾಗಿ ತಲೆತಗ್ಗಿಸಿಕೊಂಡು ಮೌನವಾಗಿದ್ದನು. ಐವತ್ತಡಿಗಳ ಮಂದವಾದ ಗೋಡೆಯನ್ನು ಕೊರೆದು, ಅಲ್ಲಿಂದ ಸಮುದ್ರಕ್ಕೆ ದುಮ್ಮಿಕ್ಕಿ ಈಸಿಕೊಂಡು ದ್ವೀಪಾಂತರವನ್ನು ಸೇರುವ ಯೋಚನೆಯೂ, ಅದಕ್ಕಾಗಿ ಮಾಡಿದ ಸಾಹಸವೂ

ಧರ್ಮದೇವನಿಗೆ ಬಹಳ ಅದ್ಭುತವಾಗಿ ತೋರಿದುವು ಈ ತೆರದ ಆಲೋಚನೆಯು ಅವನಿಗೆ ಅವಾಗಲೂ ಹುಟ್ಟಿರಲಿಲ್ಲ ಇಷ್ಟು ಹೆಚ್ಚು ವಯಸ್ಸಾದವನೇ ಇಂಥ ಸಾಹಸ ವನ್ನು ಮಾಡಲು ಯತ್ನಪಟ್ಟನೆಂದರೆ ಯೌವನಸ್ಥನಾದ ನಾನು ಅವುದನ್ನು ತಾನೇ ಮಾಡಕೂಡದು ? ಕಾಲವೊದಗಿದರೆ ಸರ್ವಪ್ರಯತ್ನವನ್ನೂ ಮಾಡಿಯೇ ನೋಡು ವೆನು ಎಂದು ನಿಶ್ಚಯಿಸಿಕೊಂಡನು

ತಮಗನುಕೂಲವಾದ ಒಂದಾಲೋಚನೆಯನ್ನು ವಿಜ್ಞಾಪಿಸಿಕೊಳ್ಳುವೆನು ಎಂದು ಧರ್ಮದೇವನು ಅನ್ನುತ್ತಲೆ, ಯೋಗಾನಂದನು ಆಶ್ಚರ್ಯಪಟ್ಟು, ಏನು ಹೇಳು ಎಂದನು.

ಇಲ್ಲಿಂದ ಗೂಢಪಥಕ್ಕೆ ರಂಧ್ರಮಾಡಿ ಸಮಯ ನೋಡುತ್ತಲಿದ್ದು ಅಂಗಳದಲ್ಲಾ ವಾಗಲೂ ಕಾವಲಿರುವ ಇಬ್ಬರು ಸಿಪಾಯಿಗಳನ್ನು ಕೊಂದು, ಸಮುದ್ರದಲ್ಲಿ ಮುಳುಗಿ, ಸಮೀಪದಲ್ಲಿರುವ ಅವುದಾದರೂ ಒಂದು ದ್ವೀಪವನ್ನು ಸೇರಿದರ ಮುಂದ ಎಲ್ಲಾದರೂ ಹೋಗಿ ಜೀವಿಸಬಹುದು. ಇದಕ್ಕೆ ನಮಗೆ ಧೈರ್ಯವೂ ಸಾಹಸವೂ ಬೇಕು. ತಮ್ಮಲ್ಲಿ ಈ ಗುಣಗಳು ಇರುವುದು ನನಗೆ ಇಂದು ತಿಳಿಯಿತು, ನನ್ನಲ್ಲಿ ಇವು ಎಷ್ಟುಮಟ್ಟಿಗೆ ಇವೆಯೋ ಅದನ್ನು ತಮಗೆ ನಾನು ತೋರಿಸುವನು.

ನನ್ನ ಧೈರ್ಯವೂ ಸಾಹಸವೂ ಆವ ವಿಧವಾದುದೆಂಬುವುದನ್ನು ನೀನು ಸರಿಯಾಗಿ ತಿಳಿದಿಲ್ಲ, ಅವುಗಳನ್ನು ನ್ಯಾಯಮಾರ್ಗದಲ್ಲಿ ಉಪಯೋಗಿಸಿದರ ತಪ್ಪಿಲ್ಲ ಮತ್ತೊ ಬ್ಬನನ್ನು ಕೊಂದು ಸ್ವಾತಂತ್ರ್ಯವನ್ನು ಸಂಪಾದಿಸುವುದು ಮಹಾಪಾಪ

ನಮ್ಮ ಸ್ವಾತಂತ್ರ್ಯಕ್ಕ ಸಹಾಯವಾಗುವುದಾದರೆ ನಾವು ಏತಕ್ಕೆ ಆ ಕೃತ್ಯವನ್ನು ಮಾಡಕೂಡದು. ಕೊಲೆಯೇ ನಮ್ಮ ಮುಖ್ಯವಾದ ಉದ್ದೇಶವಲ್ಲವಷ್ಟೆ ?

ಅಪ್ಪಾ ! ನೀನಿನ್ನೂ ಹುಡುಗ, ನಿನಗೆ ಧರ್ಮಾಧರ್ಮಜ್ಞಾನವಿಲ್ಲ. ಲೋಕ ದೊಳು ಸ್ವಭಾವವಾಗಿ ಪ್ರಾಣಿಹತ್ಯವನ್ನು ಮಾಡಲು ಜನಗಳು ಹಿಂತೆಗೆಯುವರು ಅದು ಪಾಪಕೃತ್ಯವೆಂಬ ಜ್ಞಾನವೇ ಇದಕ್ಕೆ ಕಾರಣ ಕೋಪತಾಪಗಳಿಂದಲೂ ಸ್ವಾರ್ಥತೆ ಯಿಂದಲೂ ಅನೇಕರು ಕೊಲೆಗಳನ್ನು ನಡೆಸುವರು ಅವುಗಳೆಲ್ಲವೂ ಪಾಪಕೃತ್ಯಗಳೇ. ಬಂದಿಶಾಲೆಗಳಿಂದ ಉಪಾಯಮಾಡಿ ತಪ್ಪಿಸಿಕೊಂಡು ಹೋದ ಸಾಹಸಿಗಳ ಕಥೆಗ ಳನ್ನು ಅನೇಕ ದಿವಸಗಳಿಂದ ವಿಮರ್ಶಿಸಿ ನೋಡಿದೆನು ಅವರಿಗೆಲ್ಲಾ ದೈವಸಹಾಯ

ಪಿದ್ದಿತು. ಪಾಪಕೃತ್ಯವನ್ನು ಮಾಡಿದರೆ ದೈವಸಹಾಯವಿರುವುದಿಲ್ಲ ಆದುದರಿಂದ ನಾವು ಅನುಕೂಲಕಾಲವನ್ನು ನಿರೀಕ್ಷಿಸುತ್ತಿರೋಣ.

ಸ್ವಾಮೀ! ತಮಗೆ ಜ್ಞಾನವೂ ಬುದ್ಧಿಯೂ ಶಕ್ತಿಯೂ ವಿಶೇಷವಾಗಿರುವುದರಿಂದ ಕಾಲವನ್ನು ನಿರೀಕ್ಷಿಸಿಕೊಂಡಿದ್ದು ಕೆಲಸವನ್ನು ಮಾಡಬಲ್ಲಿರಿ. ಒಂದು ಏರ್ಪಾಡು ವಿಫಲವಾಗುತ್ತಲೇ, ಮತ್ತೊಂದನ್ನು ಯೋಚಿಸುವುದರಲ್ಲಿಯೂ ಯೋಚಿಸಿದ ಕಾರ್ಯ ವನ್ನು ನೆರವೇರಿಸುವುದರಲ್ಲಿಯೂ, ತಾವು ಕಾಲಯಾಪನೆ ಮಾಡುತ್ತಿರುವಿರಿ ನನಗೆ ಅಂತಹ ಯೋಚನೆಗಳೇ ತೋರುವುದಿಲ್ಲ, ನಾನು ಹೇಗೆ ಕಾಲವನ್ನು ಕಳೆಯಲಿ ?

ಕಾಲವನ್ನು ಕಳೆಯಲು ಇದು ಒಂದೇ ಉಪಾಯವೇ? ಓದಿ ಬರೆಯುವುದರಿಂದ ಸುಲಭವಾಗಿ ಕಳೆಯಬಹುದು

ಓದಿ ಬರೆಯಲು ತಮಗೆ ಬೇಕಾದ ಸಾಮಗ್ರಿಗಳಿರುವುವೋ?

ಆಹಾ! ಇವೆ "ಅವುಗಳನ್ನು ಆರು ಕೊಟ್ಟರು?"

ಕೊಡುವರಾರು? ನಾನೇ ಒದಗಿಸಿಕೊಂಡೆನು.

ತಮ್ಮ ಸಾಮಗ್ರಿಗಳನ್ನು ನಾನು ನೋಡಬೇಕಲ್ಲ?

ನೀನು ನನ್ನ ಕೂಪಕ್ಕೆ ಆವಾಗಲಾದರೂ ಬಂದರೆ ಅವುಗಳನ್ನೆಲ್ಲಾ ತೋರಿಸು ವೆನು. ನಾನು ಬರೆಯುತ್ತಲಿದ್ದ ದೊಡ್ಡ ಗ್ರಂಥವು ನೆನ್ನೆಯ ದಿವಸ ತಾನೇ ಪೂರೈಸಿತು.

ಅದನ್ನು ಅವುದರ ಮೇಲೆ ಬರೆದಿರುವಿರಿ?

ಸರ್ಕಾರದವರು ನನಗೆ ಕೊಟ್ಟ ಹಳೆಯ ಅಂಗಿಗಳ ಮೇಲೆ.

ಅದನ್ನು ಬರೆಯಬೇಕಾಗಿದ್ದರೆ ತಮಗೆ ವಿಶೇಷವಾಗಿ ಪುಸ್ತಕಗಳ ಸಹಾಯ ವಿದ್ದಿರಬೇಕು.

ನನ್ನಲ್ಲಿ ಹಿಂದೆ ಐದು ಸಾವಿರ ಗ್ರಂಥಗಳಿದ್ದುವು. ಅವುಗಳಲ್ಲಿ ಮುಖ್ಯವಾದುವು ನೂರ ಐವತ್ತು ಅವುಗಳನ್ನು ಚೆನ್ನಾಗಿ ಓದಿದರೆ ಸಾಕೆಂದು ನನಗೆ ತೋರಿದುದರಿಂದ ಮೂರು ವರ್ಷಗಳು ಕಷ್ಟಬಿದ್ದು ವ್ಯಾಸಂಗ ಮಾಡಿ ಆ ಬಲದಿಂದ ಈ ಗ್ರಂಥವನ್ನು ಬರೆದೆನು.

ತಾವು ಮಾತನಾಡುವುದನ್ನು ನೋಡಿದರೆ ತಮಗೆ ಅನೇಕಭಾಷೆಗಳ ಪರಿಚಯ ವಿರುವಂತೆ ತೋರುತ್ತದ

ಪ್ರಾಚೀನಭಾಷೆಗಳಾದ ಸಂಸ್ಕೃತ ಪ್ರಾಕೃತಗಳಲ್ಲದೆ ನಾಲ್ಕು ಭಾಷೆಗಳನ್ನು ಬಲ್ಲೆ. ಈಗ ಐದನೆಯ ಭಾಷೆಯನ್ನು ಕಲಿಯುತ್ತಲಿದ್ದೇನೆ

ಹೊಸ ಭಾಷೆಯನ್ನು ಕಲಿಯಬೇಕಾದರೆ ಪುಸ್ತಕವು ಬೇಡವೇ?

ಏನೂ ಅವಶ್ಯಕವಿಲ್ಲ ಇವೆಲ್ಲವೂ ಪ್ರಾಚೀನಭಾಷೆಗಳ ಆಭಾಸಗಳು ಪ್ರತಿಯೊಂದು ಭಾಷೆಯಲ್ಲಿಯೂ ಕೆಲವು ಹೊಸಪದಗಳಿರುವುವು, ಅವುಗಳನ್ನು ಜ್ಞಾಪಕದಲ್ಲಿಟ್ಟುಕೊಂಡಿದ್ದರೆ ಸಾಕು; ಆವ ಭಾಷೆಯನ್ನಾದರೂ ಸುಲಭವಾಗಿ ಕಲಿಯಬಹುದು

ಸ್ವಾಮೀ! ತಾವು ಮಹಾತ್ಮರು ನಾವಿಬ್ಬರೂ ಇಲ್ಲಿರುವ ವರೆಗೆ ನಾನು ತಮ್ಮ ಶಿಷ್ಯನಾಗಿ ಸ್ವಲ್ಪ ಜ್ಞಾನವನ್ನು ಸಂಪಾದಿಸಬೇಕೆಂಬ ಆಸೆಯಾಗುತ್ತಿದೆ. ತಮ್ಮ ಕೂಪಕ್ಕೆ ಬಂದು ತಮ್ಮ ಕಾರ್ಯಗಳನ್ನು ನೋಡಬೇಕೆಂದು ಬಹು ಕುತೂಹಲವುಳ್ಳವನಾಗಿದ್ದೇನೆ. ಆವಾಗ ಬರಲಿ?

ಈಗಲೇ ನಡೆ, ಹೋಗೋಣ

---

## ಹದಿನೈದನೆಯ ಅಧ್ಯಾಯ

### ಸನ್ಯಾಸಿಯ ಕತ್ತಲೆಯ ಬಿಲ.

ಸನ್ಯಾಸಿಯು ತನ್ನ ಬಿಲಕ್ಕೆ ಸುರಂಗದ ಮೂಲಕವಾಗಿ ಮೊದಲು ಹೊರಟನು, ಅವನ ಹಿಂದೆ ಧರ್ಮದೇವನೂ ಹೋದನು ಈ ಸುರಂಗದಲ್ಲಿ ಕೆಲವು ಕಡೆ ಬಗ್ಗಿಯೂ, ಕೆಲವು ಕಡೆ ಕುಳಿತೂ, ಕೆಲವು ಕಡೆ ಹಿರಿದು ಕೊಂಡೂ ಹೋಗಬೇಕಾಗಿ ಇದ್ದಿತು ಬಿಲವನ್ನು ಸೇರಿದ ಒಡನೆ ಧರ್ಮದೇವನು ಅದರ ನಾಲ್ಕು ಕಡೆಯನ್ನೂ ದೃಷ್ಟಿಸಿ ನೋಡಿ ಇದೂ ತನ್ನ ಬಿಲದಂತೆಯೇ ಇರುವುದು ಎಂದುಕೊಂಡನು.

ಈಗ ಸರಿಯಾಗಿ ಹನ್ನೆರಡೂ ಕಾಲು ಗಂಟೆ, ಸಾಯಂಕಾಲದವರಗೂ ನಮಗೆ ಅವಕಾಶವಿರುವುದು ಎಂದು ಆನಂದನು ಹೇಳಲು, ಧರ್ಮದೇವನು ಸುತ್ತು ಮುತ್ತಲೂ ತಿರುಗಿ ನೋಡಿದನು ಅದನ್ನು ಕಂಡು ಯೋಗಾನಂದನು ನಸು ನಕ್ಕು ನೀನು ನನ್ನ ಗಡಿಯಾರವೆಲ್ಲಿದೆ ಎಂದು ನೋಡುವಂತಿದೆ ಇದೇ ನನ್ನ ಗಡಿಯಾರವು ಎಂದು ಗೋಡೆಯ ಮೇಲೆ ತಾನು ಹಾಕಿದ್ದ ಗೆರೆಗಳನ್ನೂ, ಅದರ ಮೇಲೆ ಬಿಲದ ಕಿಟಕಿಯಿಂದ

ಬೀಳುತ್ತಲಿರುವ ಸೂರ್ಯರಶ್ಮಿಯನ್ನು ಧರ್ಮದೇವನಿಗೆ ತೋರಿಸಿ, ಭೂಮಿಯ ಉಭಯ ಗತಿಗಳನ್ನನುಸರಿಸಿ ಈ ರೇಖೆಗಳನ್ನು ಹಾಕಿರುವೆನು. ಗಡಿಯಾರಗಳು ಅನೇಕಕಾರಣಗಳಿಂದ ನಿಂತು ಹೋಗುವುವು, ಸೂರ್ಯನೂ ಭೂಮಿಯೂ ತಮ್ಮ ತಮ್ಮ ಗತಿಗಳನ್ನು ಬಿಟ್ಟು ಎಂದಿಗೂ ನಿಲ್ಲುವುದಿಲ್ಲ ಆದುದರಿಂದ ಈ ಗಡಿಯಾರವು ಆವಾಗಲೂ ಸರಿಯಾದ ಕಾಲವನ್ನೇ ತೋರಿಸುವುದು ಎಂದನು.

ಸ್ವಾಮೀ! ತಾವು ಈಗ ಭೂಮಿಯ ಉಭಯಗತಿ ಎಂದು ಹೇಳಿದುದು ನನಗೆ ಅರ್ಥವೇ ಆಗಲಿಲ್ಲ, ದಯೆಮಾಡಿ ಅದನ್ನು ಸ್ವಲ್ಪ ತಿಳಿಸಬೇಕು.

ಅಪ್ಪಾ! ಸೂರ್ಯನು ಆವಾಗಲೂ ಸ್ಥಿರನಾಗಿರುವನು. ಭೂಮಿಯು ಪ್ರತಿ ದಿನವೂ ತನ್ನನ್ನು ತಾನು ಒಂದು ಸಾರಿ ಸುತ್ತುವುದಲ್ಲದ ವರ್ಷಕ್ಕೊಮ್ಮೆ ಸೂರ್ಯನನ್ನೂ ಸುತ್ತುವುದು. ಇದೀಗ ಭೂಮಿಯ ಉಭಯಗತಿ ಇದು ಹಾಗಿರಲಿ. ನನ್ನ ಭಂಡಾರ ವನ್ನು ನೋಡು ಬಾ ಎಂದು ಆತನನ್ನು ಒಂದು ಮೂಲೆಗೆ ಕರೆದುಕೊಂಡು ಹೋಗಿ, ಅಲ್ಲಿ ನೆಲಕ್ಕೆ ಹಾಸಿದ್ದ ಒಂದು ಕಲ್ಲನ್ನೆತ್ತಿ ತಾನು ಇಂದ್ರಪ್ರಸ್ಥದ ವಿಚಾರವಾಗಿ ಸುಮಾರು ಇಪ್ಪತ್ತು ಇಪ್ಪತ್ತೈದು ಹಳೆಯ ಅಂಗಿಯ ತುಂಡುಗಳಲ್ಲಿ ಬರೆದಿದ್ದ ಗ್ರಂಥವನ್ನು ತೋರಿಸಿ ದನು. ಅವುಗಳಿಗೆ ಪುಟಸಂಖ್ಯೆಗಳನ್ನು ಹಾಕಿ ಸರಿಯಾಗಿ ಜೋಡಿಸಿ ಹೊಲಿದಿದ್ದನು. ಪುಸ್ತಕವನ್ನು ಓದಲು ಧರ್ಮದೇವನಿಗೆ ಬರುತ್ತಿರಲಿಲ್ಲವಾಗಿ, ಅವನು ಅದನ್ನು ನೋಡಿ ಆಶ್ಚರ್ಯಪಟ್ಟು, ಇದನ್ನು ಬರೆಯಲು ತಮಗೆ ಲೇಖಿಣಿ ಮಸಿ ಇವುಗಳು ಎಲ್ಲಿದ್ದುವು ಎಂದು ಕೇಳಿದನು.

ಇಗೋ, ನನ್ನ ಲೇಖಿಣಿಯನ್ನು ನೋಡು. ಇದನ್ನು ಇಲ್ಲಿ ಸಿಕ್ಕಿದ ಮೀನಿನ ಎಲುಬಿನಿಂದ ಮಾಡಿದೆನು. "ಮಸಿಯೋ?"

ನನಗೆ ವಾರಕ್ಕೊಂದಾವೃತ್ತಿ ಕೊಡುವ ದ್ರಾಕ್ಷಾರಸದಲ್ಲಿ ಸ್ವಲ್ಪವನ್ನು ಮಿಗಿಸಿ ಈ ಮೂಲೆಯಲ್ಲಿ ಹೊಗೆ ಹತ್ತಿದ ಗೋಡೆಯನ್ನು ಕೆರೆದು ಬಂದ ದೂಳನ್ನು ಕಲೆಸಿ ಮಸಿಯನ್ನು ಮಾಡಿಕೊಳ್ಳುವೆನು.

ಲೇಖಿಣಿಯನ್ನು ಮಾಡಲು ನಿಮಗೆ ಚೂರಿಯು ಎಲ್ಲಿ ಸಿಕ್ಕಿತು?

ಇಲ್ಲಿದ್ದ ಒಡಕು ಉಕ್ಕಿನ ದೀಪಸ್ತಂಭದಿಂದ ಈ ಎರಡು ಚೂರುಗಳನ್ನು ಮಾಡಿ ದೆನು. ಇದರಲ್ಲಿ ಸಣ್ಣದು ಬಹಳ ಕೂರಾಗಿರುವುದು.

ಇಷ್ಟು ಕೆಲಸಗಳನ್ನು ಮಾಡಲು, ತಮಗೆ ಹಗಲು ಹೊತ್ತು ಸಾಕಾಗುತಲಿದ್ದಿತೋ?

ಹಗಲು ಹೊತ್ತು ಸಾಗದಿದ್ದರೆ ರಾತ್ರಿಯೂ ಕೆಲಸಮಾಡುವೆನು.

ಬೆಳಕಿಲ್ಲದೆ ಕೆಲಸಮಾಡುವುದು ಹೇಗೆ?

ಸರ್ಕಾರದವರು ರೊಟ್ಟಿಯ ಸಂಗಡ ನನಗೆ ಕೊಡುತ್ತಿದ್ದ ತುಪ್ಪವನ್ನು ಕೂಡಿಸಿ ಇಟ್ಟುಕೊಂಡು ಅದರಲ್ಲಿ ಚಿಂದಿ ಬಟ್ಟೆಗಳನ್ನು ಅದ್ದಿ ಬತ್ತಿಮಾಡಿಟ್ಟುಕೊಂಡು ಬೇಕಾದಾಗ ಉಪಯೋಗಿಸಿಕೊಳ್ಳುವೆನು

ದೀಪ ಹೊತ್ತಿಸಲು ಬೆಂಕಿಯೆಲ್ಲಿಯದು?

ಇಲ್ಲಿ ಹಾಸಿದ್ದ ಕಲ್ಲುಗಳಲ್ಲಿ ಒಂದು ಚಕ್ಕಮುಕ್ಕಿ ಇದ್ದಿತು ಅದರಲ್ಲಿ ಒಂದು ಚೂರನ್ನೂ, ಈ ಉಕ್ಕಿನ ಚೂರನ್ನೂ, ಅಷ್ಟು ಹಳೆಯ ಚಿಂದಿ ಬಟ್ಟೆಗಳನ್ನೂ ಇಟ್ಟಿದ್ದೇನೆ. ಬೇಕಾದಾಗ ಇವುಗಳಿಂದ ಬೆಂಕಿಯನ್ನು ಮಾಡಿ ದೀಪವನ್ನು ಹೊತ್ತಿಸುವೆನು.

ತನಗೆ ತೋರಿಸಿದ್ದ ಪದಾರ್ಥಗಳನ್ನೆಲ್ಲಾ ಒಂದೊಂದಾಗಿ ನೋಡಿ ವಿಸ್ಮಯಗೊಂಡು ಧರ್ಮದೇವನು ಅವುಗಳನ್ನು ಯಥಾಸ್ಥಾನದಲ್ಲಿಟ್ಟು, ಆಹಾ! ಏನು ಬುದ್ಧಿ! ಎಂಥ ಸಾಹಸ! ಎಂದು ತಲೆಯನ್ನು ತಗ್ಗಿಸಿಕೊಂಡು ಸುಮ್ಮನೆ ನಿಂತಿದ್ದನು.

ಏನಾದರೂ ಅಪಾಯ ಸಂಭವಿಸಿದರೆ ಎಲ್ಲಿ ಎಲ್ಲಾ ಒಟ್ಟಿಗೆ ಹೋಗುವುದೋ ಎಂಬ ಭಯದಿಂದ, ನನ್ನ ಆಸ್ತಿಯನ್ನೆಲ್ಲಾ ಒಂದೇ ಕಡೆ ಇರಿಸದೆ ವಿಶೇಷವಾಗಿ ಬಳಕೆಗೆ ಬರತಕ್ಕ ಮತ್ತೊಂದನ್ನು ಬೇರೆ ಕಡೆ ಇಟ್ಟಿರುತ್ತೇನೆ ಅದನ್ನು ತೋರಿಸುವೆನು, ಇತ್ತ ಬಾ ಎಂದು ಆನಂದನು ಧರ್ಮದೇವನನ್ನು ಮತ್ತೊಂದು ಮೂಲೆಗೆ ಕರೆದುಕೊಂಡು ಹೋಗಿ, ಅಲ್ಲಿ ಮತ್ತೊಂದು ಕಲ್ಲನ್ನೆತ್ತಿ ಸುಮಾರು ನಲವತ್ತು ಐವತ್ತು ಅಡಿಗಳುದ್ದವಿರುವ ಒಂದು ನೂಲೇಣಿಯನ್ನು ತೋರಿಸಿದನು ಧರ್ಮದೇವನು ಅದನ್ನು ಕೈಯಲ್ಲಿ ತೆಗೆದು, ಎಳೆದು ನೋಡಿ, ಇದು ಇಬ್ಬರ ಭಾರವನ್ನು ತಡೆಯುವಂತೆ ತೋರುತ್ತದೆ; ಇದನ್ನು ಮಾಡಲು ತಮಗೆ ದಾರವೆಲ್ಲಿದ್ದಿತು ಎಂದನು

ಅಪ್ಪಾ! ಅದನ್ನು ಹೇಳುವೆನು ಕೇಳು. ಈ ಸೆರೆಮನೆಯಲ್ಲಿ ವರ್ಷಕ್ಕೊಂದಾವೃತ್ತಿ ಬಂದಿಗಳಿಗೆ ಹೊಸಬಟ್ಟೆಯನ್ನು ಕೊಡುತ್ತಾರಷ್ಟೆ ನಮ್ಮಲ್ಲಿ ನಿಲ್ಲುವ ಹಳೆಯ ಬಟ್ಟೆಗಳ ದಾರಗಳನ್ನೆಲ್ಲಾ ಒಂದೊಂದಾಗಿ ಬಿಡಿಸಿ ತೆಗೆದು ಅವುಗಳಿಂದ ಇದನ್ನು ಮಾಡಿದೆನು.

ಇದನ್ನು ಮಾಡಲು ಎಷ್ಟು ವರ್ಷಗಳಾದುವು?

ಹತ್ತು. "ಇದರಿಂದೇನು ಪ್ರಯೋಜನ?"

ಅಪ್ಪಾ! ಮೊತ್ತ ಮೊದಲು ನಾನು ಈ ಬಿಲದ ಕಿಟಕಿಗಳನ್ನು ಕಿತ್ತು ಈ ಏಣಿಯ ಸಾಹಾಯ್ಯದಿಂದ ಕೆಳಗೆ ಇಳಿದು ಓಡಿಹೋಗಬೇಕೆಂದು ಯೋಚನೆ ಮಾಡಿದ್ದೆನು; ಕಿಟಕಿಯಿಂದ ಅಂಗಳಕ್ಕೇ ಇಳಿಯಬೇಕಾದುದರಿಂದಲೂ ಅಲ್ಲಿ ಆವಾಗಲೂ ಒಬ್ಬ ಸಿಪಾಯಿ ಕಾವಲಿರುವುದರಿಂದಲೂ ಆ ಯೋಚನೆಯನ್ನು ಬಿಟ್ಟೆನು

ಆನಂದನು ಈ ಮಾತನ್ನಾಡುತ್ತಿದ್ದಾಗ ಧರ್ಮದೇವನು ಇಷ್ಟು ಬುದ್ಧಿಯೂ, ಸಾಹಸವೂ, ದೂರಾಲೋಚನೆಯೂ ಇರುವ ಈ ಮಹಾತ್ಮನು ತನ್ನ ವಿಪತ್ತು ಹೇಗೆ ಆಯಿತು, ಆರಿಂದಲಾಯಿತು, ಎಂಬುದನ್ನು ಸ್ಪಷ್ಟಪಡಿಸಬಹುದೆಂದು ಯೋಚಿಸುತ್ತ ಲಿದ್ದನು. ಅದನ್ನು ಯೋಗಾನಂದನು ಕಂಡು, ಅಪ್ಪಾ! ನಿನ್ನನ್ನು ನೋಡಿದರೆ ಏನೋ ಆಲೋಚನೆ ಮಾಡುತ್ತಿರುವನಂತೆ ತೋರುತ್ತದೆ; ಏನು ಹೇಳು ಎಂದನು.

ಸ್ವಾಮೀ! ನನಗುಂಟಾದ ಆಲೋಚನೆಗಳೆರಡು. ಮೊದಲನೆಯದು, ಆವ ಅನುಕೂಲವೂ ಇಲ್ಲದೆ, ಈ ಕೂಪದಲ್ಲಿದ್ದುಕೊಂಡೂ ಇಷ್ಟು ಕೆಲಸಗಳನ್ನು ಮಾಡಿದ ನೀವು ಸ್ವತಂತ್ರರಾಗಿದ್ದಿದ್ದರೆ ಇನ್ನೂ ಏನೇನ ಮಾಡುತ್ತಿದ್ದಿರೋ ಎಂದು ಯೋಚಿಸುತ್ತಿದ್ದೆನು.

ಸ್ವೇಚೆಯಾಗಿದ್ದಿದ್ದರೆ ಆವುದನ್ನೂ ಮಾಡಿರಲಾರೆನು. ಆಗ ನನ್ನ ಬುದ್ಧಿಯು ಚಂಚಲವಾಗಿ, ಏಕಾಗ್ರಚಿತ್ತತೆಯು ತಪ್ಪಿ, ಆವ ಕೆಲಸವೂ ಸಾಗುತ್ತಿರಲಿಲ್ಲ. ಕಾಳ ಮೇಘಗಳು ಆಕಾಶದಲ್ಲಿ ಎಷ್ಟೋ ಇದ್ದರೂ ಅವುಗಳು ಒಟ್ಟುಗೂಡಿ ಮುಸೆದಲ್ಲದೆ ಸಿಡಿಲಿಲ್ಲ; ಸಿಡಿಲಿಲ್ಲದೆ ಬೆಳಕಿಲ್ಲ.

ಸ್ವಾಮೀ! ತಾವು ಈಗ ಅಪ್ಪಣೆ ಕೊಡಿಸಿದುದು ನನಗೆ ತಿಳಿಯಲಿಲ್ಲ

ನಿನ್ನ ಆಲೋಚನೆಗಳಲ್ಲಿ ಒಂದನ್ನು ಹೇಳಿದೆ; ಮತ್ತೊಂದಾವುದು?

ತಮ್ಮ ವಿಷಯವನ್ನೆಲ್ಲಾ ದಯೆಯಿಂದ ತಾವು ನನಗೆ ತಿಳಿಸಿದಿರಿ. ನನ್ನ ಸಮಾಚಾರವೇನೆಂದು ತಾವು ಕೇಳಲೇ ಇಲ್ಲವಲ್ಲಾ?

ಇಷ್ಟು ಸಣ್ಣವನ ಸಮಾಚಾರವು ವಿಶೇಷವಾಗಿರಲಾರದು.

ವಯಸ್ಸು ಚಿಕ್ಕದಾಗಿದ್ದರೂ ಕಷ್ಟಾನುಭವವು ವಿಶೇಷವಾಗಿರುವುದು ಈ ಕಷ್ಟಕ್ಕೆ ನನ್ನನ್ನು ಗುರಿಮಾಡಿದವರಾರು? ಅದಕ್ಕೆ ಕಾರಣವೇನು? ಇದು ಮನುಷ್ಯ

ರಿಂದಾದುದೋ, ದೈವಕೃತವೋ? ಮನುಷ್ಯಕೃತವಾಗಿದ್ದರೆ ದೇವರನ್ನು ನಿಂದಿಸುವುದು ತಪ್ಪು.

ದೇವರು ಎಂದಿಗೂ ಅನ್ಯಾಯ ಮಾಡುವುದಿಲ್ಲ ನಮಗೆ ಬರುವ ಸಂಕಟಗಳೆಲ್ಲಾ ನಮ್ಮ ಪೂರ್ವಜನ್ಮದ ಕರ್ಮದಿಂದುಂಟಾಗುವುವು. ಅದಕ್ಕಾಗಿ ನಾವು ದೇವರನ್ನು ನಿಂದಿಸಬಾರದು. ಇದನ್ನು ಚೆನ್ನಾಗಿ ತಿಳಿದಿರು ನಿನ್ನ ಮೇಲೆ ಅವ ತಪ್ಪೂ ಇಲ್ಲವೆಂದು ದೃಢವಾಗಿ ಹೇಳಬಲ್ಲೆಯೋ?

ಸ್ವಾಮೀ! ಈ ಲೋಕದಲ್ಲಿ ನನ್ನ ವಿಶ್ವಾಸಕ್ಕೆ ಪಾತ್ರನಾದವನು ನನ್ನ ತಂದೆ, ನನ್ನ ಪ್ರೀತಿಗೆ ಪಾತ್ರಳಾದವಳು ಲಲಿತಾಂಗಿ, ಇವರಿಬ್ಬರಾಣೆಗೂ ನಾನು ಅವ ತಪ್ಪನ್ನೂ ಮಾಡಿದವನಲ್ಲ.

ಹಾಗಾದರೆ ಸರಿ ನಿನ್ನ ಸಮಾಚಾರವನ್ನು ವಿಸ್ತಾರವಾಗಿ ಹೇಳು ಎಂದು ಆನಂದನು ಧರ್ಮದೇವನನ್ನು ತನ್ನ ಮಂಚದ ಮೇಲೆ ಕುಳ್ಳಿರಿಸಿಕೊಂಡನು.

ಧರ್ಮದೇವನು ಮೊದಲಿನಿಂದ ತನ್ನ ಕಥೆಯನ್ನು ಆನಂದನಿಗೆ ವಿಸ್ತಾರವಾಗಿ ಹೇಳಿದನು. ಅದನ್ನು ಕೇಳಿ ಆನಂದನು ಸ್ವಲ್ಪ ಹೊತ್ತು ಆಲೋಚಿಸಿ, ನಾನು ಮೊದಲೇ ನಿನಗೆ ಒಂದು ನೀತಿಯನ್ನು ಹೇಳಿದ್ದೆ, ಅದನ್ನು ಈಗ ವಿಶದವಾಗಿ ಹೇಳುವೆನು ಕೇಳು. ಮನುಷ್ಯರು ತಮ್ಮ ಸಹಜಬುದ್ಧಿಯುಳ್ಳಿರುವ ವರೆಗೆ ದುರ್ಮಾರ್ಗಕ್ಕೆ ಹೋಗಲು ಹಿಂತೆಗೆಯುವರು. ಜನ್ಮಾಂತರದ ಪಾಪವಾಸನೆಯಿಂದ ನೀಚಬುದ್ಧಿಯುಂಟಾಗಿ ದುರಾಲೋಚನೆಗಳು ಬೇರೂರಿ ಸದಸದ್ವಿವೇಕವು ಅಳಿಸಿ ಹೋದರೆ, ದುರ್ಮಾರ್ಗಪ್ರವೃತ್ತರಾಗುವರು. ನಮ್ಮ ಈ ಕೃತ್ರಿಮನಾಗರಕತೆಯು ದುರಾಸೆಯನ್ನೂ ಸ್ವಾರ್ಥತೆಯನ್ನೂ ಹುಟ್ಟಿಸಿ ಸದ್ಗುಣಗಳನ್ನು ಅಳಿಸಿ ನಮ್ಮನ್ನು ದುರ್ಮಾರ್ಗಕ್ಕೆ ತಳ್ಳುವುದು. ಇಂಥವರು ಪ್ರಯೋಜನವಿಲ್ಲದ ಅಧರ್ಮಪ್ರವೃತ್ತರಾಗರು ಈಗ ನಿನ್ನ ವಿಷಯವನ್ನು ಸ್ವಲ್ಪ ಯೋಚಿಸೋಣ ನೀನು ಕೆಟ್ಟುದರಿಂದ ಅರಿಗೆ ಸಂತೋಷವಾಗುತ್ತಿದ್ದಿತು?

ಸ್ವಾಮೀ! ನನ್ನಂಥ ನಿರ್ಭಾಗ್ಯನು ಕೆಟ್ಟುದರಿಂದ ಆರಿಗೂ ಏನೂ ಪ್ರಯೋಜನವಿಲ್ಲ.

ಅದೀಗ ಅವಿವೇಕದ ಮಾತು ಅದನ್ನು ನಾನು ಒಪ್ಪುವುದಿಲ್ಲ. ಲೋಕದಲ್ಲಿ ಅಭಿಷಿಕ್ತನಾದ ರಾಜನು ಮೊದಲು ಕಸಗುಡಿಸುವವನ ವರೆಗೂ ಅವರವರ ಕೆಲಸಗಳನ್ನು

ಅವರವರ ಉತ್ತರಾಧಿಕಾರಿಗಳು ಬಯಸುತ್ತಲಿರುವರು ನೀನು ಜಯಲಕ್ಷ್ಮಿಯ ನೌಕಾಧಿಪತ್ಯವನ್ನು ಹೊದ್ದುವುದರಲ್ಲಿದ್ದೆ ಎಂದು ಹೇಳಿದೆ; ಇವೆರಡನ್ನೂ ಅಗಗೊಡಿಸದವರು ಸ್ವಾರ್ಥಪರರಾಗಿರಬೇಕು ಅವರಾರು ಹೇಳು, ನೋಡೋಣ.

ಸ್ವಾಮೀ! ಜಯಲಕ್ಷ್ಮಿಯಲ್ಲಿದ್ದ ನಾವಿಕರು ಮೊದಲಾಗಿ ಎಲ್ಲರೂ ನನ್ನಲ್ಲಿ ವಿಶೇಷಾಭಿಮಾನವನ್ನು ತೋರಿಸುತ್ತಲಿದ್ದರೇ ವಿನಾ ಅಸೂಯಾಪರರಾಗಿರಲಿಲ್ಲ

ನೀನು ಅಲ್ಲಿಯೇ ಇದ್ದು ನಿನಗೆ ನೌಕಾಧಿಪತ್ಯವೂ ದೊರೆಕಿದ್ದು, ನಿನ್ನ ಇಷ್ಟ ಬಂದವರನ್ನು ನಿನ್ನ ಕೈ ಕೆಳಗೆ ಇಟ್ಟುಕೊಳ್ಳಲು ಸ್ವಾತಂತ್ರ್ಯವೂ ಇದ್ದಿದ್ದರೆ, ಜಯಲಕ್ಷ್ಮಿಯಲ್ಲಿದ್ದವರನ್ನೆಲ್ಲಾ ನಿನ್ನ ಬಳಿ ಇರಿಸಿಕೊಳ್ಳುತಲಿದ್ದಯೋ?

ಒಬ್ಬನು ವಿನಾ ಮಿಕ್ಕಾದವರನ್ನೆಲ್ಲಾ ಇಟ್ಟುಕೊಳ್ಳುತಲಿದ್ದೆ.

ಇದೀಗ ಸರಿಯಾದ ಮಾತು ಆ ಒಬ್ಬನ ಹೆಸರೇನು? ಅವನನ್ನು ಏತಕ್ಕೋಸ್ಕರ ನೀನು ಇಟ್ಟುಕೊಳ್ಳುತ್ತಿರಲಿಲ್ಲ?

ಅವನ ಹೆಸರು ದುರ್ಮತಿ ಅವನು ಅನ್ಯಾಯವಾಗಿ ಒಂದು ದಿವಸ ನನ್ನ ಸಂಗಡ ಜಗಳವಾಡಿದ್ದನು. ಇದಲ್ಲದೆ ಸುಳ್ಳು ಲೆಕ್ಕಗಳನ್ನು ಬರೆಯುತ್ತಲಿದ್ದನು.

ಸಮುದ್ರದಲ್ಲಿ ಮೃತಪಟ್ಟ ನೌಕಾಧಿಪನ ಸಂಗಡ ನೀನು ಮಾತನಾಡುತಲಿದ್ದಾಗ ಮತ್ತಾರಾದರೂ ಇದ್ದರೋ?

ಆರೂ ಇರಲಿಲ್ಲ

ನಿಮ್ಮ ಮಾತನ್ನು ಆರಾದರೂ ಕೇಳುತ್ತಲಿದ್ದರೋ? ಅಥವಾ ಕೇಳಬಹುದಾದ ಸಂಭವವಿದ್ದಿತೋ?

ನೌಕಾಧಿಪನ ಕೊಟ್ಟಡಿಯ ಬಾಗಿಲು ತೆರೆದಿದ್ದ ಕಾರಣ ನಮ್ಮ ಮಾತು ಇತರರ ಕಿವಿಗೆ ಬಿದ್ದಿರಬಹುದು ಆಹಾ! ಈಗ ಜ್ಞಾಪಕಕ್ಕೆ ಬಂದಿತು; ಆ ಕೊಟ್ಟಡಿಯ ಸಮೀಪದಲ್ಲಿ ದುರ್ಮತಿಯು ಓಡಾಡುತ್ತಲಿದ್ದನು

ನೀನು ಏಲಾದ್ವೀಪಕ್ಕೆ ಹೋದಾಗ ನಿನ್ನ ಜತೆಯಲ್ಲಿ ಆರನ್ನಾದರೂ ಕರೆದು ಕೊಂಡು ಹೋಗಿದ್ದೆಯೋ? "ಇಲ್ಲ."

ಆ ದ್ವೀಪದಲ್ಲಿ ಕೊಡಬೇಕೆಂದು ನಿನ್ನ ಕೈಯಲ್ಲಿ ಕೊಟ್ಟಿದ್ದ ಕಾಗದದ ಕಟ್ಟನು ಏನು ಮಾಡಿದೆ?

ಅದನ್ನು ನನ್ನ ಕೈಯಲ್ಲಿಯೇ ಇಟ್ಟುಕೊಂಡು ಹೋದೆನು.

ಆ ದ್ವೀಪದಲ್ಲಿ ಕೊಟ್ಟ ಲೇಖನವನ್ನು ಏನ ಮಾಡಿದೆ?

ಅದನ್ನೂ ನನ್ನ ಕೈಯಲ್ಲೇ ಇಟ್ಟುಕೊಂಡು ಬಂದನು

ಹಾಗಾದರೆ ನೀನು ಏಲಾದ್ವೀಪಕ್ಕೆ ತೆಗೆದುಕೊಂಡು ಹೋದ ಕಾಗದದ ಕಟ್ಟನ್ನೂ ಅಲ್ಲಿಂದ ತಂದ ಲೇಖನವನ್ನೂ ಹಡಗಿನವರೆಲ್ಲರೂ ನೋಡಿರಬಹುದೇ? "ಇರಬಹುದು."

ಇಲ್ಲಿಯ ವರೆಗೆ ಒಂದು ರೀತಿಯಾಗಿ ಸಂಗತಿಯು ಕ್ರಮವಾಗಿ ತಿಳಿಯಿತು, ಮುಂದೆ ನೋಡೋಣ. ನಿನಗೆ ವಿರೋಧವಾಗಿ ಸರಕಾರಕ್ಕೆ ಬರೆದಿದ್ದ ಕಾಗದದಲ್ಲಿ ಏನು ಇದ್ದಿತು?

ನ್ಯಾಯಾಧಿಪನು ತನ್ನ ಕೈಯಲ್ಲಿ ಓದಲು ಕೊಟ್ಟಿದ್ದಾಗ ಧರ್ಮದೇವನು ಅದನ್ನು ಮೂರು ನಾಲ್ಕಾವೃತ್ತಿ ಓದಿದ್ದನಾದುದರಿಂದ ಅದರಲ್ಲಿ ಬರೆದಿದ್ದುದನ್ನು ಎಳ್ಳಷ್ಟು ಕೂಡ ತಪ್ಪದೆ ಹೇಳಿದನು. ಆನಂದನು ಅದನ್ನು ಕೇಳಿ ಈಗ ಎಲ್ಲವೂ ಸ್ಪಷ್ಟವಾಯಿತು ಎಂದನು.

ಅದು ಹೇಗೆ? "ದುರ್ಮತಿಯು ಹೇಗೆ ಬರೆಯುತ್ತಲಿದ್ದನು?"

ಅವನು ಮೋಡಿ ಅಕ್ಷರ ಬರೆಯುತ್ತಲಿದ್ದನು

ಸರ್ಕಾರಕ್ಕೆ ಬರೆದಿದ್ದ ಲೇಖನವು ಹೇಗಿದ್ದಿತು?

ಅಕ್ಷರಗಳು ಮೋಡಿಯಾಗಿದ್ದರೂ ಅವೆಲ್ಲವೂ ಎಡಗಡೆಗೆ ವಾಲಿದ್ದವು

ಸ್ವಲ್ಪ ತಾಳು ಎಂದು ಹೇಳಿ, ಆನಂದನು ಎದ್ದು ಬರೆಯುವ ಸಾಮಗ್ರಿಗಳನ್ನು ತಂದು, ಧರ್ಮದೇವನು ಹೇಳಿದುದನ್ನು ಎಡಗೈಯಿಂದ ಬರೆದು ಕೊಟ್ಟನು ಅದನ್ನು ನೋಡಿ ಧರ್ಮದೇವನು ಪರಮಾಶ್ಚರ್ಯಪಟ್ಟು, ಸ್ವಾಮೀ! ತಮ್ಮ ಅಕ್ಷರವೂ ಆ ಅಕ್ಷರ ದಂತೆಯೇ ಇರುವುದು ಅದನ್ನೂ ತಾವೇ ಬರೆದಿರಬಹುದೆಂದು ಹೇಳಲು ಏನೂ ಅಡ್ಡಿ ಇಲ್ಲ ಎಂದನು

ಅಪ್ಪಾ! ಇದರಲ್ಲಿ ಒಂದು ರಹಸ್ಯವಿದೆ.

ಅದೇನು?

ಬಲಗೈಯಲ್ಲಿ ಬರೆದ ಪ್ರತಿಯೊಬ್ಬನ ಅಕ್ಷರಕ್ಕೂ ವ್ಯತ್ಯಾಸವಿದ್ದರೂ, ಎಡಗೈ ಯಿಂದ ಬರೆದುದು ಒಂದೇ ರೀತಿಯಾಗಿರುವುದು. ಈಗ ಒಂದು ವಿಚಾರವು ಮುಗಿ

ಯಿತು, ಮತ್ತೊಂದನ್ನು ನೋಡೋಣ ನಿನ್ನ ಮದುವೆಯು ತಪ್ಪಿದುದರಿಂದ ಆರಿಗಾದರೂ ಅನುಕೂಲವ್ರೋ?

ಅನ್ಯದೇಶದವನೊಬ್ಬನು ಲಲಿತಾಂಗಿಯನ್ನು ಮೋಹಿಸಿದ್ದನು.

ಅವನ ಹೆಸರೇನು? "ವಿಷಯಲಂಪಟ."

ಸರ್ಕಾರಕ್ಕೆ ಬರೆದ ಆ ಲೇಖನವನ್ನು ಅವನು ಬರೆದಿರಬಹುದೋ?

ಅವನು ಅಷ್ಟು ಬರವಣಿಗೆಯುವನಲ್ಲವೆಂದು ತೋರುತ್ತದೆ. ಇದಲ್ಲದೆ ಅದರಲ್ಲಿ ಬರೆದಿದ್ದ ಸಮಾಚಾರಗಳು ಅವನಿಗೆ ಗೊತ್ತಿರಲಿಲ್ಲ. ಮೇಲೂ, ಅವನು ನನ್ನನ್ನು ಇರಿದು, ಕೊಂದು ಹಾಕಿ, ಅವಳನ್ನು ಮದುವೆಯಾಗುತ್ತಲಿದ್ದನೇ ವಿನಾ ಇಂಥ ಕೆಲಸಗಳನ್ನು ಮಾಡುತ್ತಿರಲಿಲ್ಲ

ಹಾಗಾದರೆ ಈ ಕಾಗದವನ್ನು ದುರ್ಮತಿಯೇ ಬರೆದಿರಬೇಕು.

ಈಗ ನನಗೂ ಹಾಗೇ ತೋರುತ್ತದೆ.

ದುರ್ಮತಿಗೂ ವಿಷಯಲಂಪಟನಿಗೂ ಪರಿಚಯವಿದ್ದಿತೋ?

ಹಾ! ಹೂ, ಇದ್ದಿತು ಅವರಿಬ್ಬರೂ ಮತ್ತೊಬ್ಬ ಕುಡುಕನೂ ಲೇಖನದ ಸಾಮಗ್ರಿಗಳನ್ನು ಇಟ್ಟುಕೊಂಡು ಒಂದೇ ಮೇಜಿನ ಮುಂದೆ ಕುಳಿತಿದ್ದರು ಕುಡುಕನು ಚೆನ್ನಾಗಿ ಕುಡಿದು, ಮೇಜಿನ ಮೇಲೆ ತಲೆಯನ್ನು ಹಾಕಿಕೊಂಡು ಬಿದ್ದಿದ್ದನು. ಇದು ಮೊದಲು ನನಗೆ ನೆನಪಿಗೆ ಬರಲಿಲ್ಲ

ಕುಡುಕನ ಮಾತ ಬಿಡು. ಈ ವಿಷಯದಲ್ಲಿ ನನ್ನಿಂದ ತಿಳಿಯಬೇಕಾದುದು ಇನ್ನೇನಾದರೂ ಉಂಟೋ?

ಸ್ವಾಮೀ! ಸೂರ್ಯನು ತನ್ನ ಕಿರಣಗಳಿಂದ ಅಂಧಕಾರವನ್ನು ಹೋಗಲಾಡಿಸುವಂತೆ, ತಾವೂ ನನ್ನ ಹೃದಯದ ಅಜ್ಞಾನಾಂಧಕಾರವನ್ನು ಹೋಗಲಾಡಿಸಿದಿರಿ ತಾವು ದಯವಿಟ್ಟು ಇನ್ನೊಂದು ವಿಷಯವನ್ನು ಹೀಗೆಯೇ ಸ್ಪಷ್ಟಪಡಿಸಿಕೊಡಬೇಕು.

ಅದು ಏನು?

ನ್ಯಾಯಾಧಿಪತಿಯು ನನ್ನ ವಿಷಯದಲ್ಲಿ ವಿಶೇಷಕರುಣೆಯನ್ನು ತೋರಿಸಿ ನನ್ನನ್ನು ಜಾಗ್ರತೆಯಾಗಿ ಬಿಡಿಸುವುದಾಗಿ ಹೇಳಿದ್ದರೂ, ವಿಚಾರಣೆಯೇ ಇಲ್ಲದ ಹೀಗೆ ಶಿಕ್ಷೆಗೆ ಏಕೆ ನನ್ನನ್ನು ಗುರಿಮಾಡಿದನು?

ಅಪ್ಪಾ ! ನ್ಯಾಯಮಾರ್ಗವು ಅನೇಕ ಸಂದರ್ಭಗಳಲ್ಲಿ ಗೂಢವಾಗಿರುವುದು ; ಅದರಲ್ಲಿ ರಾಜಾಪಚಾರದ ವಿಷಯದಲ್ಲಿ ಅದು ವಕ್ರವಾಗಿರುವುದು ಹಿಂದೆ ನಾನು ಹೇಳಿದ ನ್ಯಾಯವನ್ನು ಈ ಸಂಗತಿಯಲ್ಲಿ ಯೋಚಿಸಿ ನೋಡಿದರೆ ಅದು ಸುಲಭವಾಗಿ ತಿಳಿಯುವುದು ಒಳ್ಳೆಯದು, ನ್ಯಾಯಾಧಿಪತಿಗೂ ನಿನಗೂ ನಡೆದ ಮಾತುಗಳನ್ನು ವಿಶದವಾಗಿ ಹೇಳು.

ಸ್ವಾಮೀ ! ಅಲ್ಲಿ ನಡೆದ ಅಂಶಗಳನ್ನೆಲ್ಲಾ ತಮ್ಮಲ್ಲಿ ನಾನು ಮೊದಲೇ ಅರಿಕೆ ಮಾಡಿಕೊಂಡಿದ್ದೇನೆ ಇಂತಹ ವಿಷಯವನ್ನು ಹೇಳೆಂದರೆ ಅದನ್ನು ಹೇಳುವೆನು.

ನಿನ್ನ ವಿಚಾರಣೆಯನ್ನು ಮಾಡಿದವನಿಗೆ ಎಷ್ಟು ವಯಸ್ಸು

ಸುಮಾರು ಇಪ್ಪತ್ತಾರು.

ಹಾಗಾದರೆ ಅವನಿಗೆ ದುರ್ಮಾರ್ಗಪ್ರವೃತ್ತಿ ಇಲ್ಲದಿದ್ದರೂ ಕೀರ್ತಿಸ್ಪೃಹೆಯೂ ಐಶ್ವರ್ಯಕಾಂಕ್ಷೆಯೂ ಇರಬೇಕು ಅವನು ವಿಚಾರಣೆಯ ಕಾಲದಲ್ಲಿ ನಿನ್ನನ್ನು ಹೇಗೆ ಕಂಡನು ? "ದಯಾಪರನಾಗಿದ್ದನು"

ನಿನ್ನ ಕಥೆಯನ್ನು ಅವನು ಕೇಳುತ್ತಲಿರುವಾಗ, ಅವನ ನಡತೆಯಲ್ಲಿ ವ್ಯತ್ಯಾಸ ವೇನಾದರೂ ನಿನಗೆ ತೋರಿಬಂದಿತೋ !

ಏಲಾದ್ವೀಪದ ಲೇಖನವನ್ನು ಓದುವ ವರೆಗೆ ಸುಮುಖನಾಗಿ ನನ್ನನ್ನು ಬಿಟ್ಟು ಬಿಡುತ್ತೇನೆಂದು ಹೇಳುತ್ತಲಿದ್ದು, ಅದನ್ನು ಓದಿದ ಮೇಲೆ ಮುಖವನ್ನು ಸೊಟ್ಟುಮಾಡಿ ಕೊಂಡು ಇದನ್ನು ಆರಿಗಾದರೂ ತೋರಿಸಿದೆಯೋ ? ಎಂದನು ಇಲ್ಲವೆಂದು ನಾನು ಹೇಳಿದ ಬಳಿಕ, ಇದರ ಸಮಾಚಾರವನ್ನೇ ಆಗಲಿ ಇದು ಆರ ಹೆಸರಿಗೆ ಇದೆಯೋ ಅದನ್ನೇ ಆಗಲಿ ಆರಿಗೂ ಹೇಳದಿರುವೆನೆಂದು ಪ್ರಮಾಣ ಮಾಡಿಕೊಟ್ಟರೆ ಮೇಲಿನ ಅಧಿಕಾರಿಗೆ ತಿಳಿಸಿ ನನ್ನನ್ನು ಬಿಟ್ಟುಬಿಡುವೆನೆಂದು ಹೇಳಿದನು

ಅವನು ಸುಟ್ಟ ಲೇಖನವಾವುದು ;

ಏಲಾದ್ವೀಪದಿಂದ ನಾನು ತಂದಿದ್ದುದು

ಅದರ ಜತೆಯಲ್ಲಿ ನಿನ್ನ ಮೇಲೆ ಸರ್ಕಾರಕ್ಕೆ ಬರೆದಿದ್ದ ಲೇಖನವನ್ನೂ ಸುಟ್ಟ ನೋ ? "ಇಲ್ಲ."

ಓಹೋ ! ಆದರೆ ಅವನು ಮೋಸಗಾರನು.

ಅದು ಹೇಗೆ ಸಾಧ್ಯ. ತಾವು ಎಲ್ಲರನ್ನೂ ಹೀಗೆ ಹೇಳಿದರೆ ಲೋಕವೆಲ್ಲವೂ ಹುಲಿ ಕರಡಿಗಳಿಂದ ತುಂಬಿರುವಂತೆಯೇ ತೋರುತ್ತದೆಯಲ್ಲವೇ?

ಅಪ್ಪಾ! ನಾಲ್ಕು ಕಾಲುಳ್ಳ ಹುಲಿಕರಡಿಗಳಿಗಿಂತ ಎರಡು ಕಾಲಿನ ಹುಲಿಕರಡಿಗಳು ಕ್ರೂರಿಗಳು ಇದು ಹಾಗಿರಲಿ ಏಲಾದ್ವೀಪದಿಂದ ನೀನು ತಂದಿದ್ದ ಕಾಗದವು ಆರ ಹೆಸರಿಗೆ ಬರೆದಿದ್ದಿತು?

ಮಲಯಪುರದಲ್ಲಿರುವ ದೀನನಾಥನ ಹೆಸರಿಗೆ

ಅದನ್ನು ಸುಡುವುದರಲ್ಲಿ ನ್ಯಾಯಾಧಿಪತಿಗೇನಾದರೂ ಪ್ರಯೋಜನವಿದ್ದಿತೋ?

ಇದ್ದಿತೋ ಏನೋ ತಿಳಿಯದು ಆ ಕಾಗದವನ್ನು ಅವನು ಎರಡು ಮೂರಾವೃತ್ತಿ ಓದಿ, ಆ ಹೆಸರನ್ನು ನೋಡಿ ಸಂಕಟಪಟ್ಟು, ಆ ವಿಷಯವಾಗಿ ಆರೊಡನೆಯೂ ಹೇಳುವುದಿಲ್ಲವೆಂದು ನನ್ನಿಂದ ಮಾತು ತೆಗೆದುಕೊಂಡನಲ್ಲದೆ ಪ್ರಮಾಣವನ್ನೂ ಮಾಡಿಸಿಕೊಂಡನು.

ನಾನು ಒಬ್ಬ ದೀನನಾದನನ್ನು ಬಲ್ಲೆ; ಅವನು ಚಕ್ರವರ್ತಿಯ ಕಷ್ಟಿಗಾರರಲ್ಲಿ ಮುಖ್ಯಸ್ಥನು. ನಿನ್ನ ವಿಚಾರಣೆ ಮಾಡಿಗವನ ಹೆಸರೇನು? "ವಲ್ಲಭದೇವ."

ಹೀಗೆಂದ ಕೂಡಲೆ ಆನಂದನು ಅರ್ಧಘಂಟೆಯ ಕಾಲ ಹೊಟ್ಟೆ ಹುಣ್ಣಾಗುವಂತೆ ನಕ್ಕು, ಧರ್ಮದೇವನನ್ನು ನೋಡಿ ಇಗೋ, ಈ ಕಿಟಕಿಯಿಂದ ಬರುವ ಬಿಸಿಲನ್ನು ನೋಡಿದೆಯಾ ಎಂದನು.

ನೋಡಿದೆ. ಆದರಲ್ಲಿ ಏನು ವಿಶೇಷ?

ನಿನ್ನ ವಿಷಯವಾಗಿ ವಲ್ಲಭದೇವನು ತೋರಿಸಿದ ಕರುಣೆಯೂ ಇಂತಹದೆಂಬುದು ಈ ಬಿಸಿಲಿಗಿಂತ ಸ್ಪಷ್ಟವಾಗಿದೆ ನಿನ್ನನು ಕಾಪಿಡಲೋಸುಗ ಅವನು ಆ ಲೇಖನವನ್ನು ಸುಡಲಿಲ್ಲ. ದೀನನಾಥನು ಆರು ಬಲ್ಲೆಯೋ? "ಇಲ್ಲ."

ಅವನು ವಲ್ಲಭದೇವನ ತಂದೆ.

ಈ ಮಾತನ್ನು ಕೇಳುತ್ತಲೆ ಧರ್ಮದೇವನು ಸಿಡಿಲು ಬಡಿದವನಂತೆ ತಟ್ಟನೆ ಮಂಚದಿಂದೆದ್ದು ಅವನ ತಂದೆ, ಅವನ ತಂದೆ, ಎಂದು ಹುಚ್ಚನಂತೆ ಸ್ವಲ್ಪಹೊತ್ತು ಓಡಾಡಿ, ಅನಂತರ ಸ್ವಾಮೀ! ಸ್ವಲ್ಪ ಕಾಲ ನಾನೊಬ್ಬನೇ ಇದ್ದು ಬರುತ್ತೇನೆ ಎಂದು ಹೇಳಿ ಆನಂದನ ಅನುಮತಿಯನ್ನು ಪಡೆದು ತನ್ನ ಕೂಪವನ್ನು ಸೇರಿ, ಮಂಚದ ಮೇಲೆ

ಬಿದ್ದುಕೊಂಡು ಹಿಂದೆ ನಡೆದ ಸಮಾಚಾರಗಳನ್ನೆಲ್ಲಾ ಒಂದೊಂದಾಗಿ ವಿಮರ್ಶಿಸಿ, ದೇವರ ಕೃಪೆಯಿಂದ ನನಗೆ ಇಲ್ಲಿಂದ ಬಿಡುಗಡೆಯಾದರೆ ಆ ದುರಾತ್ಮರೆಲ್ಲರಿಗೂ ತಕ್ಕ ಶಿಕ್ಷೆಯನ್ನು ಮಾಡದೆ ಬಿಡೆನು ಎಂದು ಪ್ರತಿಜ್ಞೆಮಾಡಿ ಸ್ಮೃತಿತಪ್ಪಿ ಬಿದ್ದಿದ್ದನು. ಅವನು ಎಷ್ಟು ಹೊತ್ತು ಹೀಗಿದ್ದನೋ ತಿಳಿಯದು. ಸಾಯಂಕಾಲ ಆಳು ಬಂದು ಹೋದುದೂ ಅವನಿಗೆ ತಿಳಿಯದು ಧರ್ಮದೇವನು ಏತಕ್ಕೋ ಬರಲಿಲ್ಲವೆಂದು ಯೋಚಿಸಿ, ತನ್ನೆಡೆಗೆ ಆಳು ಬಂದು ಹೊರಟುಹೋದ ಮೇಲೆ, ಆನಂದನು ಅವನ ಬಿಲಕ್ಕೆ-ಹೋಗಿ ಮಾತನಾಡಿಸಿ, ಅವನು ಮಾತಾಡದ ಇರುವುದನ್ನು ಕಂಡು, ಭುಜವನ್ನು ಹಿಡಿದು ಅಲುಗಿಸಲು, ಧರ್ಮದೇವನು ಎಚ್ಚತ್ತು ಆನಂದನನ್ನು ನೋಡಿ ನಕ್ಕನು.

ಯೋಗಾನಂದನು ಹುಚ್ಚನಾಗಿದ್ದರೂ ನಿರುಪದ್ರವನೆಂದು ಬಂದಿಶಾಲೆಯ ಅಧಿಕಾರಿಗಳಲ್ಲಿ ಪ್ರಸಿದ್ಧಿಹೊದ್ದಿದ್ದನಾದಕಾರಣ, ಅವನನ್ನು ಅವರೆಲ್ಲರೂ ಪ್ರೀತಿಸುತ್ತಲಿದ್ದರಲ್ಲದೆ ವಾರಕ್ಕೆ ಒಂದಾವೃತ್ತಿ ಒಳ್ಳೆಯ ಊಟವನ್ನೂ ಕೊಡುತ್ತಲಿದ್ದರು ಈ ದಿನ ಅಂಥಾ ಊಟವು ಬಂದಿದ್ದುದರಿಂದ ಅದನ್ನು ಧರ್ಮದೇವನ ಜತೆಯಲ್ಲಿ ಊಟಮಾಡಬೇಕೆಂಬ ಆಸೆಯಿಂದ ಅವನನ್ನು ಕರೆದುಕೊಂಡು ಹೋಗಲು ಬಂದನು ಆನಂದನು ಈ ಸಂಗತಿಯನ್ನು ಧರ್ಮದೇವನಿಗೆ ತಿಳಿಸಿ ಅವನನ್ನು ಜತೆಯಲ್ಲಿ ಕರೆದುಕೊಂಡು ಹೋದನು

ಇಬ್ಬರೂ ಕೂಪವನ್ನು ಸೇರಿ ಊಟಕ್ಕೆ ಕುಳಿತಾಗ, ಆನಂದನು ಧರ್ಮದೇವನನ್ನು ನೋಡಿ ಈಗ ನೀನು ಪೂರ್ವದ ಧರ್ಮದೇವನಲ್ಲ ಎಂದನು.

ಅದೇಕೆ ತಾವು ಹಾಗೆ ಹೇಳುತ್ತೀರಿ ?

ನಿನ್ನ ಮುಖವನ್ನು ನೋಡಿದರೆ ಹಗೆಗಳನ್ನು ಶಿಕ್ಷಿಸುವುದಕ್ಕೆ ಬದ್ಧಕಂಕಣನಾಗಿರುವಂತೆ ತೋರುತ್ತಿದೆ. ದೈವಸಮ್ಮತವಿಲ್ಲದ ಕಾರ್ಯವು ಎಂದಿಗೂ ನಡೆಯದು ನಿನ್ನ ಶತ್ರುಗಳು ಮಾಡಿದ ಮೋಸಗಳನ್ನು ನಾನು ನಿನಗೆ ತಿಳಿಸಬಾರದಾಗಿದ್ದಿತು.

ಸ್ವಾಮೀ ! ನನ್ನ ಮನಸ್ಸು ಇನ್ನೂ ಸಮಾಧಾನಸ್ಥಿತಿಗೆ ಬಂದಿಲ್ಲದುದರಿಂದ ಬೇರೆ ಮಾತನಾಡೋಣ

ಧರ್ಮದೇವನ ಮನಸ್ಸನ್ನು ನೋಯಿಸಬಾರದೆಂದು ಊಟವು ಮುಗಿಯುವವರೆಗೆ ಆನಂದನು ಬೇರೆ ಮಾತುಕತೆಗಳನ್ನು ಹೇಳುತ್ತಲಿದ್ದನು. ಆನಂದನ ವಿದ್ಯೆ,

ಬುದ್ಧಿ, ನಡತೆ, ಗುಣ, ಮಾತು ಇವುಗಳನ್ನು ನೋಡಿ ಧರ್ಮದೇವನು ಆಶ್ಚರ್ಯಪಡುತ್ತ ಇವನು ಇಷ್ಟು ತಿಳಿದವನಾಗಿದ್ದರೂ ಒಂದು ದಿನವಾದರೂ ಆತ್ಮಸ್ತುತಿ ಪರನಿಂದೆ ಗಳನ್ನು ಮಾಡಿದವನಲ್ಲ, ಇವನ ಮಾತುಗಳು ಆವಾಗಲೂ ಜಾತಿರತ್ನಗಳಂತೆ ಅಮೌಲ್ಯ ವಾಗಿರುವುವು, ಅವುಗಳನ್ನು ಕೇಳುತ್ತ ಕೇಳುತ್ತ ಬುದ್ಧಿವಿಕಾಸವಾಗುವುದು. ನಾನು ಸಾಧ್ಯವಾದ ಮಟ್ಟಿಗೂ ಇವನಿಂದ ಸಕಲವಿಷಯಗಳನ್ನೂ ತಿಳಿಯಬೇಕು ಎಂದು ಆಲೋಚಿಸಿ, ಧರ್ಮದೇವನು ಆಸನದಿಂದೆದ್ದು, ಆನಂದನಿಗೆ ನಮಸ್ಕಾರ ಮಾಡಿಸ್ವಾಮೀ! ತಮ್ಮಂಥ ಜ್ಞಾನಿಗಳ ಮುಂದೆ ನಾನೆಷ್ಟರವನು? ತಮ್ಮ ಸಹವಾಸಮಾಡಲಿಕ್ಕೆ ತಕ್ಕಂತೆ ನನಗೆ ವಿದ್ಯಾದಾನ ಮಾಡಬೇಕು ಎಂದು ವಿನಯದೊಡನೆ ಪ್ರಾರ್ಥಿಸಿದನು. ಅವನ ವಿನಯಪೂರ್ವಕವಾದ ಪ್ರಾರ್ಥನೆಯನ್ನು ನೋಡಿ ಆನಂದನು ಸಂತೋಷಪಟ್ಟು ನಸುನಗುತ, ಅಪ್ಪಾ! ಮನುಷ್ಯನ ಜ್ಞಾನವು ಅತ್ಯಲ್ಪವಾದುದು, ಅದರಲ್ಲಿಯೂ ನನ್ನದು ಅಲ್ಪತರವು. ಆದುದರಿಂದ ನನಗೆ ತಿಳಿದುದನ್ನೆಲ್ಲಾ ನೀನು ಒಂದು ವರ್ಷದಲ್ಲಿ ಕಲಿತು ಕೊಳ್ಳುವೆ ಎಂದನು.

ಅಷ್ಟನ್ನೂ ಒಂದು ವರ್ಷದಲ್ಲಿ ಕಲಿಯಬಹುದೋ?

ಕಲಿಯಬಹುದು, ಅವುಗಳ ಹುರುಳನ್ನು ತಿಳಿದು ಸಮಯಕ್ಕೆ ತಕ್ಕಂತೆ ಉಪ ಯೋಗಿಸಲು ಬುದ್ಧಿಯೂ, ವಿವೇಕವೂ, ಅನುಭವವೂ ಬೇಕು. ನಿನಗೇನೋ ಬುದ್ಧಿ ಯಿದೆ, ಮಿಕ್ಕವು ಕಾಲಕ್ರಮವಾಗಿ ಬರತಕ್ಕವಲ್ಲದೆ ಕಲಿಸಿ ಬರತಕ್ಕವಲ್ಲ

ತಾವು ವಿಷಯಗಳನ್ನು ಕಲಿಸಿದರೆ ಮಿಕ್ಕವು ತಮ್ಮ ಅನುಗ್ರಹದಿಂದ ತಿಳಿಯ ಬರುವುದು. ಆವಾಗ ಪಾಠವನ್ನು ಪ್ರಾರಂಭಿಸುವಿರಿ?

ಈಗಲೇ ಎಂದು ಆನಂದನು ಪಾಠಕ್ರಮದ ಪಟ್ಟಿಯೊಂದನ್ನು ಒರೆದು ಧರ್ಮ ದೇವನ ಕೈಯಲ್ಲಿ ಕೊಟ್ಟನು.

ಅಂದಿನಿಂದ ಪಾಠವು ಕ್ರಮವಾಗಿ ನಡೆಯುತ್ತ ಬಂದಿತು ಧರ್ಮದೇವನು ತನ್ನ ಬುದ್ಧಿ ಜ್ಞಾಪಕಶಕ್ತಿಗಳ ಬಲದಿಂದ ಓದಿ, ಪಾಠಗಳನ್ನು ಚೆನ್ನಾಗಿ ಗ್ರಹಿಸುತ್ತ ಬಂದನು. ಸಮುದ್ರದಲ್ಲಿ ಹೆಚ್ಚಾಗಿ ಓಡಾಡಿ ಅನೇಕದೇಶೀಯರ ಸಂಗಡ ಮಾತನಾಡುತ್ತಲಿದ್ದುದ ರಿಂದ ಕೆಲವು ಭಾಷೆಗಳನ್ನು ಸುಮಾರಾಗಿ ತಿಳಿದಿದ್ದನು. ಒಂದೊಂದು ಭಾಷೆಯನ್ನು ಆನಂದನಿಂದ ಕಲಿಯುವಾಗಲೂ ಆಯಾಯ ಭಾಷೆಯಲ್ಲಿಯೇ ಅವನ ಸಂಗಡ ಮಾತ

ನಾಡುತ್ತ ಸುಮಾರು ಆರು ತಿಂಗಳುಗಳಲ್ಲಿ ಐದು ಭಾಷೆಗಳನ್ನು ಚೆನ್ನಾಗಿ ಮಾತನಾಡುವ ಶಕ್ತಿಯನ್ನು ಹೊದ್ದಿದನು. ತರುವಾಯ ಯೋಗಾನಂದನು ತನಗೆ ತಿಳಿದಿದ್ದ ಗಣಿತ, ವೈದ್ಯ, ರಸವಾದ ಮುಂತಾದ ಶಾಸ್ತ್ರಗಳನ್ನು ಧರ್ಮದೇವನಿಗೆ ಉಪದೇಶಮಾಡಿದನು. ಹೀಗೆ ಕೆಲವು ಕಾಲ ನಡೆದ ಬಳಿಕ ಒಂದು ದಿನ ಯೋಗಾನಂದನು ಪಾಠವನ್ನು ಹೇಳುತ್ತಲಿರುವಾಗ ಅಂಗಳದಲ್ಲಿ ಸಿಪಾಯಿ ಇಲ್ಲದಿದ್ದರೆ ಅನುಕೂಲವಾಗಿದ್ದಿತು ಎಂದು ಹೇಳಿದನು. ಧರ್ಮದೇವನು ಆದರ ಅಭಿಪ್ರಾಯವನ್ನು ಗ್ರಹಿಸಿ ಅಪ್ಪಣೆಯಾದರೆ ಒಂದು ನಿಮಿಷದಲ್ಲಿ ಅವನಿಲ್ಲದಂತೆ ಮಾಡುವೆನು ಎನ್ನಲು, ಆನಂದನು ಅವನನ್ನು ಕೊಲ್ಲು ವುದು ನನಗೆ ಎಂದೂ ಸಮ್ಮತಿ ಇಲ್ಲ, ಇದನ್ನು ನಾನು ನಿನಗೆ ಮೊದಲೇ ಹೇಳಿರುವೆನು ಎಂದು ಖಂಡಿತವಾಗಿ ಹೇಳಿದನು.

ತಮಗೆ ಬೇರೆ ಯೋಚನೆಯಿದ್ದರೆ ಅದನ್ನು ಅಪ್ಪಣೆಕೊಡಿರಿ, ಅದರಂತೆ ನಡೆ ಯುವೆನು.

ನಿನ್ನ ಕೂಪದಿಂದ ಸಿಪಾಯಿ ಓಡಾಡುವ ಅಂಗಳಕ್ಕೆ ಒಂದು ಸುರಂಗ ಹೊಡೆದು ಅಲ್ಲಿ ಹಾಸಿರುವ ಕಲ್ಲುಗಳಲ್ಲಿ ಒಂದನ್ನು ಸಡಲಿಸಿ, ಅದು ಕೆಳಗೆ ಬೀಳದಂತೆ ತಡೆಯಿಟ್ಟು, ಅನುಕೂಲವಾದ ಸಮಯವನ್ನು ನೋಡಿಕೊಂಡಿದ್ದು, ಇಟ್ಟಿರುವ ತಡೆಯನ್ನು ಕಿತ್ತು, ಸಿಪಾಯಿಯೊಡನೆ ಕಲ್ಲು ಕೆಳಗೆ ಉರುಳುವಂತೆ ಮಾಡಿ, ಕೆಳಕ್ಕೆ ಬಿದ್ದ ಸಿಪಾಯಿನ ಬಾಯಿಗೆ ಬಟ್ಟೆಯನ್ನು ತುರುಕಿ, ಕೈ ಕಾಲು ಕಟ್ಟಿ, ಅಂಗಳದ ಕಿಟಕಿಯ ಮೂಲಕ ನಮ್ಮ ನೂಲೇಣಿಯಿಂದ ಸಮುದ್ರಕ್ಕೆ ಇಳಿದು, ಅಲ್ಲಿಂದ ಸಮೀಪದಲ್ಲಿರುವ ದ್ವೀಪಕ್ಕೆ ಈಸಿಕೊಂಡು ಹೋಗಬೇಕೆಂದು ನಿಶ್ಚಯಿಸಿದೇನೆ. ಈ ಯೋಚನೆ ಸರಿಯೋ? ನಿನ ಗೇನು ತೋರುತ್ತದೆ ಹೇಳು

ಇದು ನನಗೂ ವಿಹಿತವಾಗಿಯೇ ತೋರುತ್ತಿದೆ. ಈ ಕೆಲಸವನ್ನು ಆವಾಗ ಪ್ರಾರಂಭಿಸೋಣ? "ನಾಳೆಯೇ."

ಮಾರನೆಯ ದಿನವೇ ಸುರಂಗದ ಕೆಲಸವನ್ನು ಪ್ರಾರಂಭಿಸಿ ಒಂದು ವರ್ಷದಲ್ಲಿ ಅದನ್ನು ಪೂರೈಸಿ, ಒಂದು ಅಮಾಸೆಯ ದಿವಸದ ರಾತ್ರಿ ಇಬ್ಬರೂ ಓಡಿಹೋಗುವು ದಾಗಿ ನಿಶ್ಚಯಿಸಿ ಆ ರಾತ್ರಿ ಮಾಡಬೇಕಾದ ಕೆಲಸಗಳನ್ನು ಆದಿನ ಮಧ್ಯಾಹ್ನ ಯೋಚಿ ಸುತ್ತಲಿದ್ದಾಗ, ಆನಂದನ ಮುಖವು ರಕ್ತ ಕಡಿಮೆಯಾಗಿ ಬೆವರುತ್ತಿರುವುದನ್ನೂ, ಅವನು

ತನ್ನ ಎರಡು ಕೈಗಳನ್ನು ಹಿಸಿಕಿಕೊಳ್ಳುವುದನ್ನೂ ಧರ್ಮದೇವನು ನೋಡಿ ಗಾಬರಿ ಬಿದ್ದು, ಅಯ್ಯೋ, ಇದೇನು ಗ್ರಹಚಾರ ಬಂದಿತು ಎಂದು ಗೋಳಾಡಲು, ಸನ್ಯಾಸಿಯು ಅವನನ್ನು ನೋಡಿ ಅಪ್ಪಾ! ನೀನು ಗಾಬರಿಬಿದ್ದರೆ ಕೆಲಸವು ಕೆಟ್ಟುಹೋಗುವುದು, ನಾನು ಹೇಳಿದಂತೆ ಮಾಡಿದರೆ ಒಂದು ವೇಳೆ ನಾನು ಬದುಕಿದರೂ ಬದುಕಬಹುದು. ಈಗ ನನಗೆ ಬರುವುದು ಅಪಸ್ಮಾರವು, ಇದೋ ಅದರ ಸೂಚನೆ ಈ ರೋಗಕ್ಕೆ ಇರುವುದು ಒಂದೇ ಚಿಕಿತ್ಸೆ. ನನ್ನ ಮಂಚದ ಎಡಗಡೆಯ ಮುಂದಣ ಕಾಲನ್ನು ತೆಗೆದರೆ, ಅದರಲ್ಲಿ ಒಂದು ಸಣ್ಣಸೀಸೆಯಲ್ಲಿ ಕೆಂಪುದ್ರಾವಕ ಒಂದಿರುವುದು, ಅದನ್ನು ಕೈಯಲ್ಲೆತ್ತಿಕೊಂಡು ಈ ಜಾಡ್ಯದ ಕಿರುಚಾಟ ಒದ್ದಾಟಗಳೆಲ್ಲವೂ ನಿಂತಮೇಲೆ, ನನ್ನ ಬಾಯನ್ನು ಬಿಡಿಸಿ ಗಂಟಲಲ್ಲಿ ಹತ್ತು ತೊಟ್ಟು ದ್ರಾವಕವನ್ನು ಬಿಟ್ಟರೆ ದೈವಾನುಗ್ರಹದಿಂದ ನಾನು ಬದುಕಬಹುದು ಒಂದು ವೇಳೆ ನನ್ನ ಕೂಗಾಟವು ಹೆಚ್ಚಾದರೆ, ಅದು ಹೊರಗೆ ಕೇಳಿಸದಂತೆ ಜೋಪಾನವಾಗಿ ನೋಡಿಕೋ, ಇಲ್ಲವಾದರೆ ನಮ್ಮಿಬ್ಬರನ್ನೂ ಬೇರೆ ಮಾಡುವರು ಎಂದನು

ಹೀಗೆಂದ ಐದು ನಿಮಿಷಗಳಲ್ಲಿಯೇ ಆನಂದನಿಗೆ ಜ್ಞಾನತಪ್ಪಿ ಅವನ ಕಿರಿಚಾಟವು ಪ್ರಾರಂಭವಾಯಿತು. ಧರ್ಮದೇವನು ಅಲ್ಲಿದ್ದ ಕಂಬಳಿಯ ಚೂರನ್ನು ಅವನ ಬಾಯಿಗೆ ತುರುಕಿ ಅವನು ಹೇಳಿದಂತೆ ಸಕಾಲದಲ್ಲಿ ದ್ರಾವಕವನ್ನು ಅವನ ಗಂಟಲಿನಲ್ಲಿ ಬಿಟ್ಟನು. ಔಷಧಿಯು ಬಿದ್ದು ಒಂದು ಗಂಟೆಯಾದರೂ ಆನಂದನಿಗೆ ಜ್ಞಾನವೇ ಬರಲಿಲ್ಲವಾದುದರಿಂದ, ಧರ್ಮದೇವನು ಗಾಬರಿಬಿದ್ದು ಮುಂದೆ ತಾನು ಮಾಡಬೇಕಾದುದು ಅವುದೆಂದು ಯೋಚಿಸುತ್ತಲಿರುವಾಗ, ಯೋಗಿಯು ಕಣ್ಣು ಬಿಡಲು, ಅದನ್ನು ನೋಡಿ ನನ್ನ ಭಾಗದ ದೇವರೇ ನಿಮ್ಮನ್ನು ಬದುಕಿಸಿದನು ಎಂದು ಸಂತೋಷದಿಂದ ಗಟ್ಟಿಯಾಗಿ ಕೂಗಿಕೊಂಡನು. ಆ ವೇಳೆಗೆ ಸಂಜೆಯಾಯಿತು.

ಹೀಗೆ ಧರ್ಮದೇವನು ಗಟ್ಟಿಯಾಗಿ ಕೂಗುತ್ತಲೆ, ಮಾತನಾಡುವುದಕ್ಕೆ ಶಕ್ತಿಯಿಲ್ಲದುದರಿಂದ, ಆನಂದನು ಕೂಪದ ಬಾಗಿಲನ್ನು ಅವನಿಗೆ ತೋರಿಸಿದನು; ಬಾಗಿಲಲ್ಲಿ ಹಜ್ಜೆಗಳ ಸದ್ದಾದುವು. ಆಳು ಬರುವನೆಂದು ತಿಳಿದು ಧರ್ಮದೇವನು ತಟ್ಟನೆದ್ದು ಸುರಂಗದಲ್ಲಿ ಇಳಿದು ಅದರ ಬಾಯಿಗೆ ಕಲ್ಲನ್ನು ಮುಚ್ಚಿ, ತನ್ನ ಕೂಪವನ್ನು ಸೇರಿಕೊಂಡನು ಅವನು ಅತ್ತಕಡೆ ಹೋದೊಡನೆಯೇ ಇತ್ತ ಆಳು ಆನಂದನಿಗೆ ಆಹಾರ

ವನ್ನು ತಂದಿಟ್ಟು ಅವನ ಮುಖವನ್ನು ನೋಡಿ ಇವನಿಗೆ ಇಂದು ಮೆಯ್ ಸ್ವಸ್ಥವಿಲ್ಲ ದಂತಿದೆ, ಎಂದು ತಿಳಿದು, ಅವನನ್ನು ಮಾತನಾಡಿಸಲು ಅವನು ಆವ ಬಗಲನ್ನೂ ಹೇಳದ ಸುಮ್ಮನಿದ್ದುದರಿಂದ ಬಾಗಿಲನ್ನು ಹೊಚ್ಚಿಕೊಂಡು ಹೊರಟುಹೋದನು

ಆಳು ತನ್ನ ಕೂಪಕ್ಕೆ ಬಂದು ಹೋಗುವ ವರೆಗೆ ಕಾದಿದ್ದು, ಆನಂದನು ಹೇಗಿ ರುವನೋ ನೋಡಬೇಕೆಂದು, ಧರ್ಮದೇವನು ಅವನ ಕೂಪಕ್ಕೆ ಹೋದನು ಅವನು ಬಂದುದನ್ನು ನೋಡಿ ಆನಂದನು ನೀನು ಪುನಃ ಇಲ್ಲಿಗೆ ಬರುವುದಿಲ್ಲವೆಂದು ಇದ್ದೆನು ಎಂದನು

ಅದೇನು ಹೀಗೆ ಹೇಳುತ್ತೀರಿ ?

ಓಡಿಹೋಗಲು ಎಲ್ಲವೂ ಸಿದ್ಧವಾಗಿದ್ದು, ಅದಕ್ಕೆ ಅನುಕೂಲವಾಗಿ ಅಮಾವಾ ಸ್ಯೆಯ ಕತ್ತಲೂ ಒದಗಿದ್ದಿತು. ನನ್ನನ್ನು ಬಿಟ್ಟು ನೀನೊಬ್ಬನೇ ಓಡಿಹೋಗುವೆಯೋ ಏನೋ ಎಂದಿದ್ದೆ

ಆನಂದನು ಹಾಗೆಂದುದನ್ನು ಕೇಳಿ, ಧರ್ಮದೇವನು ವ್ಯಸನಾಕ್ರಾಂತನಾಗಿ. ಸ್ವಾಮೀ ! ತಾವು ನನ್ನನ್ನು ಕೃತಘ್ನನೆಂದು ಎಣಿಸಿದಂತಿದೆ, ನಾನು ಅಂಥವನಲ್ಲ, ತಮ್ಮನ್ನು ಬಿಟ್ಟು ನಾನೆಂದಿಗೂ ಹೋಗತಕ್ಕವನಲ್ಲ ಎಂದನು.

ನಾನು ಹಾಗೆ ಯೋಚಿಸಿದುದು ತಪ್ಪೆಂದು ಈಗ ತೋರಿತು ನನ್ನನ್ನು ಕ್ಷಮಿಸು ಈ ರೋಗದ ವಿಷಯವನ್ನು ನಿನಗೆ ಸ್ವಲ್ಪ ಹೇಳಿರುವೆನು ಕೇಳು ನನ್ನನ್ನು ಸೆರೆ ಹಿಡಿ ಯುವುದಕ್ಕೆ ಒಂದು ವರ್ಷ ಹಿಂದೆ ಈ ರೋಗವು ನನಗೆ ಬಂದಿದ್ದಿತು; ಆಗ ಒಬ್ಬ ವೈದ್ಯನು ನನ್ನ ಅವಸ್ಥೆಯನ್ನು ನೋಡಿ ದಯೆಯಿಟ್ಟು ತನ್ನಲ್ಲಿದ್ದ ದ್ರಾವಕವನ್ನು ಕೊಟ್ಟು ಗುಣಮಾಡಿ, ಈ ರೋಗದ ಆನುಪೂರ್ವಿಯನ್ನೆಲ್ಲಾ ವಿಚಾರಿಸಿ, ನನ್ನ ಮನೆತನದಲ್ಲಿ ಎಲ್ಲ ರಿಗೂ ಈ ರೋಗವಿತ್ತೆಂದು ತಿಳಿದು, ಈ ದ್ರಾವಕವನ್ನು ಮಾಡಿಕೊಟ್ಟನು. ಈ ರೋಗವು ಇನ್ನೊಂದು ಸಾರಿ ಬಂದರೆ ನಾನು ಬದುಕುವುದಿಲ್ಲ ನನ್ನ ಹಿರಿಯರೆಲ್ಲರೂ ಹೀಗೆಯೇ ಸತ್ತರು. ನಾನೂ ಹಾಗೆಯೇ ಈ ಕೂಪದಲ್ಲಿ ಸಾಯುವೆನು.

ಸ್ವಾಮೀ ! ಏತಕ್ಕೆ ಇಷ್ಟು ಅಧೈರ್ಯ ? ಎಂಟು ಹತ್ತು ದಿವಸಗಳಲ್ಲಿ ತಮಗೆ ಮನ ಶ್ಶಕ್ತಿಯು ಬರುವುದು ಅನಂತರ ನಾವಿಬ್ಬರೂ ನಮ್ಮ ಏರ್ಪಾಡಿನಂತೆ ಸಮುದ್ರದಲ್ಲಿ ಬಿದ್ದು ದ್ವೀಪಾಂತರವನ್ನು ಸೇರೋಣ

ಅಪ್ಪಾ! ನನ್ನ ಎಡಗಡೆಯ ಕೈಕಾಲುಗಳನ್ನು ನೋಡು, ಅವು ಸ್ವಾಧೀನವಿಲ್ಲದೆ ಕಟ್ಟಿಗೆಯಂತೆ ಇರುವುವು ಈ ಸ್ಥಿತಿಯಲ್ಲಿರುವ ನನ್ನನ್ನು ಕಟ್ಟಿಕೊಂಡು ನೀನೇನ ಮಾಡಬಲ್ಲೆ?

ತಮ್ಮನ್ನು ನನ್ನ ಭುಜದ ಮೇಲೆ ಎತ್ತಿ ಈಸಿಕೊಂಡು ಹೋಗಬಲ್ಲೆನು. ನಾನೆಂದಿಗೂ ತಮ್ಮನ್ನು ಬಿಟ್ಟು ಹೋಗುವುದಿಲ್ಲ

ಹೀಗೆಂದ ಧರ್ಮದೇವನ ದಯಾಳುವಾದ ಮನಸ್ಸನ್ನೂ ದೃಢಸಂಕಲ್ಪವನ್ನೂ ನೋಡಿ, ಆನಂದನು ಸಂತೋಷಪಟ್ಟು ಹಾಗೆಯೇ ಆಗಲಿ, ದೇವರು ನಿನಗೆ ಒಳ್ಳೆಯದನ್ನು ಮಾಡಲಿ! ನಿನ್ನ ಕಾರ್ಯಗಳೆಲ್ಲಾ ಕೈಗೂಡಲಿ ಎಂದು ಹರಸಿ, ಈಗ ತೋಡಿರುವ ಸುರಂಗವು ಹಾಗೆಯೇ ಇದ್ದರೆ ಸರಿಯಲ್ಲ, ಅದನ್ನು ಸದ್ಯಕ್ಕೆ ಮುಚ್ಚಿರು ಎಂದನು

---

## ಹದಿನಾರನೆಯ ಅಧ್ಯಾಯ.

### ನಿಕ್ಷೇಪ.

ತನ್ನ ಬಿಲದಿಂದ ಮಾಡಿದ್ದ ಸುರಂಗವನ್ನು ಮುಚ್ಚುವುದರಲ್ಲಿಯೇ ಎರಡು ದಿವಸಗಳನ್ನು ಕಳೆದು, ಮೂರನೆಯ ದಿನ ಬೆಳಿಗ್ಗೆ ಆನಂದನ ಯೋಗಕ್ಷೇಮವನ್ನು ವಿಚಾರಿಸಲೋಸುಗ ಧರ್ಮದೇವನು ಅವನ ಬಿಲಕ್ಕೆ ಹೋದನು ಅವನನ್ನು ನೋಡಿ ಆನಂದನು ತನ್ನ ಬಲಗೈಯಲ್ಲಿ ಇಟ್ಟುಕೊಂಡು ನೋಡುತ್ತಲಿದ್ದ ಅರ್ಧ ಸುಟ್ಟಿದ್ದ ಒಂದು ಸಣ್ಣ ಕಾಗದದ ಸುರುಳಿಯನ್ನು ಅವನ ಮುಂದೆ ನೀಡಲು, ಧರ್ಮದೇವನು ಇದೇನೆಂದು ಕೇಳಿದನು ಅದಕ್ಕೆ ಆನಂದನು ಓದಿನೋಡು, ತಿಳಿಯುವುದು ಎಂದನು.

ಈ ಕಾಗದದಲ್ಲಿ ಬರೆದಿರುವುದು ಇಂತಹುದೆಂದು ಗೊತ್ತಾಗುವುದಿಲ್ಲ, ಇದೂ ಅಲ್ಲದೆ ಅರ್ಧ ಬರವಣಿಗೆಯೆಲ್ಲಾ ಸುಟ್ಟುಹೋಗಿದೆ.

ಅಪ್ಪಾ! ಇದೇ ನನ್ನ ಧನ; ಇಂದಿನಿಂದ ಈ ಧನದಲ್ಲಿ ಅರ್ಧ ನಿನ್ನದೆಂದು ಸಂಕಲ್ಪಿಸಿರುತ್ತೇನೆ ಈ ಧನದ ವಿಷಯವಾಗಿ ನಾನೆಷ್ಟು ಹೇಳಿದರೂ ಯಾರೂ ನನ್ನ ಮಾತನ್ನು ನಂಬದೆ ಇವನಿಗೆಲ್ಲೋ ಹುಚ್ಚು ಹಿಡಿದಿದೆ ಎಂದು ಹೇಳುತ್ತಾರ; ನನ್ನ ಸಮಾಚಾರವನ್ನೆಲ್ಲಾ ಚೆನ್ನಾಗಿ ಬಲ್ಲ ನೀನು ನನಗೆ ಹುಚ್ಚು ಹಿಡಿದಿಲ್ಲವಂದು ಬಲ್ಲೆ.

ಈ ಅಮೌಲ್ಯವಾದ ಕಾಗದವನ್ನು ಇದುವರೆಗೂ ನಾನು ಆರಿಗೂ ತೋರಿಸಿರಲಿಲ್ಲ, ನಿನ್ನ ಶೀಲಸ್ವಭಾವಗಳನ್ನು ನಾನು ಚೆನ್ನಾಗಿ ಪರೀಕ್ಷಿಸಿ ಮೆಚ್ಚಿರುವುದರಿಂದ ನಿನಗೆ ಈಗ ತೋರಿಸುವೆನು "ನಿಮ್ಮ ಧನ" ಎಂದು ಧರ್ಮದೇವನು ವ್ಯಸನಾಕ್ರಾಂತನಾದನು.

ಧರ್ಮದೇವನೂ ಎಲ್ಲರಂತೆಯೇ ಆನಂದನು ಹುಚ್ಚನೆಂದು ಮೊದಲು ತಿಳಿದಿದ್ದನು. ಆನಂದನ ಸಂಗಡ ಕೂಡಾಡಿ ಅವನಲ್ಲಿ ವಿದ್ಯಾಭ್ಯಾಸ ಮಾಡಿದ ಮೇಲೆ ಅವನ ಬುದ್ಧಿಯು ಸರಿಯಾಗಿದೆ ಎಂದು ತಿಳಿದನು. ಇಷ್ಟು ದಿವಸಗಳ ವರೆಗೂ ಆನಂದನು ಈ ಧನದ ಪ್ರಸ್ತಾಪವನ್ನು ಮಾಡದಿದ್ದುದರಿಂದ ಈ ಹುಚ್ಚು ಬಿಟ್ಟು ಹೋಯಿತೆಂದು ಸಂತೋಷವಾಗಿದ್ದನು. ಈಗ ಆನಂದನು ಪುನಃ ಆ ಪ್ರಸ್ತಾಪವನ್ನು ಮಾಡಲು ಅಯ್ಯೋ ಪಾಪ! ಇವನಿಗೆ ಬಂದಿದ್ದ ವ್ಯಾಧಿಯ ದೆಸೆಯಿಂದ ಈ ಹುಚ್ಚು ಮರಳಿ ಬಂದಿತಲ್ಲಾ ಎಂದು ವ್ಯಸನಪಟ್ಟನು.

ಆನಂದನು ಧರ್ಮದೇವನ ಅಭಿಪ್ರಾಯವನ್ನು ತಿಳಿದು ಅಪ್ಪಾ! ನಿನ್ನ ವ್ಯಸನಕ್ಕೆ ಕಾರಣವನ್ನು ನಾನು ಬಲ್ಲೆ, ನಾನು ಹುಚ್ಚನಲ್ಲ ಈ ಧನವಿರುವುದು ವಾಸ್ತವ, ಅದನ್ನು ಅನುಭವಿಸುವ ಪ್ರಾಪ್ತಿ ನನಗಿಲ್ಲವೆಂದು ತೋರುತ್ತದೆ; ನೀನಾದರೂ ಅನುಭವಿಸುವನಾಗು. ಅದರ ಸಮಾಚಾರವನ್ನು ನಿನಗೆ ಹೇಳುವೆನು; ನಿಧಾನವಾಗಿ ಕೇಳು, ಎಂದನು.

ಇಷ್ಟು ಹೇಳಿದರೂ ಧರ್ಮದೇವನಿಗೆ ನಂಬುಗೆಯುಂಟಾಗದೆ ಸ್ವಾಮೀ, ತಮಗೆ ಬಂದಿರುವ ರೋಗವು ಪರಿಹಾರವಾದರೂ, ಅದರ ಉತ್ತರಾವಸ್ಥೆಯು ಇನ್ನೂ ನಿವಾರಣೆಯಾಗಲಿಲ್ಲವೆಂದು ತೋರುತ್ತದೆ ಆದುದರಿಂದ ಈಗ ತಮಗೆ ಬೇಕಾಗಿರುವುದು ಉಪಚಾರವೇ ಹೊರತು ಧನವಲ್ಲ. ಧನದ ವಿಚಾರ ಮತ್ತೊಂದು ವೇಳೆ ಆಗಲಿ ಎಂದನು.

ಈ ರೋಗವು ಮೂರನೆಯ ಸಾರಿ ಬಂದರೆ ನಾನು ಬದುಕಲಾರೆನೆಂದು ವೈದ್ಯನು ಹೇಳಿದ್ದನು, ನನಗೂ ಹಾಗೆಯೇ ತೋರುತ್ತದೆ. ಇದು ಪುನಃ ಆವಾಗ ಬರುವುದೋ ಗೊತ್ತಿಲ್ಲವಾದುದರಿಂದ, ಈ ಧನದ ವಿಷಯವನ್ನು ಎಷ್ಟು ಜಾಗ್ರತೆಯಾಗಿ ನಿನಗೆ ತಿಳಿಸಿದರೆ ಅಷ್ಟು ಒಳ್ಳೆಯದು ಎಂದ ಮಾತನ್ನು ಕೇಳುತ್ತಲೇ ಧರ್ಮದೇವನು ಮುಖವನ್ನು ಮರೆಮಾಡಿಕೊಂಡು ನಿಟ್ಟುಸಿರುಬಿಟ್ಟನು. ಇದನ್ನು ನೋಡಿದ ಯೋಗಾನಂದನು ಅಪ್ಪಾ! ನಿನಗೆ ಇನ್ನೂ ಅನುಮಾನ ಬಿಡಲಿಲ್ಲ; ವಿಷಯವನ್ನು ಚೆನ್ನಾಗಿ ಪರೀಕ್ಷಿಸಿದ

ಹೊರತು ನಿನ್ನ ಅನುಮಾನವು ಪರಿಚ್ಛೇದವಾಗಲಾರದು ಇಗೋ! ಈ ಕಾಗದವನ್ನು ಓದಿ ನೋಡು ಎಂದು ಹೇಳಿ ಅವನ ಕೈಯಲ್ಲಿ ಮತ್ತೊಂದು ಕಾಗದವನ್ನು ಕೊಟ್ಟನು. ಓದದಿದ್ದರೆ ಆನಂದನಿಗೆ ಎಲ್ಲಿ ಅಸಮಾಧಾನವಾದೀತೋ ಎಂಬ ಭೀತಿಯಿಂದ ಧರ್ಮದೇವನು ಅದನ್ನು ಓದಿ ನೋಡಿದನು ಅದರಲ್ಲಿ ಈ ರೀತಿಯಿದ್ದಿತು.

ನನ್ನನ್ನು ವಿಷವಿಟ್ಟು ಕೊಂದು ನನ್ನ ಆಸ್ತಿ.. ...... ............ . ..
ಕೆಂಬ ಯೋಚನೆಯು ನಮ್ಮ . . .. ... ..... .. .. . ... .. ...........
ಹು ದಿವಸಗಳಿಂದ ಇರುವುದೆಂ... .... .... .. ..... . . ..... ...
ಸಂಭವಿಸುವುದೋ ಎಂಬ ಭೀತಿಯಿಂದ .. .. .. .. ....... .. ... .....
ಕೋಟಿ ವರಹಗಳ ಬೆಲೆಯುಳ್ಳ ನನ್ನಲ್ಲಿರತಕ್ಕ ವಜ್ರ . ..... . ..... .........
ರ ಅಮೌಲ್ಯವಾದ ರತ್ನಗಳು, ಮುತ್ತುಗಳು ... .. . .... ....... ........ ..
ಚಿನ್ನದ ನಾಣ್ಯಗಳು, ಆಭರಣಗಳು .. . .. .... .... ..... ............
ದ್ವೀಪದ ಗುಹೆಯಲ್ಲಿರುವ ........ . .. .. .... ..... ...............
ಲೆಯಲ್ಲಿ ನಿಕ್ಷೇಪ ಮಾಡಿರುವೆನು ........ .. .. .. . ............... ...
ತ್ತನೆಯು ಕಲ್ಲನ್ನೆತ್ತಿದರೆ . . ..... ..... ... ....................
ಹೆಯು ವಾಯುವ್ಯ . .. ..... . ....... ... ........ ..................
ಮೇಲೆ ಕಂಡ ನನ್ನ ಆಸ್ತಿಯನ್ನೆಲ್ಲಾ... . .. ........ ..... . ... ..
ನಿಗೆ ದಾನಮಾಡಿರುವೆನು .... .. . . .. ..... . ........ ...........

ನಾ ....... .. .. .. . ....................

ಪ್ರ . .. .. .. ....

ಅದನ್ನು ಓದಿದ ಮೇಲೆ ಧರ್ಮದೇವನು ನನಗೆ ಇದು ಅರ್ಥವೇ ಆಗಲಿಲ್ಲ ಎಂದನು

ಅದು ನಿನಗೆ ಈಗ ಅರ್ಥವಾಗಲಾರದು. ಅದರ ಪೂರ್ವೋತ್ತರಗಳು ತಿಳಿದು ಮತ್ತೊಂದು ಭಾಗವನ್ನೂ ಓದಿನೋಡಿದರೆ ಆಮೇಲೆ ಗೊತ್ತಾಗುವುದು.

ಸ್ವಾಮೀ! ಈ ಧನವು ಇರುವುದೆಂದು ತಾವು ನಂಬಿರುವಿರೋ ?

ನನಗೆ ಆ ನಂಬುಗೆಯುಂಟು, ಹಿಂದಣ ಕಥೆಯನ್ನು ಕೇಳಿದರೆ ನಿನಗೂ ನಂಬುಗೆಯುಂಟಾಗುವುದು ಅದನ್ನು ಸಾವಧಾನವಾಗಿ ಕೇಳು

ಆ ಕಥೆಯನ್ನು ಕೇಳಲು ಧರ್ಮದೇವನಿಗೆ ಇಷ್ಟವಿರಲಿಲ್ಲ ಅವನ ಅಭಿಪ್ರಾಯದಲ್ಲಿ ಆನಂದನ ಧನವು ಕನಸಿನ ಗಂಟೆಂತಿದ್ದಿತು ಆದರೂ ಆನಂದನಿಗೆ ಅಸಮಾಧಾನವಾಗದಿರಬೇಕೆಂದು ಅವನ ಕಥೆಯನ್ನು ಕೇಳಲು ಕುಳಿತನು ಅಷ್ಟರಲ್ಲಿಯೇ ಬಿಲದ ಹೊರಗೆ ಆರೋ ಜನರು ಬರುವ ಸದ್ದಾಯಿತು ಒಡನೆಯೇ ಸನ್ಯಾಸಿಯಿಂದ ತಪ್ಪಿಸಿಕೊಂಡು ಹೋಗಲು ಅನುಕೂಲವಾದ ಸಮಯವು ಸಿಕ್ಕಿತೆಂದು ಧರ್ಮದೇವನು ತಟ್ಟನೆದ್ದು, ಸುರಂಗದ ಬಾಗಿಲನ್ನು ಮುಚ್ಚಿಕೊಂಡು ತನ್ನ ಬಿಲವನ್ನು ಸೇರಿದನು.

ಅತ್ತ ಆನಂದನು ತನ್ನ ಕೈಯಲ್ಲಿದ್ದ ಕಾಗದದ ಚೂರುಗಳನ್ನು ಹಾಸಿಗೆಯ ಕೆಳಗೆ ಮುಚ್ಚಿಟ್ಟು ಸುರಂಗದ ಬಾಯಿಗೆ ಮುಚ್ಚಿದ್ದ ಕಲ್ಲಿನ ಮೇಲೆ ತನ್ನ ಹಳೇ ಚಾಪೆಯನ್ನು ಹಾಸಿ ಅದರ ಮೇಲೆ ಎಂದಿನಂತೆ ಕುಳಿತಿದ್ದನು ಬಿಲದ ಬಾಗಿಲು ತೆಗೆಯುತ್ತಲೆ, ಅಧಿಕಾರಿಯು ಒಳಕ್ಕೆ ಬಂದನು. ಅವನನ್ನು ನೋಡಿದ ಕೂಡಲೆ, ತನ್ನ ವ್ಯಾಧಿಯ ಸಮಾಚಾರವನ್ನು ಆಳಿನಿಂದ ತಿಳಿದು ತನ್ನ ಯೋಗಕ್ಷೇಮವನ್ನು ವಿಚಾರಿಸಲು ಬಂದಿರುವನೆಂದು ಊಹಿಸಿ, ತಾನು ವ್ಯಾಧಿಗ್ರಸ್ತನೆಂದು ತಿಳಿದರೆ ಈ ಕೂಪವನ್ನು ತಪ್ಪಿಸಿ ಬೇರೆ ಕಡೆ ಕಳುಹಿಸಿದರೆ ಎಲ್ಲಿ ಧರ್ಮದೇವನ ಸಹವಾಸವು ತಪ್ಪಿಹೋಗುವುದೋ ಎಂದು ದಿಗಿಲುಪಟ್ಟು, ಸ್ವಸ್ಥವಾಗಿದ್ದವನಂತೆ ನಟಿಸಿದನು. ಅಧಿಕಾರಿಯು ಆನಂದನನ್ನು ನೋಡಿ ಇವನಿಗೆ ಎಲ್ಲಿಯೋ ದೇಹವು ಜಡವಾಗಿದ್ದಿರಬೇಕು ಎಂದು ಗೊಣಗುಟ್ಟುತ್ತ ಹೊರಟು ಹೋದನು

ತನ್ನ ಕೂಪವನ್ನು ಸೇರುತ್ತಲೆ, ಧರ್ಮದೇವನಿಗೆ ನಾನಾವಿಧವಾದ ಆಲೋಚನೆಗಳುಂಟಾದವು ಸನ್ಯಾಸಿಯ ಮನೋವ್ಯಾಪಾರವನ್ನೂ ಮಾತುಕತೆಗಳನ್ನೂ ನೋಡಿದರೆ ಅವನನ್ನು ಹುಚ್ಚನೆಂದು ಹೇಳುವವರೇ ಹುಚ್ಚರು, ಧನದ ವಿಚಾರ ನೋಡಿದರೆ ಅವನಿಗೆ ಹುಚ್ಚಿಲ್ಲವೆಂದು ಹೇಳದೆ ಇರುವುದಕ್ಕಾಗುವುದಿಲ್ಲ, ಈ ಧನವು ಕುದುರೆಯ ಕೊಂಬಿನಂತೆಯೋ, ಇಲ್ಲ ನಿಜವೋ? ಅವನಿಗೆ ಇಷ್ಟು ಧನವಿದ್ದಿದ್ದರೆ ಅವನು ಈ ಗತಿಗೆ ಏಕೆ ಬರುತ್ತಲಿದ್ದನು? ಒಂದು ವೇಳೆ ಅದು ಇನ್ನೂ ಅವನ ಕೈಗೆ ಸಿಕ್ಕಿರಲಾರದು, ಅಥವಾ ಅದನ್ನು ಅನುಭವಿಸುವ ಪ್ರಾಪ್ತಿಯಿಲ್ಲದೆ ಇರಬಹುದು. ಮಿಕ್ಕಾದ ವಿಷಯ

ಗಳಲ್ಲೆಲ್ಲಾ ಬುದ್ಧಿವಂತನಾಗಿಯೂ ವಿವೇಕಿಯಾಗಿಯೂ ಇರುವ ಅವನು ಈ ಧನದ ವಿಷಯದಲ್ಲಿ ಮಾತ್ರ ಹುಚ್ಚನೆಂದರೆ ನಂಬಲಾವೀತೇ? ಆದರೆ ಲೋಕದಲ್ಲಿ ಕೆಲವರು ಏಕವಿಷಯೋನ್ಮತ್ತರಾಗಿರುವರೆಂದು ಕೇಳಿದ್ದೇನೆ, ಅವನೂ ಏತಕ್ಕೆ ಅಂಧವನಾಗಿರ ಬಾರದು ಎಂದು ಈ ರೀತಿಯಾಗಿ ಪರಸ್ಪರವಿರೋಧಾಲೋಚನೆಗಳು ಹುಟ್ಟಿ ಅವು ದನ್ನೂ ನಿರ್ಣಯಿಸಲರಿಯದೆ ಧರ್ಮದೇವನು ಯೋಚಿಸುತ್ತಿರಲು, ಆನಂದನು ತನ್ನ ಬಿಲ ದಿಂದ ಕಷ್ಟಪಟ್ಟುಕೊಂಡು, ಧರ್ಮದೇವನ ಬಿಲಕ್ಕೆ ಬಂದು ಅಪ್ಪಾ! ನಾನು ಕೊಡ ಬೇಕೆಂದಿರುವ ದಾನವನ್ನು ಸ್ವೀಕರಿಸಕೂಡದೆಂದು ನೀನು ಎಷ್ಟು ತಪ್ಪಿಸಿಕೊಂಡು ಹೋದರೂ ನಾನು ಬೇರೆ ನಿನ್ನನ್ನು ಬಿಡುವನಲ್ಲ ಈ ಧನದ ವಿಚಾರವನ್ನು ನಿನಗೆ ತಿಳುಹಬೇಕೆಂಬ ಕುತೂಹಲದಿಂದ ಕಷ್ಟಪಟ್ಟುಕೊಂಡು ಇಲ್ಲಿಗೆ ಬಂದೆನು ಎಂದನು.

ಆನಂದನಿಂದ ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲವೆಂದು ತಿಳಿದು ಧರ್ಮದೇವನು ಅವನನ್ನು ತನ್ನ ಮಂಚದ ಮೇಲೆ ಕುಳ್ಳಿರಿಸಿ ತಾನು ಒಂದು ಕಾಲುಮಣೆಯ ಮೇಲೆ ಕುಳಿತನು ಆನಂದನು ತನ್ನ ಕಥೆಯನ್ನು ಈ ರೀತಿ ಪ್ರಾರಂಭಿಸಿದನು

ಈಗ ಸುಮಾರು ಮುನ್ನೂರು ವರ್ಷಗಳ ಹಿಂದೆ ಕಳಿಂಗವೆಂಬುದೊಂದು ದೊಡ್ಡ ರಾಜ್ಯವಿದ್ದಿತು ಆ ರಾಜ್ಯದಲ್ಲಿ ದುಷ್ಟಬುದ್ಧಿಯೆಂಬ ಒಬ್ಬ ದೊರೆಯು ಇದ್ದನು. ಬಾಲ್ಯದಲ್ಲಿಯೇ ಅವನ ತಂದೆಯು ಕಾಲವಾದುದರಿಂದ, ಪ್ರಧಾನನಾಗಿದ್ದ ನಾಗೇಂದ್ರ ನೆಂಬುವನು ದುಷ್ಟಬುದ್ಧಿಗೆ ಪಟ್ಟಾಭಿಷೇಕಮಾಡಿ, ಅವನ ಹೆಸರಿನಲ್ಲಿ ತಾನು ರಾಜ್ಯ ವಾಳುತ್ತಿದ್ದನು.

ನಾಗೇಂದ್ರನು ದೊಡ್ಡ ಮನೆತನದವನು: ಅವನ ಪೂರ್ವಿಕರೆಲ್ಲರೂ ಶ್ರೀಮಂತ ರಾಗಿಯೂ ವಿವೇಕಿಗಳಾಗಿಯೂ ಇದ್ದುದರಿಂದ ಹಿರಿಯರು ಗಳಿಸಿಟ್ಟಿದ್ದ ಧನವನ್ನು ಕಾಪಿಟ್ಟುಕೊಂಡು ಬಂದುದಲ್ಲದೆ ತಾವು ಗಳಿಸುವ ಧನದಿಂದ ವೃದ್ಧಿಪಡಿಸುತ್ತಲೂ ಇದ್ದರು ಅವರ ಕಾಲಾನಂತರ ಆ ಧನವೆಲ್ಲಾ ನಾಗೇಂದ್ರನಿಗೆ ಸೇರಿತು. ಇವನಿಗೆ ಬಹುಕಾಲ ಮಕ್ಕಳಿಲ್ಲದೆ ಇದ್ದು, ಅನಂತರ ಒಬ್ಬ ಮಗನು ಹುಟ್ಟಿ, ಹದಿನೆಂಟು ವಯಸ್ಸು ಬಳೆದು ಮೃತಪಟ್ಟನು. ಮಗನು ಹೋದ ಆರುತಿಂಗಳಲ್ಲಿಯೇ ಅವನ ಮಡದಿಯೂ ದೈವಾಧೀನೆಯಾದಳು. ಅಪರವಯಸ್ಸಾಗಿದ್ದುದರಿಂದ ನಾಗೇಂದ್ರನು ಪುನರ್ವಿವಾಹದ

ಯೋಚನೆಯನ್ನು ಬಿಟ್ಟು ತನ್ನ ಸಂಪಾದನೆಯನ್ನೆಲ್ಲಾ ವಿಶೇಷವಾಗಿ ದಾನಧರ್ಮಂಗಳಂ ಮಾಡುವುದರಲ್ಲಿ ವೆಚ್ಚಮಾಡುತ್ತಲಿದ್ದನು

ದುಷ್ಟಬುದ್ಧಿಯು ಪ್ರಾಪ್ತವಯಸ್ಕನಾದ ಮೇಲೆ ರಾಜ್ಯಭಾರವನ್ನು ತಾನೇ ವಹಿಸಿ ದುರ್ಮಂತ್ರಿಗಳ ಸಹವಾಸಬೋಧನೆಗಳಿಂದ ನಾಗೇಂದ್ರನು ಗಳಿಸಿ ಬಂಡಾರದಲ್ಲಿಟ್ಟಿದ್ದ ದ್ರವ್ಯವನೆಲ್ಲ ದುರುಪಯೋಗಪಡಿಸಿದುದಲ್ಲದೆ, ನಾಗೇಂದ್ರನು ತನ್ನಲ್ಲಿರುವ ಅಪಾರವಾದ ಧನವನ್ನು ತನ್ನ ಸೋದರಳಿಯ ಮಹೇಂದ್ರನಿಗೆ ಕೊಟ್ಟುಬಿಟ್ಟನು. ಅವರಿಬ್ಬರನ್ನೂ ವಿಷಹಾಕಿ ಕೊಂದರೆ ಜನಗಳ ದೂರಿಗೆ ಸಿಕ್ಕದ, ಹಣವನ್ನೆಲ್ಲ ತನ್ನ ಭಂಡಾರಕ್ಕೆ ಸೇರಿಸಿ ಕೊಳ್ಳಬಹುದೆಂಬ ದುರಾಲೋಚನೆಯಿಂದ, ಅವರಿಬ್ಬರಿಗೂ ವಿಷಪ್ರಾಶನಮಾಡಿಸಲು ತಕ್ಕ ಏರ್ಪಾಡುಗಳನ್ನೆಲ್ಲಾ ಮಾಡಿಸಿದನು

ನಾಗೇಂದ್ರನು ಎಲ್ಲಿ ಹೋಗುವುದಕ್ಕೂ ದಿಕ್ಕು ತೋಚದೆ ದೇವರು ಮಾಡಿದ ಹಾಗಾಗಲಿ ಎಂದು ಸುಮ್ಮನಿದ್ದನು ಅವನಿಗೆ ತನ್ನ ಸೋದರಳಿಯನನ್ನು ದೊರೆಯು ಕೊಲ್ಲಿಸುವನೆಂಬ ಸಂಗತಿಯು ತಿಳಿಯದು ಆದುದರಿಂದ ತನ್ನ ಮರಣಶಾಸನವನ್ನು ಬರೆದಿಟ್ಟು ಮಹೇಂದ್ರನಿಗೆ ಕೆಲವು ಸಮಾಚಾರಗಳನ್ನು ಹೇಳಿ ಕಳುಹಿಸಿದ್ದನು ಮಹೇಂದ್ರನಿಗೆ ಈ ಸಮಾಚಾರಗಳು ಸೇರುವುದರೊಳಗಾಗಿ ಸಮಯವನ್ನು ನಿರೀಕ್ಷಿಸುತ್ತ ಲಿದ್ದ ದೊರೆಯು, ಅವರಿಬ್ಬರನ್ನೂ ಏಕಕಾಲದಲ್ಲಿಯೇ ಕೊಲ್ಲಿಸಿ, ನಾಗೇಂದ್ರನ ಮನೆ ಯನ್ನು ಶೋಧನೆಮಾಡಿಸಲು, ಕೆಲವು ಬೆಳ್ಳಿ ಪಾತ್ರೆಗಳು ಚಿನ್ನದ ಒಡವೆಗಳು ವಿನಾ ಬೇರಾವುದೂ ಸಿಕ್ಕಲಿಲ್ಲ ಅನಂತರ ನಾಗೇಂದ್ರನ ಮರಣಶಾಸನವನ್ನು ನೋಡಲು ತನ್ನ ಆಸ್ತಿಯನ್ನೆಲ್ಲಾ ಸೋದರಳಿಯ ಮಹೇಂದ್ರನಿಗೆ ಕೊಟ್ಟಿರುವಂತೆಯೂ, ವಂಶ ಪಾರಂಪರ್ಯವಾಗಿ ಬಂದಿರುವ ಸ್ತೋತ್ರರತ್ನವೆಂಬ ಗ್ರಂಥವನ್ನು ಆರಿಗೂ ಕೊಡದಂತೆ ತನ್ನ ಜ್ಞಾಪಕಾರ್ಥವಾಗಿ ಅವನೇ ಇಟ್ಟುಕೊಂಡು ವಿಶ್ವಾಸಪೂರ್ವಕ ಕಾಪಿಟ್ಟುಕೊಂಡು ಬರಬೇಕೆಂತಲೂ ಇದ್ದಿತು ಪುಸ್ತಕಗಳು, ಕುರ್ಚಿ, ಮೇಜು ಮುಂತಾದ ಬೆಲೆಯಿಲ್ಲದೆ ಇರುವ ಪದಾರ್ಥಗಳು ವಿನಾ ಮಿಕ್ಕವೆಲ್ಲವನ್ನೂ ದೊರೆಯ ಕಡೆಯವರು ದೋಚಿ ಕೊಂಡು ಹೋದರು. ಈ ವಂಶದವರಲ್ಲಿದ್ದ ಅಪಾರವಾದ ಧನವು ಏನಾಯಿತೆಂಬುದು ಆರಿಗೂ ಗೊತ್ತಾಗಲಿಲ್ಲ.

ಮಹೇಂದ್ರನು ಸತ್ತಾಗ ಅವನ ಹೆಂಡತಿಯು ಗರ್ಭಿಣಿಯಾಗಿದ್ದಳು ಕೆಲವು

ಮಾಸಗಳಾದ ಬಳಿಕ ಅವಳಿಗೆ ಒಬ್ಬ ಗಂಡುಮಗನು ಹುಟ್ಟಿ ಮಹೇಂದ್ರವಂಶವು ಅಂಕುರಿತವಾಯಿತು. ಈ ವಂಶದವರು ಬಹುಕಾಲ ಬಡವರಾಗಿದ್ದು ಕೊನೆಗೆ ಕಳಿಂಗ ದೇಶವನ್ನು ಬಿಟ್ಟು ಇಂದ್ರಪ್ರಸ್ಥದಲ್ಲಿ ನೆಲೆಗೊಂಡು, ಇವರಲ್ಲಿ ಕೊನೆಯವನಾದ ಜಿತೇಂ ದ್ರಿಯನೆಂಬುವನು ಸಕಲಶಾಸ್ತ್ರಪಾರಂಗತನಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಪರಮಾನಂದನೆಂಬ ಹೆಸರಿನಿಂದ ಬೆಳಗುತ್ತಿದ್ದನು. ನಾನು ಅವನಿಗೆ ಶಿಷ್ಯನಾಗಿ ಬಹು ಕಾಲ ಅವನಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಅವನ ಅಪ್ಪಣೆಯಮೇರೆಗೆ ಅವನಲ್ಲಿದ್ದ ಕಾಗದ ಪತ್ರಗಳನ್ನೆಲ್ಲಾ ಓದಿ ಅವನ ವಂಶಚರಿತ್ರೆಯನ್ನು ಬರೆದೆನು ನಾನು ಓದಿದ ಕಾಗದ ಪತ್ರಗಳಿಂದ ಪರಮಾನಂದನ ವಂಶದವರೆಲ್ಲರೂ ಶ್ರೀಮಂತರಾಗಿದ್ದರೆಂದು ತಿಳಿಯಬಂದಿತು; ಆದರೆ ಅವರು ಗಳಿಸಿಟ್ಟಿದ್ದ ಅಪರಿಮಿತವಾದ ಧನವೇನಾಯಿತೆಂಬು ವುದು ಮಾತ್ರ ತಿಳಿಯಲಿಲ್ಲ. ಅದು ವ್ಯಯವಾಗದೆಯೂ ಅಪಹರಿಸಲ್ಪಡದೆಯೂ ಇದೆ ಯೆಂಬ ಸಂಗತಿ ಮಾತ್ರ ಚೆನ್ನಾಗಿ ದೃಢವಾಯಿತು ಅಂದಿನಿಂದ ನಾನೂ ಪರಮಾ ನಂದನೂ ಮನೆಯಲ್ಲಿದ್ದ ಪ್ರತಿಯೊಂದು ಕಾಗದವನ್ನೂ ಪುಸ್ತಕವನ್ನೂ ನೋಡಿ ನೋಡಿ ಕೊನೆಗೆ ಬೇಸತ್ತು, ಆ ಧನದ ಹಂಬಲನ್ನೇ ಬಿಟ್ಟು ಬಿಟ್ಟೆವು.

ಪರಮಾನಂದನಿಗೆ ಅಂತ್ಯಕಾಲವು ಸಮೀಪಿಸಿತು. ಆಗ ಆತನು ನನ್ನನ್ನು ಕರೆದು ಅಯ್ಯಾ, ನಾನು ಸನ್ಯಾಸಿಯಾದುದರಿಂದ ನನಗೆ ಹೆಂಡತಿ ಮಕ್ಕಳು ಆರೂ ಇಲ್ಲ; ನಮ್ಮ ವಂಶದವರು ಒಬ್ಬರೂ ಇಲ್ಲ ನೀನು ನನ್ನ ಶಿಷ್ಯನಾದುದರಿಂದ ನೀನೇ ನನ್ನ ಮಗ, ನನ್ನ ಸರ್ವಸ್ವವನ್ನೂ ನಿನಗೆ ಕೊಟ್ಟಿರುವೆನು ಎಂದು ಹೇಳಿ ಸ್ವರ್ಗಸ್ಥನಾದನು ಅವನಿಗೆ ಮಾಡಬೇಕಾದ ಉತ್ತರಕ್ರಿಯೆಗಳನ್ನೆಲ್ಲಾ ನಾನೇ ಮಾಡಿ ಅವನ ಮನೆಯ ಲ್ಲಿಯೇ ವಾಸಮಾಡುತ್ತ ಸ್ತೋತ್ರರತ್ನವು ಶ್ಲಾಘ್ಯವಾದ ಗ್ರಂಥವಾಗಿದ್ದುದರಿಂದ ಆವಾ ಗಲೂ ಅದನ್ನೇ ಓದುತ್ತ ಕಾಲವನ್ನು ಕಳೆಯುತ್ತಲಿದ್ದೆನು.

ಇಂದ್ರಪ್ರಸ್ಥದಲ್ಲಿ ಬೇಸಗೆಯಲ್ಲಿ ಬಲು ಬಿಸಿಲು; ಚಳಿಗಾಲದಲ್ಲಿ ಬಲು ಚಳಿ. ಚಳಿಗಾಲದಲ್ಲಿ ರಾತ್ರಿಯೂ ಹಗಲೂ ಬೆಂಕಿಯನ್ನು ಕಾಯದಿದ್ದರೆ ಸಹಿಸುವುದು ಕಷ್ಟ ವಾದುದರಿಂದ, ಕುಳಿತು ಮಲಗುವ ಕೊಟ್ಟಡಿಗಳಲ್ಲಿ ಆವಾಗಲೂ ಕುಂಪಟಿಯು ಇದ್ದೇ ಇರಬೇಕು ನನ್ನನ್ನು ಸೆರೆ ಹಿಡಿಯುವುದಕ್ಕೆ ಹದಿನೈದು ದಿವಸಗಳ ಹಿಂದೆ ಒಂದು ದಿನ ರಾತ್ರಿ ಎಂದಿನಂತೆ ನಾನು ಓದುತ್ತಲಿದ್ದಾಗ, ಆ ದಿನ ನನಗೆ ಔತಣದ ಊಟವಾಗಿದ್ದು

ದರಿಂದ, ಹಾಗೆಯೇ ಕುರ್ಚಿಯ ಮೇಲೆ ಕುಳಿತು ಓದುತ್ತಲಿದ್ದವನು ನಿದ್ದೆ ಹೋದೆನು ಸುಮಾರು ಅರ್ಧರಾತ್ರಿಯಲ್ಲಿ ಎಚ್ಚರವಾಗಿ ಕಣ್ಣು ತೆರದು ನೋಡಿದನು. ದೀಪವು ನೊಂದಿಹೋಗಿ ಅಗ್ಗಿಷ್ಟಿಕೆಯೂ ಬೆಂಕಿಯೂ ತಣ್ಣಗಾಗುವುದರಲ್ಲಿದ್ದಿತು ದೀವಿಗೆ ಹೊತ್ತಿಸಲೋಸುಗ ಬೆಂಕಿಯ ಕಡ್ಡಿಯನ್ನು ಹುಡುಕಿದೆನು ಅದು ಸಿಕ್ಕಲಿಲ್ಲ, ಅಗ್ಗಿಷ್ಟಿಕೆಯ ಬೆಂಕಿಯಲ್ಲಿ ದೀಪವನ್ನು ಹೊತ್ತಿಸಿ ಹಾಸಿಗೆಯನ್ನು ಹಾಸಿಕೊಂಡು ಮಲಗೋಣವೆಂದು ಯೋಚಿಸಿ ಕಾಗದದ ಚೂರನ್ನು ಹುಡುಕಿದೆನು. ಅದೂ ಕೈಗೆ ಸಿಕ್ಕದೆ ಇದ್ದುದರಿಂದ ಸ್ತೋತ್ರರತ್ನಗ್ರಂಥದಲ್ಲಿ ಗುರುತಿಗಾಗಿ ಇಟ್ಟಿದ್ದ ಬರಿಯ ಕಾಗದದ ಚೂರು ಜ್ಞಾಪಕಕ್ಕೆ ಬಂದು ಅದನ್ನು ತೆಗದು ಸುರಳಿಸುತ್ತಿ ಬೆಂಕಿಯಲ್ಲಿಟ್ಟು ಹೊತ್ತಿಸಿದೆನು. ಅದಕ್ಕೆ ಉರಿ ತಗುಲಿದ ಕೂಡಲೆ ಅದರಲ್ಲಿ ಅಕ್ಷರಗಳು ಸ್ಪಷ್ಟವಾಗಿ ಕಾಣಿಸಿದುವು. ಅದನ್ನು ನೋಡಿ ನನಗೆ ಆಶ್ಚರ್ಯವುಂಟಾಗಿ ತಟ್ಟನೆ ಆ ಉರಿಯನ್ನು ಆರಿಸಿ ಬೇರೆ ಕಾಗದವನ್ನು ತೆಗೆದು ಅದರಿಂದ ದೀಪವನ್ನು ಹೊತ್ತಿಸಿದೆನು ಬಳಿಕ ನಾನು ಆ ಅರ್ಧ ಸುಟ್ಟಿದ್ದ ಕಾಗದವನ್ನು ನೋಡಲು ಇದುವರೆಗೆ ಬರೆಯ ಕಾಗದವೆಂದು ಸ್ತೋತ್ರರತ್ನದಲ್ಲಿ ಗುರುತಿಗಾಗಿ ಇಟ್ಟಿದ್ದುದು ಆವುದೋ ಒಂದು ಅಗೋಚರವಾದ ಮಸಿಯಲ್ಲಿ ಬರದು ಇಟ್ಟಿದ್ದ ನಾಗೇಂದ್ರನ ಮರಣಶಾಸನವೆಂದು ತೋರಿತು

ತಾವು ಮೊದಲು ನನಗೆ ತೋರಿಸಿದುದು ಅದೇ ಕಾಗದವೋ ?

ಅಹುದು. "ಹಾಗಾದರೆ ಸುಟ್ಟುಹೋದ ಭಾಗವನ್ನು ಹೇಗೆ ಪೂರ್ತಿ ಮಾಡಿದಿರಿ? "

ಆ ಕಾಗದದ ಅಳತೆಯೂ ಆ ಮನೆತನದವರ ಆಸ್ತಿಯೂ ಸುಮಾರಾಗಿ ನನಗೆ ಗೊತ್ತು ಇದ್ದಿತು. ಸುಟ್ಟುಹೋದ ಕಾಗದದಲ್ಲಿ ಎಷ್ಟು ಅಕ್ಷರಗಳು ಇರಬಹುದೆಂಬುದನ್ನು ನಿಂತ ಅರ್ಧಭಾಗದಲ್ಲಿರುವ ವಾಕ್ಯಗಳಿಗೆ ಆವ ವಾಕ್ಯಗಳು ಸೇರಿದರೆ ಅಭಿಪ್ರಾಯವು ಸರಿಹೋಗುವುದೆಂದು ಹತ್ತು ಹನ್ನೊಂದು ದಿವಸಗಳವರೆಗೆ ಯೋಚಿಸಿ ಅಲ್ಲಿರಬೇಕಾದುದನ್ನು ನಿರ್ಣಯಿಸಿ, ಇಗೋ, ಈ ಕಾಗದದಲ್ಲಿ ಬರೆದಿರುವಂತೆ ಬರೆದೆನು. ಇದನ್ನು ಓದಿನೋಡು ಎಂದು ಧರ್ಮದೇವನಿಗೆ ಮತ್ತೊಂದು ಕಾಗದವನ್ನು ಕೊಟ್ಟನು.

.. . ... ಯನ್ನೆಲ್ಲಾ ದೋಚಿಕೊಳ್ಳಬೇ
.. .. . ... ರಾಜನಾದ ದುಷ್ಟಬುದ್ಧಿಗೆ ಬ
.. . ... ದು ತಿಳಿದು, ನನಗೆ ಯಾವಾಗ ಮರಣವು
. .. ... ... ಸುಮಾರು ಹದಿಮೂರು
... . ... ... ಕೆಂಪು ಪಚ್ಚೆ ಮತ್ತು ಇತ
. . . .. .. ಚಿನ್ನದ ಗಟ್ಟಿಗಳು
... . . . ... ಇವೆಲ್ಲವನ್ನೂ ಮಲಯ
. .... .. ಸಣ್ಣ ಗುಹೆಯ ನೈಋತ್ಯದ ಮೂ
... ಆ ದ್ವೀಪದ ಪಶ್ಚಿಮದ ಕೊಲ್ಲಿಯಿಂದ ಇಪ
. .. ಗುಹೆಯ ಬಾಗಿಲು ಸಿಕ್ಕುವುದು. ಆ ಗು
. ಮೂಲೆಯಲ್ಲಿ ಸಣ್ಣ ಗುಹೆಯ ಬಾಗಿಲಿರುವುದು
. .. ನನ್ನ ಸೋದರಳಿಯ ಮಹೇಂದ್ರ
. . .. ... .. ಗೇಂದ್ರ
... ... .. ... .. ಧಾನ.

ಧರ್ಮದೇವನು ಇದನ್ನೂ ಓದಿ ಪೂರೈಸುತ್ತಲೆ, ಆನಂದನು ಈಗ ಈ ಎರಡು ಕಾಗದಗಳನ್ನೂ ಸೇರಿಸಿ ಓದಿನೋಡು ಎಂದನು ಆಗ ಧರ್ಮದೇವನು ಆ ಎರಡು ಭಾಗಗಳನ್ನೂ ಸೇರಿಸಿ ಈ ಕೆಳಗಿರುವಂತೆ ಓದಿದನು —

ನನ್ನನ್ನು ವಿಷವಿಟ್ಟು ಕೊಂದು ನನ್ನ ಆಸ್ತಿ . ಯನ್ನೆಲ್ಲಾ ದೋಚಿಕೊಳ್ಳಬೇಕೆಂಬ ಯೋಚನೆಯು ನನ್ನ . ರಾಜನಾದ ದುಷ್ಟಬುದ್ಧಿಗೆ ಬಹು ದಿವಸಗಳಿಂದ ಇರುವುದೆಂದು ತಿಳಿದು, ನನಗೆ ಯಾವಾಗ ಮರಣವು ಸಂಭವಿಸುವುದೋ ಎಂಬ ಭೀತಿಯಿಂದ ಸುಮಾರು ಹದಿಮೂರು ಕೋಟಿ ವರಹಗಳ ಬೆಲೆಯುಳ್ಳ ನನ್ನಲ್ಲಿರತಕ್ಕ ವಜ್ರ . ಕೆಂಪು, ಪಚ್ಚೆ ಮತ್ತು ಇತರ ಅಮೌಲ್ಯವಾದ ರತ್ನಗಳು, ಮುತ್ತುಗಳು... ಚಿನ್ನದ ಗಟ್ಟಿಗಳು, ಚಿನ್ನದ ನಾಣ್ಯಗಳು, ಆಭರಣಗಳು.. ಇವೆಲ್ಲವನ್ನೂ ಮಲಯದ್ವೀಪದ ಗುಹೆಯಲ್ಲಿರುವ ..ಸಣ್ಣ ಗುಹೆಯ ನೈಋತ್ಯದ ಮೂಲೆಯಲ್ಲಿ ನಿಕ್ಷೇಪಮಾಡಿರುವನು... ಆ ದ್ವೀಪದ ಪಶ್ಚಿಮದ ಕೊಲ್ಲಿಯಿಂದ ಇಪ್ಪತ್ತನೆಯ ಕಲ್ಲನ್ನೆತ್ತಿದರ...ಗುಹೆಯ ಬಾಗಿಲು

ಸಿಕ್ಕುವುದು. ಆ ಗುಹೆಯ ವಾಯುವ್ಯ ಮೂಲೆಯಲ್ಲಿ ಸಣ್ಣಗುಹೆಯ ಬಾಗಿಲಿರುವುದು ಮೇಲೆ ಕಂಡ ನನ್ನ ಆಸ್ತಿಯನ್ನೆಲ್ಲಾ....ನನ್ನ ಸೋದರಳಿಯ ಮಹೇಂದ್ರನಿಗೆ ದಾನ ಮಾಡಿರುವೆನು.

ನಾ...ಗೇಂದ್ರ.

ಪ್ರ...ಧಾನ.

ಅದನ್ನು ಓದಿದ ಕೂಡಲೇ ಧರ್ಮದೇವನು ಇದು ಪ್ರತ್ಯೇಕ ಮರಣಪತ್ರವೆಂದೂ ಇದನ್ನು ಸ್ತೋತ್ರರತ್ನದಲ್ಲಿಟ್ಟಿದ್ದಕಾರಣ ನಾಗೇಂದ್ರನು ಆ ಪುಸ್ತಕವನ್ನು ಆರಿಗೂ ಕೊಡದ ಮಹೇಂದ್ರನೇ ಇಟ್ಟುಕೊಂಡಿರಬೇಕೆಂದು ಮತ್ತೊಂದು ಮರಣಶಾಸನದಲ್ಲಿ ಬರೆದಿದ್ದನೆಂದೂ ತೋರುತ್ತದ ಎಂದನು.

" ಅಹುದು " ತಮಗೆ ಈ ಸಮಾಚಾರವು ತಿಳಿದ ಮೇಲೆ ಏನ ಮಾಡಿದಿರಿ

ಮಲಯದ್ವೀಪಕ್ಕೆ ಹೊರಡುವುದಕ್ಕೆ ಅತಿತ್ವರ್‍ಯದಿಂದ ಅಣಿಮಾಡಿಕೊಂಡನು. ನನ್ನ ಆತುರವನು ಕಂಡು ಇಂದ್ರಪ್ರಸ್ಥದ ರಾಜನಿಗೆ ಅನುಮಾನವು ಹುಟ್ಟಿ ನಾನು ಪಯಣಮಾಡುವುದರಲ್ಲಿಯೇ ನನ್ನನ್ನು ಸರೆಹಿಡಿದನು.

ಹದಿಮೂರು ಕೋಟಿ ವರಹಗಳು! ನಿಶ್ಚಯವಾಗಿಯೂ ಅಷ್ಟು ದ್ರವ್ಯ ವಿರುವುದೋ ?

ನಾಗೇಂದ್ರನ ಚರಿತ್ರೆಯನ್ನು ನೀನು ಓದಿದರೆ ಅಷ್ಟು ಧನವಿರುವುದು ನಿಜವೆಂದು ನಿನಗೆ ಗೊತ್ತಾಗುವುದು.

ಧರ್ಮದೇವನಿಗೆ ಒಂದು ಕಡೆ ಸಂತೋಷ , ಮತ್ತೊಂದು ಕಡೆ ಅನುಮಾನ ಆನಂದನು ಹುಚ್ಚನಲ್ಲ ಅವನು ಹೇಳುವ ಧನವು ಇದ್ದಿರಬಹುದು ಎಂಬ ಸಂತೋಷ, ಇಟ್ಟಿದ್ದ ಧನವು ಇನ್ನೂ ಅಲ್ಲಿಯೇ ಇರುವುದೋ ಇಲ್ಲವೋ ಎಂಬ ಅನುಮಾನ. ಒಂದು ವೇಳೆ ಆ ಧನವಿನ್ನೂ ಇದ್ದರೂ ಅದು ನ್ಯಾಯವಾಗಿ ಆನಂದನಿಗೆ ಸೇರತಕ್ಕು ದೆಂದು ಯೋಚಿಸಿ ಸ್ವಾಮೀ ! ಆ ಧನವು ತಮ್ಮದು, ನನ್ನದಲ್ಲ ಎಂದನು.

ಅಪ್ಪಾ, ನೀನು ನನಗೆ ಸೆರೆಮನೆಯಲ್ಲಿ ಹುಟ್ಟಿದ ಮಗನು ದೇವರು ನಿನ್ನನ್ನು ನನಗೆ ಶಿಷ್ಯನನ್ನಾಗಿ ದಯೆಪಾಲಿಸಿದನು ಶಿಷ್ಯನು ಪುತ್ರನಂತೆ ಎಂಬುದನ್ನು ಅರಿ ಯೆಯಾ ? ನಾನು ಬದುಕಿದ್ದು ಇಬ್ಬರೂ ಜತೆಯಾಗಿ ಇಲ್ಲಿಂದ ತಪ್ಪಿಸಿಕೊಂಡು

ಹೋದರೆ ಆ ಧನವನ್ನು ಇಬ್ಬರೂ ಹಂಚಿಕೊಳ್ಳೋಣ. ನಾನಿಲ್ಲೇ ಮೃತನಾದರೆ ಅದೆಲ್ಲವೂ ನಿನ್ನದೇ

ಧರ್ಮದೇವನು ಈ ಮಾತುಗಳನ್ನು ಕೇಳಿ ಆನಂದಬಾಷ್ಪಗಳನ್ನು ಸುರಿಸುತ್ತ ಆನಂದನಿಗೆ ನಮಸ್ಕಾರವನ್ನು ಮಾಡಿ, ಸ್ವಾಮೀ! ತಮ್ಮ ಇಷ್ಟವಿದ್ದಂತಾಗಲಿ ಎಂದನು

ಈ ಧನದ ಸಮಾಚಾರವನ್ನು ಹೇಳಿ, ನಾಗೇಂದ್ರನ ಮರಣಪತ್ರವು ಧರ್ಮದೇವನಿಗೆ ಹೃದ್ಗಮವಾದ ಮೇಲೆ, ಆನಂದನ ಮನಸ್ಸು ನೆಮ್ಮದಿಯಾಗಿ ಅವನು ಆ ಮರಣಪತ್ರದ ಎರಡು ಭಾಗಗಳನ್ನೂ ಸುಟ್ಟುಬಿಟ್ಟನು ಇಷ್ಟು ಧನವನ್ನಿಟ್ಟುಕೊಂಡು ಲೋಕಕ್ಕೆ ಎಷ್ಟೋ ಉಪಕಾರವನ್ನು ಮಾಡಬಹುದೆಂಬುದನ್ನು ಧರ್ಮದೇವನಿಗೆ ಅವನು ಆಗಾಗ ವಿವರಿಸುತ್ತಲಿದ್ದನು ಆನಂದನು ಹೀಗೆ ವಿವರಿಸಿದಾಗಲೆಲ್ಲ, ತಾನು ಮಾಡಿದ್ದ ಪ್ರತಿಕ್ರಿಯಾಪ್ರತಿಜ್ಞೆಯು ಧರ್ಮದೇವನಿಗೆ ಜ್ಞಾಪಕಕ್ಕೆ ಬಂದು, ಈ ದ್ರವ್ಯದ ಸಹಾಯದಿಂದ ತನ್ನ ಶತ್ರುಗಳಾದ ವಲ್ಲಭದೇವ, ದುರ್ಮತಿ, ವಿಷಯಲಂಪಟರನ್ನು ಚಿತ್ರಹಿಂಸಮಾಡಿಬಿಡಬಹುದಂಬ ಯೋಚನೆಯು ತಲದೋರಿ ಅಧೋವದನನಾಗುತ್ತಲಿದ್ದನು

ಇವರಿಬ್ಬರ ಅದೃಷ್ಟಕ್ಕೆ ಸರಿಯಾಗಿ ಧರ್ಮದೇವನ ಕೂಪದಿಂದ ಸಿಪಾಯಿ ಓಡಾಡುವ ಅಂಗಳಕ್ಕೆ, ಇವರು ಸುರಂಗ ಹೊಡೆದಿದ್ದ ಕಡೆ ಬಹು ಶಿಥಿಲವಾಗಿದೆ ಎಂದು, ಸೆರೆಮನೆಯ ಅಧಿಕಾರಿಗಳು ಆ ಭಾಗವನ್ನು ದೊಡ್ಡ ದೊಡ್ಡ ಚಪ್ಪಡಿಗಳನ್ನು ಹಾಸಿ ಗಟ್ಟಿಮಾಡಿದರು ದೈವಾಧೀನದಿಂದ ಆನಂದನು ಹೇಳಿದ್ದಂತೆ, ಧರ್ಮದೇವನು ಆ ಸುರಂಗವನ್ನು ಮುಚ್ಚಿದ್ದನು, ಇಲ್ಲದಿದ್ದರೆ ಅಧಿಕಾರಿಯು ಅದನ್ನು ನೋಡಿ ಇವರಿಬ್ಬರನ್ನೂ ಬೇರೆ ಕೊಟಡಿಗಳಲ್ಲಿಟ್ಟು ಕಾವಲುಗಳನ್ನು ಬಲಪಡಿಸುತ್ತಿದ್ದನು.

ನಾವು ಸುರಂಗಮಾಡಿದ್ದ ಕಡೆಯನ್ನು ಸರಕಾರದವರು ಭದ್ರಪಡಿಸಿದರೆಂದು ಧರ್ಮದೇವನು ಆನಂದನಿಗೆ ಹೇಳಿ, ಸ್ವಾಮೀ! ತಮ್ಮನ್ನು ಬಿಟ್ಟು ನಾನು ಎಂದಿಗೂ ಹೋಗುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿದುದಕ್ಕೆ ದೇವರು ಅನುಕೂಲಮಾಡಿಬಿಟ್ಟನು ಈಗ ನಾನು ಮಾತಿಗೆ ತಪ್ಪಿ, ಇಲ್ಲಿಂದ ಹೋಗಬೇಕೆಂದರೂ ಸಾಗುವುದಿಲ್ಲವೆಂದು ಸಂತೋಷಪಡುತ್ತಲಿದ್ದೇನೆ. ಇಲ್ಲಿಂದ ಜೀವಸಹಿತ ಹೊರಗೆ ಹೋಗುವುದು ಸಾಧ್ಯವಿಲ್ಲವಾದುದರಿಂದ ತಮ್ಮಂತೆಯೇ ನಾನೂ ಇಲ್ಲಿಯೇ ಸಾಯುವೆನು ಮಲಯ

ದ್ವೀಪದ ಧನವು ತಮಗೆಷ್ಟು ಲಭ್ಯವೋ ನನಗೂ ಅಷ್ಟೇ ಲಭ್ಯ ತಾವು ನನಗೆ ಮಾಡಿದ ವಿದ್ಯಾದಾನವೀಗ ನಿಜವಾದ ಧನವು , ಅದನ್ನು ಮಾತ್ರ ಎಷ್ಟು ದುಷ್ಟ ಬುದ್ಧಿಗಳು ಸೇರಿದರೂ ಅಪಹರಿಸಲಾರರು ಎಂದನು

ಅಪ್ಪಾ ! ವಿದ್ಯೆಯ ವಿಷಯದಲ್ಲಿ ನೀನು ಹೇಳಿದುದು ನಿಜ ಅದು ನಮಗೆ ಸದ್ಯಃ ಫಲವನ್ನು ಕೊಡುವುದು ಅದರಿಂದ ಈ ಕಾರಾಗೃಹದ ನಿರ್ಬಂಧವೂ ಕಷ್ಟವೂ ಅನೇಕವೇಳೆಗಳಲ್ಲಿ ತೋರುವುದಿಲ್ಲ

ಹೀಗೆ ಕೆಲವು ದಿನಗಳು ಕಳೆದ ಬಳಿಕ ಒಂದು ರಾತ್ರಿ ಸುಮಾರು ಹತ್ತುಘಂಟೆಯ ಹೊತ್ತಿನಲ್ಲಿ, ಬಹು ದೀನಸ್ವರದಿಂದ ಆರೋ ತನ್ನನ್ನು ಕೂಗಿದಂತೆ ಸದ್ದುಕೇಳಿ, ಧರ್ಮ ದೇವನು ತಟ್ಟನೆ ಎಚ್ಚತ್ತು, ಆರು ತನ್ನನ್ನು ಕೂಗಿರಬಹುದೆಂದು ಯೋಚಿಸುತ್ತಿರು ವುದರಲ್ಲಿಯೇ, ಮತ್ತೊಂದು ಸಾರಿ ಪೂರ್ವದಂತೆಯೇ ತನ್ನನ್ನು ಕೂಗಿದಂತೆ ಕೇಳಿಸಿತು. ಆಗ ಆನಂದನು ಕರೆಯುವಂತೆ ತೋರುತ್ತದೆ ಎಂದು, ಬಿಲದ ಬಾಯಿಯ ಕಲ್ಲನ್ನೆತ್ತಿ ನಿಮಿಷಮಾತ್ರದಲ್ಲಿ ಅವನ ಕೂಪವನ್ನು ಸೇರಿದನು ಧರ್ಮದೇವನು ತನ್ನ ಬಿಲಕ್ಕೆ ಬರುತ್ತಲೇ, ಆನಂದನು ಅವನನ್ನು ನೋಡಿ ಅಪ್ಪಾ ! ಸ್ನೇಹಿತನೇ, ಮಗನೇ, ಶಿಷ್ಯನೇ, ನಾನು ಹೆದರಿದ್ದಂತೆ ವ್ಯಾಧಿಯು ಪುನಃ ಬರುವಂತಿದೆ ಎಂದನು ಅದನ್ನು ಕೇಳು ತ್ತಲ, ಧರ್ಮದೇವನಿಗೆ ಅಪಾರದುಃಖವುಂಟಾಗಿ ಅಯ್ಯೋ, ಅಯ್ಯೋ, ಇನ್ನೇನು ಗತಿ ! ಆರೂ ದಿಕ್ಕಿಲ್ಲವಲ್ಲಾ ಎಂದು ಗಟ್ಟಿಯಾಗಿ ಕೂಗಿ ಗೋಳಾಡುತ್ತಿರಲು, ಆನಂದನು ಅಪ್ಪಾ ಕೂಗಬೇಡ , ಕೂಗಿದರೆ ಕೆಲಸವು ಕೆಟ್ಟು ಹೋಗುವುದು. ಹೇಗಿದ್ದರೂ ನಾನು ಬದುಕುವುದಿಲ್ಲ ಆದುದರಿಂದ ನನ್ನ ಯೋಗಕ್ಷೇಮವನ್ನು ನೋಡುವುದಲ್ಲದ ನಿನ್ನ ಯೋಗಕ್ಷೇಮವನ್ನೂ ನೋಡಿಕೋ. ಗದ್ದಲ ಮಾಡಿದರೆ ಅಧಿಕಾರಿಗಳು ಬಂದು ನಾವಿಬ್ಬರೂ ಹೇಗೆ ಸೇರುತ್ತಲಿದ್ದೆವೆಂದು ನಮ್ಮ ಬಿಲಗಳನ್ನು ಶೋಧನೆಯಂ ಮಾಡಿ ನಾವು ಇಷ್ಟುವರ್ಷಗಳು ಕಷ್ಟಪಟ್ಟು ಮಾಡಿದ ಕೆಲಸಗಳನ್ನೆಲ್ಲಾ ಒಂದು ನಿಮಿಷದಲ್ಲಿ ಧ್ವಂಸಮಾಡುವರಲ್ಲದ, ಮುಂದೆ ಬಂದಿಯವರು ಒಬ್ಬರೊಡನೊಬ್ಬರು ಸೇರದ ಹಾಗೆ ಮಾಡಿಬಿಡುವರು. ನಾನು ಈಗ ಬಿಟ್ಟು ಹೋಗುವ ಬಿಲಕ್ಕೆ ಎಂದಿದ್ದರೂ ಒಂದು ದಿನ ಮತ್ತೊಬ್ಬ ಅದೃಷ್ಟಹೀನನು ಬರುವನು. ಅವನು ನನ್ನಂತೆ ಮುದುಕನಾಗಿರದೆ

ನಿನ್ನಂತೆ ಯೌವನಸ್ಥನಾಗಿದ್ದರೆ ನೀವಿಬ್ಬರೂ ಸೇರಿ ಇಲ್ಲಿಂದ ಸುಲಭವಾಗಿ ತಪ್ಪಿಸಿ ಕೊಂಡು ಹೋಗಬಹುದು ಎಂದನು

ಸ್ವಾಮೀ, ತಾವು ಹೀಗೆ ಏತಕ್ಕೆ ಧೈರ್ಯಗೆಡುವಿರಿ? ತಮ್ಮಲ್ಲಿರುವ ಸಂಜೀವನ ವನ್ನು ಕೊಟ್ಟು, ಹೋದ ಸಾರಿ ಬದುಕಿಸಿಕೊಂಡಂತೆ ಈ ಸಾರಿಯೂ ಬದುಕಿಸಿಕೊಳ್ಳು ವೆನು. ನಾನು ಏನ ಮಾಡಬೇಕೋ ಅದನ್ನು ಜಾಗ್ರತೆಯಾಗಿ ಅಪ್ಪಣೆ ಕೊಡಿರಿ

ಅಪ್ಪಾ, ಈ ಸಾರಿ ನಾನು ಖಂಡಿತವಾಗಿಯೂ ಬದುಕುವುದಿಲ್ಲ, ಆದರೂ ಜೀವ ವಿರುವ ವರೆಗೂ ಚಿಕಿತ್ಸೆಮಾಡಬೇಕಾದುದು ಧರ್ಮವಾದುದರಿಂದ ಆ ಔಷಧಿಯನ್ನು ಕೊಟ್ಟು ನೋಡು. ಈಗ ಶರೀರದಲ್ಲಿ ದಾರ್ಢ್ಯವು ಕಡಮೆಯಾಗಿರುವುದರಿಂದ ಹೋದ ಸಲದಂತೆ ಮೆಯ್ಯೆಲ್ಲಾ ತಣ್ಣಗೆ ಆಗುವವರೆಗೂ ಕಾಯದೆ, ಕೈಕಾಲು ತಣ್ಣಗೆ ಆಗಲು ಪ್ರಾರಂಭಿಸಿದ ಒಡನೆಯೇ ನನ್ನ ಬಾಯನ್ನು ಬಿಡಿಸಿ ದ್ರಾವಕದಲ್ಲಿ ಹದಿನೈದು ತೊಟ್ಟು ಗಳನ್ನು ಬಿಟ್ಟು ಅರ್ಧಘಂಟೆಯ ವರೆಗೂ ನೋಡು ; ಅಷ್ಟರಲ್ಲಿ ನನಗೆ ಜ್ಞಾನವು ಬರದೆ ಇದ್ದರೆ, ಸೀಸೆಯಲ್ಲಿ ಮಿಕ್ಕಿರುವ ದ್ರಾವಕವನ್ನೆಲ್ಲಾ ಒಟ್ಟಿಗೆ ಬಾಯಲ್ಲಿ ಸುರಿದುಬಿಡು. ಆ ಮೇಲೆ ದೇವರು ಮಾಡಿದಂತಾಗಲಿ. ನೀನು ನನ್ನ ಆಪತ್ಕಾಲದಲ್ಲಿ ಇಷ್ಟು ನಿಸ್ಪೃಹ ನಾಗಿ ಸಹಾಯವನ್ನು ಮಾಡಿರುವೆ. ದೇವರು ನಿನಗೆ ಒಳ್ಳೆಯದನ್ನು ಮಾಡಲಿ. ನಾನು ಸಾಯುವಾಗ ಹೇಳುವ ಮಾತನ್ನು ಕೇಳು. ದೈವಸಹಾಯವಿಲ್ಲದಿದ್ದರೆ ಮನುಷ್ಯನ ಆವ ಪ್ರಯತ್ನವೂ ಸಾಗದು. ನ್ಯಾಯವಾದ ಕೆಲಸಗಳನ್ನು ಮಾಡಬುದ್ಯೋಗಿಸುವು ದಕ್ಕೆ ಮುಂದೆ, ದೇವರ ಮೇಲೆ ಭಾರವನ್ನು ಹಾಕಿ, ಕೆಲಸಗಳನ್ನು ಪ್ರಾರಂಭಿಸು. ಇದು ಪರಮತತ್ತ್ವ. ಧನದ ವಿಷಯದಲ್ಲಿ ಅನುಮಾನಪಡಬೇಡ; ಅದು ಇರುವುದು ನಿಶ್ಚಯ. ನಿನಗೆ ಜಾಗ್ರತೆಯಾಗಿಯೇ ಬಿಡುಗಡೆಯಾಗುವುದೆಂದು ನನ್ನ ಬುದ್ಧಿಗೆ ಈಗ ತೋರುತ್ತಿದೆ. ಹಾಗಾದರೆ, ಮೊದಲು ಮಲಯದ್ವೀಪಕ್ಕೆ ತಪ್ಪದೆ ಹೋಗು ; ಆ ಧನ ವನ್ನಿಟ್ಟುಕೊಂಡು ನಿನ್ನ ಕೈಲಾದ ಮಟ್ಟಿಗೂ ಲೋಕೋಪಕಾರವನ್ನು ಮಾಡು.

ಈ ಮಾತನ್ನು ಪೂರೈಸುವುದರಲ್ಲಿಯೇ ರಕ್ತವು ತಲೆಗೇರಿ ಆನಂದನ ಕಣ್ಣುಗಳು ಕೆಂಡದಂತಾದುವು ಒಡನೆಯೇ ಜ್ಞಾನವು ತಪ್ಪಿ, ಕೈಕಾಲುಗಳನ್ನು ಒದರುತ್ತ ಮೆಯ್ಯನ್ನು ನುಲಿಯುತ್ತ ಬಾಯಲ್ಲಿ ರಕ್ತಮಿಶ್ರವಾದ ನೊರೆಯನ್ನು ಸುರಿಸುತ್ತಿದ್ದನು ಇವೆಲ್ಲವೂ ನಿಂತಮೇಲೆ ಕೈಕಾಲು ತಣ್ಣಗಾಗಲು ಪ್ರಾರಂಭವಾದುವು. ಆಗ ಧರ್ಮದೇವನು

ಅವನ ಬಾಯನ್ನು ಸುಲಭವಾಗಿ ಬಿಡಿಸಿ ಹದಿನೈದು ತೊಟ್ಟು ದ್ರಾವಕವನ್ನು ಬಿಟ್ಟು, ಅರ್ಧಘಂಟೆಯ ವರೆಗೂ ನೋಡಿದನು ಜ್ಞಾನವು ಬಾರದೇ ಇದ್ದುದರಿಂದ ಮಿಕ್ಕಿದ್ದ ದ್ರಾವಕವನ್ನು ಒಂದೇ ಸಾರಿ ಬಾಯಲ್ಲಿ ಸುರಿದನು. ಒಡನೆಯೇ ವಿದ್ಯುತ್ಸಂಬಂಧದಿಂದ ಹೇಗೆ ಶರೀರವು ಮೇಲಕ್ಕೆ ಹಾರಿ ಕೆಳಕ್ಕೆ ಬೀಳುವುದೋ, ಹಾಗೆಯೇ ಆನಂದನ ಶರೀರವು ಮೇಲಕ್ಕೆ ಹಾರಿ ಕೆಳಕ್ಕೆ ಬಿದ್ದಿತು. ಕಣ್ಣುಗುಡ್ಡೆಗಳು ಮುಂದಕ್ಕೆ ಚಾಚಿಕೊಂಡು ನೋಡಲು ಭಯಂಕರವಾದುವು ಜೀವವು ಬರುವುದೋ ಎಂಬ ಆಸೆಯಿಂದ ಧರ್ಮದೇವನು ಅಲ್ಲಿಯೇ ಆನಂದನನ್ನು ನೋಡುತ್ತಲಿದ್ದನು. ಅರುಣೋದಯದ ವರೆಗೆ ಅಲ್ಲಿ ಕಾದಿದ್ದು ಇನ್ನು ಜೀವ ಬರಲಾರದೆಂದು ನಿಶ್ಚಯಿಸಿ, ದ್ರಾವಕದ ಸೀಸೆಯನ್ನು ಮಂಚದ ಕಾಲಿನಲ್ಲಿಟ್ಟು, ದೀಪವನ್ನು ನೊಂದಿಸಿ ಅದರ ಸ್ಥಳದಲ್ಲಿ ಮುಚ್ಚಿಟ್ಟು, ಸುರಂಗದಲ್ಲಿಳಿದು ಐಬು ಕಾಣದಂತೆ ಕಲ್ಲನ್ನು ಮುಚ್ಚಿಕೊಂಡು ತನ್ನ ಬಿಲಕ್ಕೆ ಹೋದನು

ಆ ದಿನ ಬೆಳಿಗ್ಗೆ ಬಂದಿ ಆಳು ಧರ್ಮದೇವನ ಬಿಲಕ್ಕೆ ಮೊದಲು ಬಂದು, ಅನಂತರ ಆನಂದನ ಬಿಲಕ್ಕೆ ಹೋದನು. ಆಳು ಅಲ್ಲಿಗೆ ಹೋಗುವುದರೊಳಗಾಗಿ, ಅಲ್ಲಿ ಏನು ನಡೆಯುವುದೋ ಅದನ್ನು ತಿಳಿಯ ಬೇಕೆಂದು ಧರ್ಮದೇವನು ಸುರಂಗದಲ್ಲಿ ಹೊರಟು ಅತ್ತಕಡೆಯ ಕಲ್ಲನ್ನೆತ್ತದೆ ಅದರ ಕೆಳಗೆ ಸುಮ್ಮನೆ ಕುಳಿತನು ಅಷ್ಟರಲ್ಲಿ ಬಂದಿಆಳು ಕೂಪದ ಬಾಗಿಲನ್ನು ತೆಗೆದು ಆನಂದನ ಶರೀರವು ಬಿದ್ದಿದ್ದ ಸ್ಥಿತಿಯನ್ನು ನೋಡಿ ಆನಂದನು ಸತ್ತುಹೋದನು , ಎಲ್ಲರೂ ಜಾಗ್ರತೆಯಾಗಿ ಬನ್ನಿರಿ ಎಂದು ಬಿಲದ ಬಾಗಿಲಿನ ಹೊರಗೆ ನಿಂತು ಗಟ್ಟಿಯಾಗಿ ಕೂಗಿಕೊಂಡನು. ಬಳಿಕ ಅಧಿಕಾರಿಯೂ ಮಿಕ್ಕ ಆಳುಗಳೂ ಎಲ್ಲರೂ ಬಂದರು

ಅಧಿಕಾರಿಯು ಬಂದು ನೋಡಿ, ಆನಂದನ ಮುಖಕ್ಕೆ ಸ್ವಲ್ಪ ತಣ್ಣೀರನ್ನು ಎರಚಿರಿ ಎಂದನು ಒಡನೆ ಆಳುಗಳು ಹಾಗೆ ಮಾಡಿದರು. ಇದರಿಂದ ಆನಂದನಿಗೆ ಜ್ಞಾನವು ಬರಲಿಲ್ಲವೆಂದು ತಿಳಿದು, ವೈದ್ಯನನ್ನು ಕರೆದುತನ್ನಿರಿ ಎಂದನು ಕೂಡಲೆ ವೈದ್ಯನು ಬಂದು, ತಾನು ಮಾಡಬೇಕಾದ ಪರೀಕ್ಷೆಗಳನ್ನೆಲ್ಲಾ ಮಾಡಿ ಪ್ರಾಣವು ಹೋಗಿದೆ ಎಂದನು. ಅದನ್ನು ಕೇಳಿ ಅಧಿಕಾರಿಯು ಸ್ವಲ್ಪ ಸಂಕಟಪಟ್ಟು, ವೈದ್ಯನನ್ನು ನೋಡಿ, ಕೊನೆಯ ಪರೀಕ್ಷೆಯನ್ನು ಮಾಡಿಬಿಡಿ ಎಂದು ಹೇಳಿದನು.

ಅದು ಅನವಶ್ಯಕ ; ಖಂಡಿತವಾಗಿಯೂ ಪ್ರಾಣ ಹೋಗಿದೆ.

ಆದರೂ ನಾವು ಮಾಡಬೇಕಾದುದನ್ನು ಮಾಡಲೇ ಬೇಕು.

ಹಾಗಾದರೆ ಕಾದ ಗುಳವನ್ನು ತರಿಸಿರಿ.

ವೈದ್ಯನು ಹಾಗೆ ಹೇಳಿದುದು ಧರ್ಮದೇವನಿಗೆ ಅರ್ಥವಾಗಲಿಲ್ಲ ಕಾದ ಗುಳವೇತಕ್ಕೆ ಎಂದು ಯೋಚಿಸುತ್ತಲಿರುವಲ್ಲಿಯೇ ಆಳುಗಳು ಗುಳವನ್ನು ತಂದರು. ವೈದ್ಯನು ಅದನ್ನು ಆನಂದನ ಎರಡು ಹಿಮ್ಮಡಿಗಳ ಮೇಲೆ ಇಟ್ಟನು. ಒಡನೆ ಚಿರ್ರೆಂದು ಸದ್ದಾದುದಲ್ಲದೆ ಮಾಂಸವು ಸುಟ್ಟ ನಾತವೂ ಬಂದಿತು. ಆಗ ಧರ್ಮದೇವನಿಗೆ ಗುಳವನ್ನು ಏತಕ್ಕೆ ತಂದರೆಂಬುದು ತಿಳಿಯಿತು.

ಅಧಿಕಾರಿಯು ಆಳನ್ನು ನೋಡಿ ಆನಂದನು ಆವಾಗಲಾದರೂ ತಂಟೆ ಮಾಡಿದ್ದನೋ ಎಂದು ಕೇಳಿದುದಕೆ, ಆಳು ಮಹಾಸ್ವಾಮೀ, ಇವನು ಮಕ್ಕಳಂತೆ ಸಾಧುವಾಗಿದ್ದು ಕೆಲವು ಸಮಯಗಳಲ್ಲಿ ಸೊಗಸಾದ ಕಥೆಗಳನ್ನು ಹೇಳುತ್ತಲಿದ್ದನು. ಒಂದು ದಿನ ವೈದ್ಯರು ಊರಲ್ಲಿಲ್ಲದೆ ಇದ್ದಾಗ ನನ್ನ ಹೆಂಡಿತಿಯು ಹೊಟ್ಟೆಶೂಲೆಯಿಂದ ಅವಸ್ಥೆ ಪಡುತ್ತಲಿರಲು, ಇವನು ಒಂದು ಸುಲಭವಾದ ಔಷಧಿಯನ್ನು ಹೇಳಿ ಗುಣಮಾಡಿದನು ಎಂದನು

ಇದನ್ನು ಕೇಳಿ ವೈದ್ಯನು, ಓಹೋ! ನನಗೊಬ್ಬ ಪ್ರತಿವಾದಿಯು ಇಲ್ಲಿದ್ದನೋ ಎಂದು ಹೇಳಿ, ಅಧಿಕಾರಿಯನ್ನು ನೋಡಿ ತಾವು ಈತನ ಸಂಸ್ಕಾರದ ಕೆಲಸವನ್ನು ತಕ್ಕ ಮರ್ಯ್ಯಾದೆಯೊಡನೆ ಮಾಡಿಸಬೇಕು ಎಂದು ಕೇಳಿಕೊಳ್ಳುತಲೆ, ಅವನು ಇವನಿಗೆ ಒಂದು ಹೊಸ ಗೋಣಿಯ ಚೀಲವನ್ನು ಕೊಡಿಸುವೆನು ಎಂದನು.

ಆಳು ಅಧಿಕಾರಿಯನ್ನು ನೋಡಿ ಮಹಾಸ್ವಾಮೀ! ಹೆಣವನ್ನು ಚೀಲದಲ್ಲಿ ಹಾಕಿ ತಮ್ಮ ಇದುರಿಗೆ ಹೊಲಿಯಬೇಕೋ ಎಂದು ಕೇಳಲು, ಅಧಿಕಾರಿಯು ಅಹುದು ಎಂದು ಹೇಳಿ, ಒಂದು ಹೊಸ ಚೀಲವನ್ನು ತರಿಸಿ, ಆದರಲ್ಲಿ ಹೆಣವನ್ನು ಹಾಕಿ ಹೊಲಿಯುವವರೆಗೂ ಇದ್ದು, ಪದ್ಧತಿಪ್ರಕಾರ ಕೂಪವನ್ನು ಬೀಗ ಹಾಕಿಸಿ, ರಾತ್ರಿ ಹತ್ತು ಘಂಟೆಯ ವೇಳೆಯಲ್ಲಿ ಇದನ್ನು ಸಾಗಿಸಿರಿ ಎಂದು ಆಳುಗಳಿಗೆ ಅಪ್ಪಣೆಯನ್ನು ಮಾಡಿ ಹೊರಟುಹೋದನು.

# ಹದಿನೇಳನೆಯ ಅಧ್ಯಾಯವು.

## ಚಾಲದುರ್ಗದ ಶ್ಮಶಾನವೂ ಕಡಲು ಕಳ್ಳರ ಹಡಗೂ

ಅಧಿಕಾರಿಯ ಅಪ್ಪಣೆಯಂತೆ ಆಳುಗಳು ಯೋಗಾನಂದನ ಹೆಣವನ್ನು ಮಂಚದ ಮೇಲೆ ಇಟ್ಟು ಕೂಪದ ಬಾಗಿಲನ್ನು ಮುಚ್ಚಿ ಬೀಗವನ್ನು ಹಾಕಿಕೊಂಡು ಹೊರಟು ಹೋದ ಸ್ವಲ್ಪಹೊತ್ತಿನ ಮೇಲೆ, ಧರ್ಮದೇವನು ಸುರಂಗದ ಚಪ್ಪಡಿಯನ್ನು ಮೆಲ್ಲಗೆ ಎತ್ತಿ, ಸುತ್ತು ಮುತ್ತಲೂ ನೋಡಿ, ಆರೂ ಇಲ್ಲವೆಂದು ತಿಳಿದು, ಸುರಂಗದಿಂದ ಮೇಲಕ್ಕೆ ಹತ್ತಿ ಬಂದನು.

ಮಂಚದಮೇಲೆ ಇದ್ದ ಹೆಣವನ್ನು ಕಂಡು ಹಾ! ನನ್ನ ತಂದೆಯೇ, ವಿದ್ಯಾ ಗುರುವೇ, ನನ್ನನ್ನು ತಬ್ಬಲಿ ಮಾಡಿದಿರಾ? ನನಗೆ ತಾವು ಅನೇಕವಿದ್ಯಾದಾನವಂ ಮಾಡಿದಿರಿ; ಆದರೆ ಈ ಮರಣರಹಸ್ಯವನ್ನು ಮಾತ್ರ ತಿಳಿಸಲಿಲ್ಲ ಈ ರಹಸ್ಯವನ್ನು ತಿಳಿದಿದ ತಾವು ಪರಲೋಕದಲ್ಲಿ ಸಕಲಸುಖಗಳನ್ನೂ ಅನುಭವಿಸುತ್ತಲಿರುವಿರಿ. ಆ ಸುಖವು ನನಗೆಂದಿಗೆ ದೊರೆಯುವುದೋ ಎಂದು ಗೋಳಿಡುತ್ತ ಮಂಚದ ಕೊನೆಯಲ್ಲಿ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತು ಸಂಕಟಪಡುತ್ತಲಿದ್ದನು ನಾನೂ ಈ ಮಹಾತ್ಮರಂತೆ ಸತ್ತರೆ ಇವರು ಇರುವ ಲೋಕಕ್ಕೆ ಹೋಗಬಹುದು, ಆದರೆ ಸಾಯು ವುದು ಹೇಗೆ? ಆತ್ಮಹತ್ಯವನ್ನು ಮಾಡಿಕೊಳ್ಳುವುದು ಪಾಪ; ಇದಲ್ಲದೆ ಇಷ್ಟು ದಿವಸ ಕಷ್ಟಗಳನ್ನನುಭವಿಸಿ, ಬಯಸಿದ ಸುಖವನ್ನು ಹೊದ್ದದೆ, ಶತ್ರುಗಳನ್ನು ಶಿಕ್ಷಿಸದೆ, ಸಹಾಯವನ್ನು ಮಾಡಿದವರಿಗೆ ಪ್ರತ್ಯುಪಕಾರ ಮಾಡದೆ, ಸುಮ್ಮನೆ ಸಾಯುವುದಕ್ಕೆ ಮನಸ್ಸು ಒಡಂಬಡದು ಎಂದು ಯೋಚಿಸುತ್ತಿರುವಾಗ, ತಟ್ಟನೆ ಒಂದು ಆಲೋಚ ನೆಯು ಹುಟ್ಟಿ, ದೇವರೇ! ಇದೇನು ಆಲೋಚನೆ! ಇದು ನಿನ್ನ ಪ್ರೇರಣೆಯಿಂದುಂ ಟಾದುದಲ್ಲವೆ? ಈ ಬಂದಿಶಾಲೆಯಿಂದ ಸತ್ತವರು ವಿನಾ ಬೇರೊಬ್ಬರೂ ಹೊರಗೆ ಹೋಗಲಾರರಾದುದರಿಂದ ನಾನು ಏತಕ್ಕೆ ನಿನ್ನ ಪ್ರೇರಣೆಯಂತೆ ನಡೆಯಬಾರದು ಎಂದು ಕೊಂಡು, ಸಾವಕಾಶಮಾಡಿದರೆ ಕೆಲಸ ಕೆಡುವುದೆಂದು ಒಡನೆಯೇ ಆನಂದನ ಸಣ್ಣ ಚೂರಿಯನ್ನು ತೆಗೆದು ಚೀಲದ ಬಾಯನ್ನು ಬಿಚ್ಚಿ, ಹೆಣವನ್ನು ತನ್ನ ಕೂಪಕ್ಕೆ ಸಾಗಿಸಿ ಆಳು ಸಾಯಂಕಾಲ ಬಂದರೆ ಐಬು ಕಾಣದಂತೆ ಗೋಡೆಯ ಕಡೆಗೆ ಮುಖಮಾಡಿ

ಅದನ್ನು ಮಲಗಿಸಿ ತನ್ನ ಹರಕು ದುಪ್ಪಟಿಯನ್ನು ಹೊದ್ದಿಸಿ, ಸುರಂಗದ ಬಾಯಿಗೆ ಚಪ್ಪಡಿಯನ್ನು ಮುಚ್ಚಿ ಪುನಃ ಅನಂದನ ಕೂಪಕ್ಕೆ ಬಂದನು

ಬಳಿಕ ಅಲ್ಲಿ ಸೂಜಿದಾರವನ್ನೂ ಅದರ ಜತೆಗೆ ಸಣ್ಣ ಚೂರಿಯನ್ನೂ ಹುಡುಕಿ ತೆಗೆದುಕೊಂಡು, ತನ್ನ ಮೆಯ್ ಮೇಲೆ ಇದ್ದ ಬಟ್ಟೆಯನ್ನು ತೆಗೆದು ಬಿಸುಟು, ಗೋಣಿ ಚೀಲದೊಳಗೆ ಹೊಕ್ಕು, ಒಳಗಡೆಯಿಂದ ಅದರ ಬಾಯನ್ನು ಹೊಲಿದುಕೊಂಡು ಶವ ವಿದ್ದಂತೆಯೇ ಇದ್ದನು. ಧರ್ಮದೇವನ ಅಭಿಪ್ರಾಯದಲ್ಲಿ ಚಾಲದುರ್ಗದ ಹೆಣವನ್ನು ಹೂಳುವಂತಿದ್ದಿತು ಚೀಲವನ್ನು ಹೊಕ್ಕ ಮೇಲೆ ಧರ್ಮದೇವನಿಗೆ ಭೀತಿ ತೋರಿ ಎದೆಯು ಹಾರುವುದಕ್ಕೆ ಪ್ರಾರಂಭವಾಯಿತು. ಆಗ ಅಧಿಕಾರಿಯೇ ಆಗಲಿ ಆಳುಗಳೇ ಆಗಲಿ, ಅಲ್ಲಿಗೆ ಬಂದಿದ್ದರೆ ಇವನ ಎದೆಯು ಹೊಡೆಯುವ ಶಬ್ದವನ್ನು ಕೇಳಿ ಚೀಲದಲ್ಲಿ ರುವುದು ಶವವಲ್ಲವೆಂದು ಸುಲಭವಾಗಿ ತಿಳಿಯಬಹುದಾಗಿದ್ದಿತು ಸಾಯಂಕಾಲ ವಾಗುತಲೆ ಆಳು ನನ್ನ ಕೂಪಕ್ಕೆ ಆಹಾರವನ್ನು ತೆಗೆದುಕೊಂಡು ಹೋಗಿ ನಾನು ಮಲ ಗಿರುವೆನೆಂದು ತಿಳಿದು ಮಾತನಾಡಿಸುವನು, ಮಾತನಾಡದೆ ಇರುವುದನ್ನು ಕಂಡು ಎಲ್ಲಿ ಅವನು ಹತ್ತಿರ ಬಂದು ಮಂಚದ ಮೇಲೆ ಬೇರೊಬ್ಬನು ಮಲಗಿರುವನೆಂದು ತಿಳಿಯು ವನೋ, ಎಲ್ಲಿ ನನ್ನ ಕೆಲಸವು ಕೆಟ್ಟುಹೋಗುವುದೋ ಎಂದು ಭಯಪಟ್ಟು, ಒಡನೆಯೇ ಎಷ್ಟೋ ಸಾರಿ ನಾನು ಒದಲು ಹೇಳದೆ ಇದ್ದರೂ ಆಳು ಸುಮ್ಮನೆ ಹೊರಟುಹೋಗಿ ರುವನು, ಈಗಲೂ ಹಾಗೆಯೇ ಆಗಿರಬಹುದು ಎಂದು ಧೈರ್ಯತಂದುಕೊಂಡು ನೆಮ್ಮದಿ ಯಾಗಿದ್ದನು.

ಈ ಕೆಲಸವನ್ನು ಸಾಯಂಕಾಲ ಆಳು ಬಂದು ಹೋದನಂತರ ಧರ್ಮದೇವನು ಮಾಡಿರಬಹುದಾಗಿದ್ದಿತು ಆದರೆ ಅಧಿಕಾರಿಯು ಒಂದು ವೇಳೆ ಹೆಣವನ್ನು ಜಾಗ್ರತೆ ಯಾಗಿ ಸಾಗಿಸುವಂತೆ ಅಪ್ಪಣೆಯನ್ನು ಮಾಡಿದರೆ, ತನ್ನ ಕೆಲಸವಾಗಲಾರದೆಂದು ಯೋ ಚನೆ ಮಾಡಿ ಅವನು ಮುಂದಾಗಿಯೇ ಹಾಗೆ ಮಾಡಿದನು.

ಚೀಲವನ್ನು ಹೊರುವ ಆಳುಗಳಿಗೆ ಒಂದು ವೇಳೆ ಏನಾದರೂ ನಾನು ಶವವಲ್ಲ ವೆಂದು ಅನುಮಾನ ಹುಟ್ಟಿ ನನ್ನನ್ನು ಗುರುತಿಸುವರಾದಲ್ಲಿ ಗೋಣಿಯನ್ನು ಮೇಲಿನಿಂದ ಕೆಳಗಿನ ವರೆಗೆ ಚೂರಿಯಿಂದ ಒಂದೇ ಸಾರಿ ಹರಿದು ಹೊರಗೆ ನಿಂತು ಆದರಿಂದ ಅವ ರಿಗೆ ಗಾಬರಿಯನ್ನುಂಟುಮಾಡಿ ಪಲಾಯನವನ್ನು ಮಾಡುವೆನು ; ಅವರು ನನ್ನನ್ನು ಪಿಡಿ

ಯಲು ಬಂದರೆ ನನ್ನಲ್ಲಿರುವ ಚೂರಿಯ ಉಪಯೋಗವನ್ನು ತೋರಿಸಿ ಓಡಿಹೋಗು ವೆನು. ಅವರು ನನ್ನನ್ನು ಮಣ್ಣು ಮಾಡಿದರೆ ಅವರು ಅತ್ತಕಡೆ ಹೊರಡುತ್ತಲೆ ಮೇಲೆ ಹಾಕಿರುವ ಹುಸಿಮಣ್ಣನ್ನು ತಳ್ಳಿ ಎದ್ದು ಬರುವೆನು, ಅದು ಆಗದಿದ್ದರೆ ನೆಮ್ಮದಿಯಾಗಿ ಪ್ರಾಣವನ್ನು ಬಿಡುವೆನು, ಎಂದು ಆಲೋಚಿಸಿದನು

ಸಂಜೆಯಾಗುತ್ತಲೆ ಧರ್ಮದೇವನಿಗೆ ಎದೆಯು ಹಾರುತ್ತ ಚಳಿ ಬಂದು ನಡುಕ ವೆತ್ತಿ ಪ್ರಾಣವೇ ಹೋಗುವಂತೆ ಯಾತನೆಯುಂಟಾಯಿತು ಹೀಗೆ ಸುಮಾರು ಅರ್ಧ ಘಂಟೆ ನರಳಿದ ಮೇಲೆ ಅವನಿಗೆ ಧೈರ್ಯವಾಯಿತು. ಕೊನೆಗೆ ಅಧಿಕಾರಿಯು ಹೇಳಿದ್ದ ವೇಳೆಗೆ ಸರಿಯಾಗಿ ಕೂಪದ ಬಾಗಿಲನ್ನು ತೆಗೆದುಕೊಂಡು ಮುಂದೆ ಇಬ್ಬರು ಒಳಗೆ ಬಂದರು ಬೇರೆ ಒಬ್ಬನು ದೀವಟಿಗೆಯನ್ನು ಹಿಡಿದುಕೊಂಡು ಬಾಗಿಲಲ್ಲಿ ನಿಂತನು. ಈಗ ಪರೀಕ್ಷಾಕಾಲವು ಪ್ರಾಪ್ತವಾಯಿತೆಂದು ಧೈರ್ಯವಂ ತಾಳಿ ಧರ್ಮದೇವನು ಉಸಿರನ್ನು ಹಿಡಿದು ಕೊಂಡು ಇದ್ದನು ಒಳಗೆ ಬಂದವರು ತಾವು ತಂದಿದ್ದ ದೇವಯಾನ ವನ್ನು ಕೆಳಗಿಟ್ಟು, ಕಾಲಕಡೆಯೊಬ್ಬ ತಲೆಯ ಕಡೆಯೊಬ್ಬ ಈ ಮೇರೆಗೆ ಗೋಣಿಯನ್ನು ಮಂಚದಿಂದೆತ್ತಿ ಅದರ ಮೇಲಿಟ್ಟರು. ಆಗ ಧರ್ಮದೇವನು ತನ್ನ ಶರೀರವನ್ನು ಕಟ್ಟಿಗೆ ಯಂತೆ ಮಾಡಿಕೊಂಡನು

ತಲೆಯ ಕಡೆ ಎತ್ತಿದವನು ಇವನು ಮುದುಕನಾಗಿದ್ದರೂ ಏನು ಭಾರವಪ್ಪ ಎನ್ನಲು, ಕಾಲಕಡೆಯವನು ವರ್ಷೇವರ್ಷೆ ಇವನ ಶರೀರವು ಬಳೆಯುತ್ತಲಿದ್ದಿತೆಂದು ಎಲ್ಲರೂ ಹೇಳುತ್ತಲಿದ್ದರು ಎಂದನು.

ಹೇಗಾದರೂ ಆಗಲಿ, ಹೊತ್ತೇ ಹೊರಬೇಕು, ಎತ್ತು ಎಂದು ಹೇಳಿ ಇಬ್ಬರೂ ಚಟ್ಟವನ್ನೆತ್ತಿಕೊಂಡು, ಸ್ವಲ್ಪದೂರ ಹೋಗಿ ಅಲ್ಲಿ ಅದನ್ನು ಕೆಳಗಿಟ್ಟು, ದೀವಟಿಗೆಯವ ನನ್ನು ಮುಂದೆ ಹೋಗ ಹೇಳಿ ತಾವು ಅವನ ಹಿಂದೆ ಮೆಟ್ಟಲುಗಳನ್ನು ಹತ್ತಿ ಹೋಗು ತ್ತಿರಲು. ಧರ್ಮದೇವನಿಗೆ ಬೀಸುತ್ತಿದ್ದ ತಂಗಾಳಿಯು ತೋರಿತು ಸುಮಾರು ಐವತ್ತು ಗಜ ದೂರ ಹೋಗಿ ಯಾನವನ್ನು ಕೆಳಗಿಟ್ಟು ಒಬ್ಬನು ದೀವಟಿಗೆಯವನನ್ನು ಕರೆದು ಕೊಂಡು ಎಲ್ಲಿಯೋ ಹೋದನು ; ಮತ್ತೊಬ್ಬನು ಪಕ್ಕದಲ್ಲಿಯೇ ಕುಳಿತನು ಆಗ ಕಲ್ಲಕಟ್ಟಡದ ಮೇಲೆ ಹೊಡೆಯುತ್ತಲಿರುವ ಸಮುದ್ರದ ಅಲೆಗಳ ಶಬ್ದವು ಧರ್ಮದೇವ ನಿಗೆ ಕೇಳಿಸಲು ತಾನೆಲ್ಲಿರಬಹುದೆಂದು ಯೋಚಿಸುತ್ತಲಿದ್ದನು. ಬಂದಿದ್ದ ಮೂವರಲ್ಲಿ

ತನ್ನ ಸಮೀಪದಲ್ಲಿ ಒಬ್ಬನೇ ಇರುವನೆಂದು ತಿಳಿದು ಧರ್ಮದೇವನು ಗೋಣಿಯನ್ನು ಹರಿದು ಓಡಿ ಹೋಗಲೇ ಎಂದಿದ್ದು, ದೈವಾಧೀನದಿಂದ ಹಾಗೆ ಮಾಡಲಿಲ್ಲ ಇಷ್ಟರಲ್ಲಿಯೇ ಯಾನದ ಸಮೀಪದಲ್ಲಿ ಭಾರವಾದ ಒಂದು ಗುಂಡನ್ನು ಎತ್ತಿ ಹಾಕಿದ ಸದ್ದಾಯಿತು. ಯಾನದ ಪಕ್ಕದಲ್ಲಿದ್ದವನು ಧರ್ಮದೇವನ ಕಾಲಿಗೆ ಒಂದು ಹಗ್ಗವನ್ನು ಬಿಗಿಯಾಗಿ ಕಟ್ಟಿದನು. ತನ್ನ ಕಾಲನ್ನು ಏತಕ್ಕೆ ಕಟ್ಟುವರೆಂದು ಅವನಿಗೆ ತೋರಲಿಲ್ಲ ಸರಿಯಾಗಿ ಗಂಟು ಹಾಕಿದ್ದೀಯೋ ಎಂದು ಒಬ್ಬನು ಕೇಳಿದುದಕ್ಕೆ, ಹೋ, ಬಿಗಿಯಾಗಿ ಕಟ್ಟಿದ್ದೇನೆ ಎಂದು ಮತ್ತೊಬ್ಬನು ಎಂದನು ಹಾಗಾದರೆ ಎತ್ತು ಎಂದು ಹೇಳಿ, ಇಬ್ಬರೂ ಯಾನವನ್ನು ಎತ್ತಿಕೊಂಡು ಹೋಗಿ ಅಲ್ಲಿ ಒಂದು ಬಾಗಿಲನ್ನು ತೆಗೆಯಿಸಿ ಮುಂದಕ್ಕೆ ಹೊರಟರು. ಆಗ ಅಲೆಗಳ ಸಪ್ಪಳವು ಧರ್ಮದೇವನ ಕಿವಿಗಳಿಗೆ ಚೆನ್ನಾಗಿ ಕೇಳಿಸುತ್ತಿದ್ದಿತು.

ವಾಹಕರಲ್ಲಿ ಒಬ್ಬನು ಮಳೆಗಾಳಿಗಳು ವಿಶೇಷವಾಗಿ ಬರುವಂತೆ ತೋರುತ್ತದೆ; ಸನ್ಯಾಸಿಗೆ ಸಕಾಲದಲ್ಲಿ ಸಮುದ್ರಸ್ನಾನಮಾಡಿಸಿ ನಾವು ಬೇಗನೆ ಮನೆಯನ್ನು ಸೇರಿಕೊಳ್ಳೋಣ ಎಂದನು.

ಸನ್ಯಾಸಿಗೆ ಕ್ರಿಯಾದಿಗಳು ಆವುದೂ ಇಲ್ಲವಾಗಿ ಸಮುದ್ರಸ್ನಾನವೇ ಎಲ್ಲವೂ ಎಂದು ಹೇಳಿ ಮತ್ತೊಬ್ಬನು ಹುಚ್ಚು ಹುಚ್ಚಾಗಿ ನಕ್ಕನು.

ನಮ್ಮ ಸ್ಥಳಕ್ಕೆ ಬಂದೆವು ಎಂದು ಒಬ್ಬನು ಹೇಳಲು, ಮತ್ತೊಬ್ಬನು ಇನ್ನೂ ಮುಂದೆ ಹೋಗು, ಇಲ್ಲವಾದರೆ ಹೋದ ಸಲದಂತೆ ಶವವು ಕಲ್ಲುಗಳ ಮೇಲೆ ಬೀಳುವುದು, ಅಧಿಕಾರಿಯು ನಮ್ಮನ್ನು ಬಯ್ಯುವನು ಎಂದನು

ಇಬ್ಬರೂ ಶವವನ್ನು ಎತ್ತಿಕೊಂಡು ಮತ್ತಷ್ಟು ದೂರ ಹೋಗಿ ಯಾನವನ್ನು ಕೆಳಗಿಳುಹಿ ಶವವನ್ನು ಎತ್ತಿ ಒಂದು, ಎರಡು, ಮೂರು ಎಂದು ಕೂಗುತ್ತ, ಸಮುದ್ರಕ್ಕೆ ಬೀಸಿ ಎಸೆದರು. ಆಕಾಶದಲ್ಲಿ ಹಾರುವ ಪಕ್ಷಿಯು ಗುಂಡಿನ ಪೆಟ್ಟುತಿಂದರೆ ಹೇಗೆ ಸರ್ರನೆ ಕಲ್ಲಿನಂತೆ ಕೆಳಕ್ಕೆ ಬೀಳುವುದೋ, ಹಾಗೆಯೇ ತಾನೂ ಬೀಳುತ್ತಿದ್ದೇನೆಂದು ಧರ್ಮದೇವನಿಗೆ ತೋರಿತು. ಕಾಲಿಗೆ ಕಟ್ಟಿದ್ದ ಭಾರವಾದ ಕಬ್ಬಿಣದ ಗುಂಡು ಮತ್ತಷ್ಟು ಬೇಗ ಅವನನ್ನು ಕೆಳಕ್ಕೆ ಸೆಳೆಯುತ್ತಲಿದ್ದಿತು. ನೀರಿಗೆ ಬೀಳುವುದರೊಳಗಾಗಿ ಒಂದೊಂದು ನಿಮಿಷವೂ ಅವನಿಗೆ ಒಂದೊಂದು ಯುಗವಾಗಿ ತೋರಿತು.

ನೀರಿನಲ್ಲಿ ಬಿದ್ದೊಡನೆಯೇ ಧರ್ಮದೇವನು ಕಿಟ್ಟೆಂದು ಕಿರುಚಿಕೊಂಡನು. ಆ ಸದ್ದು ಅಲೆಗಳ ಅಬ್ಬರದಲ್ಲಿ ಲೀನವಾಗಿ ಹೋಯಿತೋ, ಇಲ್ಲವೇ ಮೇಲಿದ್ದವರಿಗೆ ಕೇಳಿಸಿತೋ ತಿಳಿಯದು.

ನೀರಿನಲ್ಲಿ ಬಿದ್ದಾಗ ಧರ್ಮದೇವನು ಭ್ರಾಂತನಾದರೂ, ಬಾಲ್ಯದಿಂದಲೂ ತನಗೆ ಸಮುದ್ರದಲ್ಲಿ ಈಸಿ ಮುಳುಗಿ ಅಭ್ಯಾಸವಿದ್ದುದರಿಂದ ಉಸಿರನ್ನು ಹಿಡಿದು ಕೈಯಲ್ಲಿದ್ದ ಚೂರಿಯಿಂದ ಗೋಣಿಯನ್ನು ಹರಿದು ಕೈಗಳನ್ನು ಬಿಡಿಸಿಕೊಂಡು, ಆ ಮೇಲೆ ಕಾಲಿನವರೆಗೂ ಚೀಲವನ್ನು ಬಿಡಿಸಿಕೊಂಡು, ಕಾಲಿಗೆ ಕಟ್ಟಿದ್ದ ಗುಂಡಿನ ಹಗ್ಗವನ್ನು ಕುಯ್ಯಲು ಪ್ರಯತ್ನಪಟ್ಟು ಅದು ಸಾಗದೆ, ಕೆಳಕೆಳಗೆ ಮುಳುಗಿ ಹೋಗುತ್ತಲಿದ್ದನು. ಆಗ ಅವನು ಧೈರ್ಯಗೆಟ್ಟಿದ್ದರೆ ಅವನ ಕತೆಯು ಅಲ್ಲಿಗೇ ಮುಗಿಯುತ್ತಲಿದ್ದಿತು. ಜೀವದಾಸೆಯಿಂ ಬಟ್ಟು ಬಿಲ್ಲಿನೋಪಾದಿ ತನ್ನ ಶರೀರವನ್ನು ಬಾಗಿಸಿಕೊಂಡು ಕಾಲಿನ ಹಗ್ಗವನ್ನು ಒಂದೇ ಸಾರಿ ಕೊಯ್ದನು ಗುಂಡು ಸಹಿತ ಚೀಲವು ಸಮುದ್ರದ ತಳವನ್ನು ಸೇರಿತು. ಧರ್ಮದೇವನು ನೀರಿನಿಂದ ಮೇಲಕ್ಕೆ ಎದ್ದು ಒಂದು ನಿಮಿಷ ಸುದಾರಿಸಿಕೊಂಡು, ಪುನಃ ಮುಳುಗಿ ಸುಮಾರು ಅರ್ಧ ಮೈಲಿ ದೂರ ಈಸುತ್ತ ಹೋಗಿ ಜಾಲದುರ್ಗದ ಕಡೆ ತಿರುಗಿ ನೋಡಲು, ದೀಪಟಿಗೆಯ ಬೆಳಕು ಇನ್ನೂ ಕಾಣುತಲಿದ್ದಿತು. ಪುನಃ ಮುಳುಗಿ ಇನ್ನೊಂದು ಅರ್ಧ ಮೈಲಿ ದೂರ ಹೋಗಿ ತಲೆಯೆತ್ತಿ ನೋಡಲು, ಬೆಳಕು ಇರಲಿಲ್ಲ ಈಗ ನಾನು ಎಲ್ಲಿರಬಹುದು, ಎಂದು ಯೋಚಿಸಿ ಸುತ್ತಲೂ ನೋಡಲು, ಪ್ಲವಂಗದ್ವೀಪದ ದೀಪಗೃಹದ ಬೆಳಕು ಕಣ್ಣಿಗೆ ಕಂಡಿತು. ಧರ್ಮದೇವನು ಅನೇಕಾವೃತ್ತಿ ಆ ಸಮುದ್ರದಲ್ಲಿ ಓಡಾಡುತ್ತಲಿದ್ದುದರಿಂದ ಅಲ್ಲಿಯ ಸನ್ನಿವೇಶವೆಲ್ಲ ಅವನಿಗೆ ಚೆನ್ನಾಗಿ ಗೊತ್ತಿದ್ದಿತು. ಕಣ್ಣಿಗೆ ಕಂಡ ದೀಪಸ್ಥಳದ ಬೆಳಕಿನಿಂದ ತಾನಿರುವ ಸ್ಥಳವು ಇಂತಹುದೆಂದು ಗೊತ್ತುಮಾಡಿಕೊಂಡು ಸಮೀಪದಲ್ಲಿರುವ ಎರಡು ಮೂರು ದ್ವೀಪಗಳಲ್ಲಿ ಜನಗಳು ವಾಸಮಾಡುತ್ತಲಿರುವರು, ಅವುಗಳ ಆಚೆ ಇರುವ ತಾಮ್ರದ್ವೀಪವು ನಿರ್ಜನವಾಗಿರುವುದು , ಅಲ್ಲಿಗೆ ಹೋಗಬೇಕೆಂದು ಅತ್ತಕಡೆ ತಿರುಗಿದನು.

ಬಂದಿಮನೆಯಲ್ಲಿ ಅಷ್ಟು ವರ್ಷಗಳಿದ್ದರೂ, ಧರ್ಮದೇವನಿಗೆ ಬಲ ಕಡಮೆಯಾಗಿರಲಿಲ್ಲ, ಆದರೆ ಅವನಿಗೆ ಒಂದು ಭಯವಿದ್ದಿತು. ಜಾಲದುರ್ಗದ ಸಿಪಾಯಿಗಳು ತನ್ನನ್ನು ಎಲ್ಲಿ ಹಿಂಬಾಲಿಸಿ ಬರುವರೋ ಎಂಬ ಭಯದಿಂದ ಅವನು ಬಂದೊಂದು

ಸಾರಿಯೂ ಮುಳುಗಿ ಎದ್ದು ಹಿಂತಿರುಗಿ ನೋಡುತ್ತ ಹಿಂದಿನಿಂದ ಏಳುತ್ತಿರುವ ಅಲೆಗಳನ್ನೇ ಸಿಪಾಯಿಗಳು ತುಂಬಿರುವ ದೋಣಿಗಳೆಂದು ಭಾವಿಸಿಕೊಂಡು ಬೇಗಬೇಗನೆ ತಾಮ್ರದ್ವೀಪದ ಕಡೆಗೆ ಹೋಗುತ್ತಲಿದ್ದನು. ಇವನಿಗೆ ಭಯದಿಂದಲೂ ಅನವಶ್ಯಕವಾಗಿ ಮಾಡಿದ ಹೆಚ್ಚು ಪ್ರಯತ್ನದಿಂದಲೂ, ಕೈಕಾಲುಗಳು ಸೋತುಹೋಗಿ ತಾಮ್ರದ್ವೀಪವು ಇನ್ನೂ ಎಷ್ಟು ದೂರದಲ್ಲಿದೆಯೋ ಎಂದು ಯೋಚಿಸುತ್ತ, ಸುಮಾರು ಒಂದು ಘಂಟೆಯು ಕಾಲದಿಂದ ಈಸುತ್ತಲಿರುವುದರಿಂದ, ಈ ವೇಳೆಗೆ ಆ ದ್ವೀಪಕ್ಕೆ ಬಂದಿರಬಹುದೆಂದು ನಿರ್ಧರಮಾಡಿಕೊಂಡನು. ಕಾಲುಗಳನ್ನು ಕೆಳಗೆ ಬಿಟ್ಟು ನೋಡಲು, ನೆಲವು ಸಿಕ್ಕದೆ ಇದ್ದುದರಿಂದ, ತಾನು ಮೋಸಹೋಗಿರಬಹುದೆಂದು ಅನುಮಾನಪಟ್ಟು, ತಾಮ್ರದ್ವೀಪವು ಇನ್ನೂ ದೂರವಿರುವ ಸಂದರ್ಭದಲ್ಲಿ ಕೈಕಾಲುಗಳು ಪೂರಾ ಸೋತುಹೋಗುವ ವರೆಗೂ ಈಸುತ್ತಲಿದ್ದು ಸಾಯುವೆನು ಎಂದು ಯೋಚಿಸಿದನು

ಹೀಗೆಂದು ಸ್ವಲ್ಪ ದೂರದ ವರೆಗೆ ಹೋಗಲು ಅವನ ಮೊಳಕಾಲಿಗೆ ಬಲವಾದ ಒಂದು ಪೆಟ್ಟು ತಗಲಿತು. ಇದೆಲ್ಲಿಯೋ ಜಾಲದುರ್ಗದಿಂದ ಹೊರಟ ಸಿಪಾಯಿಗಳಲ್ಲಿ ಅವನೋ ಒಬ್ಬನು ಹೊಡೆದ ಗುಂಡಿನ ಪೆಟ್ಟೆಂದು ತಿಳಿದು ಕೋವಿಯನ್ನು ಹಾರಿಸಿದ ಶಬ್ದವನ್ನು ನಿರೀಕ್ಷಿಸಿದನು. ಅದು ಕೇಳಿಸದಿರಲು ಕೈಯನ್ನು ಮುಂದೆ ಚಾಚಿದನು , ಒಂಡೆಯು ಸಿಕ್ಕಿತು. ಆಗ ಅವನಿಗಾದ ಸಂತೋಷವನ್ನು ಅಷ್ಟಿಷ್ಟೆಂದು ಹೇಳಲಾಗದು. ನೀರಿನಲ್ಲಿಯೇ ನಿಂತು ದೇವರನ್ನು ವಂದಿಸಿ, ಒಳಿಕ ಒಂದು ಬಂಡೆಯನ್ನು ಹತ್ತಿ ಕೈಕಾಲುಗಳನ್ನು ಚಾಚಿಕೊಂಡು ಸುಪ್ಪತ್ತಿಗೆಯ ಮೇಲೆ ಸುಖವಾಗಿ ಮಲಗುವಂತೆ ಅದರ ಮೇಲೆ ಮಲಗಿದನು. ಮಳೆಗಾಳಿಗಳು ಪ್ರಾರಂಭವಾದುವು ಇವನು ಬಹಳ ಆಯಾಸಪಟ್ಟಿದ್ದುದರಿಂದ ನಿದ್ದೆಯು ಚೆನ್ನಾಗಿ ಬಂದಿತು. ಹೀಗೆ ಎಷ್ಟುಹೊತ್ತು ಮಲಗಿದ್ದನೋ ಗೊತ್ತಾಗಲಿಲ್ಲ. ಛಟ ಛಟೆಂದು ಹತ್ತಿರದಲ್ಲಿಯೇ ಸುಳಿದ ಒಂದು ಸಿಡಿಲಿನ ಶಬ್ದದಿಂದ ಎಚ್ಚರವಾಯಿತು. ಆಗ ಅವನಿಗೆ ಹಸಿವು ತೋರಿ, ಆ ಕಲ್ಲುಪೊಟ್ಟರೆಯಲ್ಲಿ ನಿಂತಿದ್ದ ಮಳೆನೀರನ್ನೇ ಹೊಟ್ಟೆಯ ತುಂಬ ಕುಡಿದು ಒಂದು ಬಂಡೆಯ ಕೆಳಗೆ ಮಳೆಗೆ ಮರೆಯಾಗಿ ಕುಳಿತನು.

ಮಳೆ, ಗಾಳಿ, ಮಿಂಚು, ಗುಡುಗು, ಸಿಡಿಲು, ಇವುಗಳ ರಭಸವು ಹೇಳಲಸದಳವಾಗಿದ್ದಿತು. ಸಮುದ್ರವು ಉಲ್ಲೋಲಕಲ್ಲೋಲವಾಗಿ ದ್ವೀಪವೇ ತಳಮುಗುಚಿ ನೀರಿನಲ್ಲಿ

ಮುಳುಗಿಹೋಗುವುದೋ ಏನೋ ಎಂದು ಧರ್ಮದೇವನಿಗೆ ದಿಗಿಲಾಯಿತು ಹೀಗಿರುವಲ್ಲಿ ಸಮುದ್ರದಲ್ಲಿ ಹೋಗುತ್ತಲಿದ್ದ ಬೆಸ್ತರ ದೋಣಿಗೆ ಬಲವಾದ ಒಂದು ಸಿಡಿಲು ಹೊಡೆದು ದೋಣಿಯು ಮುಳುಗಿ ಹೋಯಿತು ಅದನ್ನು ಕಂಡು ಧರ್ಮದೇವನು ಬಹು ಸಂಕಟಪಟ್ಟು, ಇಷ್ಟುಮಟ್ಟಿಗೆ ದೇವರು ತನ್ನನ್ನು ಕಾಪಿಟ್ಟನಲ್ಲ ಎಂದು ಭಗವಂತನನ್ನು ವಂದಿಸಿದನು. ಕೊನೆಗೆ ಗಾಳಿಯೂ ಮಳೆಯೂ ಕಡಮೆಯಾಗಲು, ಸಮುದ್ರವು ಸಮಾಧಾನಸ್ಥಿತಿಗೆ ಬಂದಿತು. ಅಷ್ಟು ಹೊತ್ತಿಗೆ ಪೂರ್ವದಿಕ್ಕಿನಲ್ಲಿ ಚಿನ್ನ, ಬೆಳ್ಳಿ, ತಾಮ್ರಗಳು ಕಲೆತ ಸಲಾಕಿಯಂತೆ ರೇಖೆಗಳು ಕಾಣಿಸಿದುವು

ಆಗ ಧರ್ಮದೇವನು ಈ ರೀತಿಯಲ್ಲಿ ಯೋಚಿಸಿದನು. ಇನ್ನು ಎರಡು ಘಂಟೆಗಳಲ್ಲಿ ಆಳು ನನ್ನ ಕೂಪಕ್ಕೆ ಹೋಗಿ ಅಲ್ಲಿ ಆನಂದನ ಹೆಣವನ್ನು ಕಂಡು ಅಧಿಕಾರಿಗೆ ತಿಳಿಸುವನು. ಅಧಿಕಾರಿಯು ಎರಡು ಕೂಪಗಳನ್ನೂ ಶೋಧಿಸಿ ಸುರಂಗವನ್ನು ಕಂಡು, ನಾನು ಮಾಡಿದ ಉಪಾಯವನ್ನು ತಿಳಿದು, ಸಮುದ್ರದಲ್ಲಿ ಬಿಸುಟ ಸಮಯದಲ್ಲಿ ನಾನು ಕಿರುಚಿಕೊಂಡೆನೆಂದು ವಾಹಕರಿಂದ ಅರಿತು, ಅಪಾಯಸೂಚಕವಾದ ಗುಂಡನ್ನು ಹಾರಿಸಿ, ನನ್ನನ್ನು ಹುಡುಕಲಿಕ್ಕೆ ದೋಣಿಗಳನ್ನು ಕಳುಹಿಸುವನು. ಆಗ ಸಮುದ್ರದಲ್ಲಿ ತಿರುಗಾಡುವರೆಲ್ಲರೂ ಅವನೋ ಒಬ್ಬ ಬಂದಿಯು ತಪ್ಪಿಸಿಕೊಂಡು ಹೋಗಿರುವನೆಂದು ತಿಳಿದು ನಾನು ಸಿಕ್ಕಿದರೆ ನನ್ನನ್ನು ಹಿಡಿದು ಕೊಡುವರು ದೇವರೇ! ನಾನು ಇದು ವರೆಗೆ ಬಹು ಕಷ್ಟಗಳನ್ನನುಭವಿಸಿದ್ದೇನೆ, ನನಗೆ ಚಳಿ, ಪ್ರಾಣಹೋಗುವ ಹಸಿವು; ಅಸಹಾಯನಾದ ನನ್ನಲ್ಲಿ ಪೂರ್ಣಕೃಪೆಯನ್ನಿಟ್ಟು ಸಹಾಯವನ್ನು ಮಾಡಬೇಕು ಎಂದು ಪ್ರಾರ್ಥಿಸಿದನು

ದೇವರು ಇವನ ಪ್ರಾರ್ಥನೆಯನ್ನು ಲಾಲಿಸಿದನೋ ಎಂಬಂತೆ, ಸುಮಾರು ಒಂದು ಮೈಲಿಯ ದೂರದಲ್ಲಿ ಒಂದು ಸಣ್ಣ ಹಡಗು ಬರುತ್ತಲಿದ್ದಿತು ಅದು ಅನ್ಯದೇಶದ ಹಡಗಿನಂತೆಯೂ, ಮಲಯಪಟ್ಟಣದ ಕಡೆಯಿಂದ ಬರುತ್ತಿರುವಂತೆಯೂ ಆವನಿಗೆ ತೋರಿತು. ಇನ್ನು ಅರ್ಧಘಂಟೆಯೊಳಗಾಗಿ ಅದು ಇಲ್ಲಿಗೆ ಬರುವುದು ಅದರಲ್ಲಿರುವವರು ಏನನ್ನೂ ಕೇಳದೆ ನನ್ನನ್ನು ಕರೆದುಕೊಂಡು ಹೋದರೆ ಸರಿ; ಇಲ್ಲದಿದ್ದರೆ ಏನನ್ನು ಹೇಳಿ ಅವರನ್ನು ಸಮಾಧಾನಪಡಿಸಲಿ? ಅವರು ಕಡಲ ಕಳ್ಳರಾಗಿರಬಹುದು; ಹಾಗಿದ್ದರೆ ಅವರು ದುಡ್ಡಿನ ಆಸೆಗಾಗಿ ನನ್ನನ್ನು ಅಧಿಕಾರಿಗಳಿಗೆ ಹಿಡಿದುಕೊಟ್ಟರೂ ಕೊಡಬಹುದು.

ಏನಾದರೂ ಆಗಲಿ, ಅನುಕೂಲವಾದ ಸಾಹಾಯ್ಯವು ಸಿಕ್ಕುವ ವರೆಗೂ ಇಲ್ಲಿಯೇ ಇರುವುದು ಒಳ್ಳೆಯದು ಎಂದು ಯೋಚಿಸಿ, ಕೂಡಲೆ ಅದುವರೆಗೂ ಇಲ್ಲಿರಲಿಕ್ಕೆ ಆಗುವುದಿಲ್ಲ, ಹಸಿವಿನಿಂದ ಪ್ರಾಣವು ಹೋಗುತ್ತಲಿದೆ, ಬಲವೆಲ್ಲಾ ಕುಗ್ಗಿಹೋಯಿತು, ಇನ್ನು ಸ್ವಲ್ಪಕಾಲದಲ್ಲಿಯೇ ಜಾಲದುರ್ಗದಲ್ಲಿ ಗಲಭೆಯಾರಂಭವಾಗುವುದು. ಏನ ಮಾಡಲಿ, ಎಂದು ನಾಲ್ಕು ದಿಕ್ಕುಗಳನ್ನೂ ನೋಡುತ್ತಲಿದ್ದನು.

ಹಿಂದಿನ ರಾತ್ರಿ ಹಡಗು ಮುಳುಗಿ ಸತ್ತ ಬೆಸ್ತರ ಟೋಪಿಯೂ, ಅವರು ಉಟ್ಟಿದ್ದ ಬಟ್ಟೆಯೂ ಅವನಿದ್ದೆಡೆಗೆ ಬರಲು, ಸಂತೋಷಪಟ್ಟು ಅವುಗಳನ್ನು ತೆಗೆದುಕೊಂಡು, ಆ ಹಡಗಿನವರಿಗೆ ಹೇಳತಕ್ಕುದನ್ನು ಮನದಲ್ಲಿ ನಿಶ್ಚಯಿಸಿಕೊಂಡು ಬಟ್ಟೆಯನ್ನು ನಡುವಿಗೆ ಸುತ್ತಿ ಟೋಪಿಯನ್ನು ತಲೆಗೆ ಹಾಕಿಕೊಂಡು ಸಮೀಪದಲ್ಲಿ ತೇಲುತ್ತಿದ್ದ ಒಂದು ಮರದ ತುಂಡನ್ನು ಹಿಡಿದು "ಬದುಕಿದೆ, ಬದುಕಿದೆ" ಎಂದು ಕೂಗುತ್ತ ಹಡಗಿನ ಇದುರಿಗೆ ಈಸಿಕೊಂಡು ಹೋದನು

ಇವನು ಹೀಗೆ ಹೊರಟ ಕೂಡಲೆ, ಹಡಗು ಬೇರೆ ಕಡೆಗೆ ತಿರುಗಿತು; ಅದನ್ನು ನೋಡಿ, ಟೋಪಿಯನ್ನು ಕೈಯಲ್ಲೆತ್ತಿ, ಹಡಗಿನಲ್ಲಿರುವವರು ತನ್ನನ್ನು ನೋಡುವುದಕ್ಕಾಗಿ ಏನೇನೋ ಉಪಾಯ ಮಾಡಿದನು. ಅದು ಪುನಃ ಇವನಿಗೆ ಅಭಿಮುಖವಾದುದರಿಂದ ತಾನು ಮಾಡಿದ ಸಂಜ್ಞೆಯನ್ನು ಹಡಗಿನವರು ತಿಳಿದರೆಂದಿದ್ದನು ಹಡಗಿಗೂ ತನಗೂ ಇನ್ನೇನು ಕಾಲುಮೈಲಿ ದೂರವಿರುವುದೆಂದಿದ್ದಾಗ, ಅದು ಪುನಃ ಬೇರೆ ಕಡೆಗೆ ತಿರುಗಿತು. ಅದನ್ನು ನೋಡಿ ಧರ್ಮದೇವನು ತಾನು ಸಮುದ್ರದಲ್ಲಿ ಸಾಯುವ ಕಾಲ ಬಂದಿತೆಂದು ಗಾಬರಿಪಿದ್ದು, ಮರದ ತುಂಡಿನ ಮೇಲೆ ನಿಂತು ಟೋಪಿಯನ್ನು ಕಯ್ಯಲ್ಲೆತ್ತಿ ಗಟ್ಟಿಯಾಗಿ ಕೂಗಿಕೊಂಡನು. ಆಗ ಹಡಗಿನವರು ಇವನನ್ನು ಕಂಡು ದೋಣಿಯನ್ನು ಒಡನೆಯೇ ಇಳುಹಿ ಇಬ್ಬರನ್ನು ಕೂರಿಸಿ ಇವನಿರುವೆಡೆಗೆ ವೇಗವಾಗಿ ನಡೆಸಿಕೊಂಡು ಹೋಗಹೇಳಿದರು

ದೋಣಿಯ ವೇಗವನ್ನು ನೋಡಿ, ಧರ್ಮದೇವನು ತನ್ನ ಶಕ್ತಿಯನ್ನು ನಂಬಿ ಮರದ ತುಂಡನ್ನು ಕೈಬಿಟ್ಟು ಬೇಗಬೇಗನೆ ತಾನೂ ದೋಣಿಯ ಕಡೆಗೆ ಈಸಿಕೊಂಡು ಹೋಗುತ್ತಿದ್ದನು. ಎರಡು ದಿವಸಗಳಿಂದ ತಿಂಡಿಯಿಲ್ಲದೆ ರಾತ್ರಿಯೆಲ್ಲಾ ಮಳೆಗಾಳಿಗಳಲ್ಲಿ ಅಲೆದು ಬಳಲಿದ್ದ ಕಾರಣ, ಇವನು ದೋಣಿಯನ್ನು ಸೇರುವುದರೊಳಗಾಗಿ

ಎರಡು ಮೂರು ಸಾರಿ ನೀರಿನಲ್ಲಿ ಮುಳುಗಿದನು ಮೂರನೆಯ ಸಾರಿ ಇವನು ಮುಳು ಗುವ ವೇಳೆಗೆ ದೋಣಿಯು ಹತ್ತಿರಕ್ಕೆ ಬರಲು, ಅದರಲ್ಲಿದ್ದವರಲ್ಲಿ ಒಬ್ಬನು ಹೆದರಬೇಡ ಎಂದು ಹೇಳಿ, ಪುನಃ ಮುಳುಗುತ್ತಿದ್ದ ಇವನ ತಲೆಗೂದಲನ್ನು ಹಿಡಿದು ಮೇಲಕ್ಕೆ ಎತ್ತಿ ದೋಣಿಯಲ್ಲಿ ಹಾಕುತ್ತಲೆ ಇವನಿಗೆ ಪ್ರಜ್ಞೆತಪ್ಪಿತು.

ಧರ್ಮದೇವನು ಕಣ್ಣು ಬಿಟ್ಟಾಗ, ಹಡಗಿನಲ್ಲಿ ಮಲಗಿದ್ದನು. ಅವನ ಶರೀರ ವನ್ನೆಲ್ಲಾ ಒಬ್ಬನು ಕಂಬಳಿಯಿಂದ ಉಜ್ಜುತ್ತಿದ್ದನು ; ದೋಣಿಯಲ್ಲಿ ಹೆದರಬೇಡ ಎಂದು ತನಗೆ ಹೇಳಿದವನು ಸ್ವಲ್ಪ ಸಾರಾಯವನ್ನು ಕುಡಿಸಿದನು, ನೌಕಾಧಿಪತಿಯೆಂದು ತೋರುತ್ತಲಿದ್ದ ಮತ್ತೊಬ್ಬನು ಇವನನ್ನು ನೋಡಿ ಸಮುದ್ರದಲ್ಲಿ ಓಡಾಡುತ್ತಲಿರುವವ ರೆಲ್ಲರಿಗೂ ಇಂಥ ಗಂಡಗಳು ಇರುತ್ತಲಿರುವುವು ಎಂದುಕೊಂಡು ಧರ್ಮದೇವನಿಗೆ ಮಾತನಾಡುವ ಶಕ್ತಿಯಿರುವುದೆಂದು ತಿಳಿದು, ನೀನಾರು ಎಂದನು.

ಅಯ್ಯಾ ! ನಾನು ಮಾಲತೀದ್ವೀಪದವನು ; ನಾನೂ ಇನ್ನು ಮೂವರೂ ಧಾನ್ಯವನ್ನು ಹೇರಿಕೊಂಡು ಬರುತ್ತಲಿರುವಾಗ ಬಿರುಗಾಳಿಯೆದ್ದು ದೋಣಿಯು ಮುಳುಗಿಹೋಗಿ ನಾವಿಕರೆಲ್ಲರೂ ನೀರಿನ ಪಾಲಾದರು ; ದೇವರ ದಯೆಯಿಂದ ನಾನೊ ಬ್ಬನೇ ಬದುಕಿಕೊಂಡೆನು.

ನೀನೆಲ್ಲಿಂದ ಬಂದೆ ? ತಾಮ್ರದ್ವೀಪದಿಂದ.

ನಿನ್ನ ಅವತಾರವನ್ನು ನೋಡಿ ಯಾರೋ ಪಕ್ಕಾಕಳ್ಳನೆಂದಿದ್ದೆನು.

ಆಗ ಧರ್ಮದೇವನಿಗೆ ಬಳೆದಿದ್ದ ತಲೆಗೂದಲೂ ಗಡ್ಡಮೀಸೆಗಳೂ ಜ್ಞಾಪಕಕ್ಕೆ ಬಂದು ಅಯ್ಯಾ, ನಾನು ಕಳ್ಳನಲ್ಲ, ನನಗೆ ಒಂದು ರೋಗವಿತ್ತು, ಅದು ವಾಸಿಯಾ ದರೆ ಹತ್ತು ವರ್ಷಗಳು ದೀಕ್ಷೆ ಬಿಡುವೆನೆಂದು ಹರಕೆಮಾಡಿಕೊಂಡಿದ್ದೆನು. ರೋಗವು ಗುಣವಾದುದರಿಂದಲೂ ಆ ಗಡುವು ಈ ದಿನ ಮುಗಿಯುವುದರಿಂದಲೂ ಇಂದು ಆಯು ಷ್ಕರ್ಮವನ್ನು ಮಾಡಿಸಿಕೊಳ್ಳುವೆನು ಎಂದನು.

ನಿನ್ನನ್ನು ನಾವೇನ ಮಾಡಬೇಕು ?

ಏನ ಬೇಕಾದರೂ ಮಾಡಿರಿ. ನನ್ನ ಜತೆಯಲ್ಲಿದ್ದವರು ನೌಕಾಧಿಪನ ಸಂಗಡ ಸತ್ತರು ನನ್ನ ದುಡ್ಡು ಕಾಸು, ಒಟ್ಟೆಬರೆ ಎಲ್ಲವೂ ಹಡಗಿನೊಡನೆ ಸಮುದ್ರದ ಪಾಲಾ ದುವು. ನಾನು ನಾವಿಕನ ಕೆಲಸವನ್ನು ಬಲ್ಲೆ. ಈ ಪ್ರಾಂತ್ಯಗಳಲ್ಲಿ ಇರುವ ಸಮುದ್ರದ

ದಾರಿ, ದ್ವೀಪಗಳು ಎಲ್ಲವನ್ನೂ ಸ್ಪಷ್ಟದಲ್ಲಿ ಕೂಡ ಹೇಳಬಲ್ಲೆನು. ನನ್ನನ್ನು ನೀವಿಟ್ಟು ಕೊಂಡರೆ ಆವ ಕೆಲಸವನ್ನಾದರೂ ಮಾಡುವೆನು. ನನ್ನನ್ನು ಇಟ್ಟುಕೊಳ್ಳುವುದು ನಿಮಗೆ ಇಷ್ಟವಿಲ್ಲದಿದ್ದರೆ, ಮುಂದಿನ ಊರಿನಲ್ಲಿ ಬಿಟ್ಟುಬಿಡಿರಿ, ಅಲ್ಲಿ ಹೇಗಾದರೂ ಮಾಡಿ ಹೊಟ್ಟೆಹೊರೆದುಕೊಳ್ಳುವೆನು

ಸರಿಯಪ್ಪಾ ಸರಿ ಲೋಕದಲ್ಲಿ ಜನಗಳು ಕಷ್ಟಕಾಲದಲ್ಲಿ ಎಲ್ಲವನ್ನೂ ಮಾಡುತ್ತೇವೆಂದು ಹೇಳಿ, ಕೆಲಸ ಬಂದಾಗ ಹಿಂತೆಗೆಯುವರು

ಅಯ್ಯಾ, ಪರೀಕ್ಷೆ ಮಾಡಿದ ಹೊರತು ಮನುಷ್ಯರ ಗುಣಗಳು ಹೇಗೆ ತಿಳಿದಾವು ನಾನು ಎಲ್ಲರಂತೆ ಅಲ್ಲವೆಂಬುದು ಮುಂದೆ ನಿಮಗೆ ಗೊತ್ತಾಗುವುದು

ಹಾಗಾದರೆ ನಮ್ಮಲ್ಲಿರು, ನೋಡೋಣ ಎಂದು ನೌಕಾಧಿಪನು ಹೇಳಿದನು.

ಇದಿರಿಗಿರುವ ಎರಡು ದ್ವೀಪಗಳನ್ನು ಬಲಕ್ಕೆ ಬಿಟ್ಟು ಹಡಗು ತಿರುಗುವುದನ್ನು ನೋಡಿ, ಧರ್ಮದೇವನು ಈಗ ನಾವೆಲ್ಲಿಗೆ ಹೋಗಬೇಕು ಎಂದು ಕೇಳಲು, ಲೀಲಾವತೀ ಪಟ್ಟಣಕ್ಕೆ ಎಂದು ನೌಕಾಧಿಪನು ಎಂದನು.

ಹಾಗಾದರೆ ಅಲ್ಲಿ ಕಾಣುವ ಎರಡು ದ್ವೀಪಗಳನ್ನು ಏತಕ್ಕೆ ಸುತ್ತಿಕೊಂಡು ಹೋಗಬೇಕು? ಮಧ್ಯೆ ಹೋದರೆ ನಮಗೊಂದು ಮೈಲ ದೂರ ಪ್ರಯಾಣವು ಲಾಭವಾಗುವುದು.

ಅವುಗಳ ಮಧ್ಯೆ ಬಂಡೆಗಳಿರುವುವಾದುದರಿಂದ ಹಾಗೆ ಹೋಗಲಾಗುವುದಿಲ್ಲ

ಅಲ್ಲಿ ಬಂಡೆಗಳಿರುವುದೇನೋ ನಿಜವೇ, ಆದರೆ ಅವುಗಳ ಮಧ್ಯೆ ನಮ್ಮ ಹಡಗು ಧಾರಾಳವಾಗಿ ಹೋಗುವಷ್ಟು ದಾರಿಯಿದೆ.

ಹಾಗಾದರೆ ನೀನೇ ಹಡಗನ್ನು ಆ ಹಾದಿಯಲ್ಲಿ ನಡೆಸು, ನೋಡೋಣ.

ಹಾಗೆಂದ ಕೂಡಲೆ ಧರ್ಮದೇವನು ಹಡಗಿನ ಹಿಂದೆ ಇರುವ ಚುಕ್ಕಾಣಿ ಎಂಬ ಕೈಪಿಡಿಯನ್ನು ಹಿಡಿದು, ಆಗಿನ ಸಂದರ್ಭಕ್ಕೆ ಅನುಕೂಲವಾಗಿ ಪಟಗಳನ್ನು ಕಟ್ಟುವಂತೆ ಅಪ್ಪಣೆ ಮಾಡಿಸಿ, ಆವ ಅಪಾಯವೂ ಇಲ್ಲದಂತೆ ಎರಡು ದ್ವೀಪಗಳ ಮಧ್ಯೆ ಹಡಗನ್ನು ಬಿಟ್ಟುಕೊಂಡು ಹೋದನು. ಆಗ ಹಡಗಿನಲ್ಲಿದ್ದ ನಾವಿಕರೆಲ್ಲರೂ "ಭಲ, ಭಲ" ಎಂದು ಇವನನ್ನು ಸ್ತೋತ್ರಮಾಡಿದರು. ಆಗ ಧರ್ಮದೇವನು ನೌಕಾಧಿಪನನ್ನು

ದಾರಿ, ರೇವುಗಳು ಎಲ್ಲವನ್ನೂ ಸ್ಪಷ್ಟದಲ್ಲಿ ಕೂಡ ಹೇಳಬಲ್ಲೆನು. ನನ್ನನ್ನು ನೀವಿಟ್ಟು ಕೊಂಡರೆ ಆವ ಕೆಲಸವನ್ನಾದರೂ ಮಾಡುವೆನು. ನನ್ನನ್ನು ಇಟ್ಟುಕೊಳ್ಳುವುದು ನಿಮಗೆ ಇಷ್ಟವಿಲ್ಲದಿದ್ದರೆ, ಮುಂದಿನ ಊರಿನಲ್ಲಿ ಬಿಟ್ಟುಬಿಡಿರಿ, ಅಲ್ಲಿ ಹೇಗಾದರೂ ಮಾಡಿ ಹೊಟ್ಟೆಹೊರೆದುಕೊಳ್ಳುವೆನು

ಸರಿಯಪ್ಪಾ ಸರಿ. ಲೋಕದಲ್ಲಿ ಜನಗಳು ಕಷ್ಟಕಾಲದಲ್ಲಿ ಎಲ್ಲವನ್ನೂ ಮಾಡುತ್ತೇವೆಂದು ಹೇಳಿ, ಕೆಲಸ ಬಂದಾಗ ಹಿಂತೆಗೆಯುವರು.

ಅಯ್ಯಾ, ಪರೀಕ್ಷೆ ಮಾಡಿದ ಹೊರತು ಮನುಷ್ಯರ ಗುಣಗಳು ಹೇಗೆ ತಿಳಿದಾವು ನಾನು ಎಲ್ಲರಂತೆ ಅಲ್ಲವೆಂಬುದು ಮುಂದೆ ನಿಮಗೆ ಗೊತ್ತಾಗುವುದು.

ಹಾಗಾದರೆ ನಮ್ಮಲ್ಲಿರು, ನೋಡೋಣ ಎಂದು ನೌಕಾಧಿಪನು ಹೇಳಿದನು.

ಇದಿರಿಗಿರುವ ಎರಡು ದ್ವೀಪಗಳನ್ನು ಬಲಕ್ಕೆ ಬಿಟ್ಟು ಹಡಗು ತಿರುಗುವುದನ್ನು ನೋಡಿ, ಧರ್ಮದೇವನು ಈಗ ನಾವೆಲ್ಲಿಗೆ ಹೋಗಬೇಕು ಎಂದು ಕೇಳಲು, ಲೀಲಾವತೀ ಪಟ್ಟಣಕ್ಕೆ ಎಂದು ನೌಕಾಧಿಪನು ಎಂದನು.

ಹಾಗಾದರೆ ಅಲ್ಲಿ ಕಾಣುವ ಎರಡು ದ್ವೀಪಗಳನ್ನು ಏತಕ್ಕೆ ಸುತ್ತಿಕೊಂಡು ಹೋಗಬೇಕು ? ಮಧ್ಯೆ ಹೋದರೆ ನಮಗೊಂದು ಮೈಲ ದೂರ ಪ್ರಯಾಣವು ಲಾಭವಾಗುವುದು.

ಅವುಗಳ ಮಧ್ಯೆ ಬಂಡೆಗಳಿರುವುವಾದುದರಿಂದ ಹಾಗೆ ಹೋಗಲಾಗುವುದಿಲ್ಲ.

ಅಲ್ಲಿ ಬಂಡೆಗಳಿರುವುದೇನೋ ನಿಜವೇ, ಆದರೆ ಅವುಗಳ ಮಧ್ಯೆ ನಮ್ಮ ಹಡಗು ಧಾರಾಳವಾಗಿ ಹೋಗುವಷ್ಟು ದಾರಿಯಿದೆ.

ಹಾಗಾದರೆ ನೀನೇ ಹಡಗನ್ನು ಆ ಹಾದಿಯಲ್ಲಿ ನಡೆಸು, ನೋಡೋಣ

ಹಾಗೆಂದ ಕೂಡಲೆ ಧರ್ಮದೇವನು ಹಡಗಿನ ಹಿಂದೆ ಇರುವ ಚುಕ್ಕಾಣಿ ಎಂಬ ಕೈಪಿಡಿಯನ್ನು ಹಿಡಿದು, ಆಗಿನ ಸಂದರ್ಭಕ್ಕೆ ಅನುಕೂಲವಾಗಿ ಪಟಗಳನ್ನು ಕಟ್ಟುವಂತೆ ಅಪ್ಪಣೆ ಮಾಡಿಸಿ, ಆವ ಅಪಾಯವೂ ಇಲ್ಲದಂತೆ ಎರಡು ದ್ವೀಪಗಳ ಮಧ್ಯೆ ಹಡಗನ್ನು ಬಿಟ್ಟುಕೊಂಡು ಹೋದನು ಆಗ ಹಡಗಿನಲ್ಲಿದ್ದ ನಾವಿಕರೆಲ್ಲರೂ "ಭಲೆ, ಭಲೆ" ಎಂದು ಇವನನ್ನು ಸ್ತೋತ್ರಮಾಡಿದರು. ಆಗ ಧರ್ಮದೇವನು ನೌಕಾಧಿಪನನ್ನು

ಬೇಕು, ಅದಕ್ಕಾಗಿಯೇ ಅವರು ಗುಂಡನ್ನು ಹಾರಿಸಿರಬೇಕು ಹೀಗೆ ಆಗಾಗ ಆಗುವು ದುಂಟು ಎಂದು ಹೇಳಿ ಪೈರೇಯುವನ್ನು ನಿಧಾನವಾಗಿ ಕುಡಿದನು.

ಹೀಗೆ ಶಾಂತನಾಗಿ ಕುಡಿದ ಧರ್ಮದೇವನನ್ನು ನೋಡಿ, ಅವನ ವಿಷಯದಲ್ಲಿ ನೌಕಾಧಿಪನಿಗೆ ಉಂಟಾಗಿದ್ದ ಅನುಮಾನವು ಒಲುಮಟ್ಟಿಗೆ ತೊಲಗಿತು, ಒಂದುವೇಳೆ ಇವನು ಕಳ್ಳನಾಗಿದ್ದರೆ ತಾನೇ ಏನು? ಬುದ್ಧಿವಂತನಾದ ಕಾರಣ ಇವನನ್ನು ನಮ್ಮ ಬಳಿ ಇಟ್ಟುಕೊಂಡರೆ ಬಹು ಅನುಕೂಲ ಎಂದು ನೌಕಾಧಿಪನು ಯೋಚಿಸಿದನು.

ಧರ್ಮದೇವನು ಒಂಧನಾಲಯದಲ್ಲಿ ಹದಿನಾಲ್ಕು ವರ್ಷಗಳಿದ್ದನು ಅಲ್ಲಿಗೆ ಹೋದಾಗ ಅವನಿಗೆ ಹತ್ತೊಂಬತ್ತು ವಯಸ್ಸು, ಈಗ ಮೂವತ್ತುಮೂರು ವಯಸ್ಸು. ಈ ದೀರ್ಘಕಾಲದಲ್ಲಿ ನನ್ನಪ್ಪನೇನಾದನೋ? ಅವನು ಬದುಕಿರಲಾರ. ಲಲಿತಾಂಗಿಯು ಏನಾದಳೋ? ಒಂದು ವೇಳೆ ನಾನು ಬರುವೆನೆಂದು ಅವಳು ಮದುವೆಯಾಗದೆ ಇರುವಳೋ, ಇಲ್ಲ ನಾನು ಸತ್ತುಹೋದೆನೆಂದು ವಿಷಯಲಂಪಟನನ್ನು ಮದುವೆಯಾಗಿರುವಳೋ? ವಲ್ಲಭದೇವ, ದುರ್ಮತಿ, ವಿಷಯಲಂಪಟರುಗಳೇನಾಗಿರುವರೋ? ಎಂದು ಅವನು ಯೋಚಿಸುತ್ತಲಿದ್ದನು

ವಾಚಕರೇ! ಸಮುದ್ರವೇ ಜಾಲದುರ್ಗದ ಶ್ಮಶಾನ, ಧರ್ಮದೇವನು ಈಗಿರುವ ಹಡಗೇ ಕಡಲಗಳ್ಳರ ಹಡಗು.

---

# ಹದಿನೆಂಟನೆಯ ಅಧ್ಯಾಯ

## ಮಲಯದ್ವೀಪ

ಕಡಲಗಳ್ಳರ ಹಡಗಿಗೆ ವೇಗವತಿ ಎಂದು ಹೆಸರು, ಅದರ ಅಧಿಪನನ್ನು ಪ್ರಚಂಡನೆಂದು ಕರೆಯುತ್ತಲಿದ್ದರು. ತನ್ನ ವಿಚಾರವನ್ನು ತಿಳಿಯಬೇಕೆಂದು ನಾವಿಕರೆಲ್ಲರೂ ಬಲುಬಗೆಯಾಗಿ ಪ್ರಶ್ನೆಮಾಡಿದರೂ, ಧರ್ಮದೇವನು ತನ್ನ ಗುಟ್ಟನ್ನು ಎಳ್ಳಷ್ಟಾದರೂ ಬಿಡದೆ, ನಾನು ಮಾಲತೀ ದ್ವೀಪದವನು, ನಾವಿಕನ ಕೆಲಸವನ್ನು ಮಾಡುತ್ತಲಿದ್ದೆ ಎಂದು ಹೇಳುತಲಿದ್ದುದರಿಂದ ಅವರೆಲ್ಲರೂ ಇವನನ್ನು ಮಾಲತೀಯ ಎಂದು ಕರೆಯಲು ಪಕ್ರಮಿಸಿದರು. ಧರ್ಮದೇವನು ವೇಗವತಿಯ ನಾವಿಕರ ಸಮಾಚಾರವನ್ನೂ ಅವರ

ವ್ಯಾಪಾರದ ರಹಸ್ಯವನ್ನೂ ಸ್ವಲ್ಪಕಾಲದಲ್ಲಿಯೇ ಚೆನ್ನಾಗಿ ಗ್ರಹಿಸಿ, ತನ್ನ ಬುದ್ಧಿ ಚಮತ್ಕಾರಗಳಿಂದ ಅವರನ್ನು ಮೆಚ್ಚಿಸಿ, ಅವರಿಗೆ ತನ್ನಲ್ಲಿ ಗೌರವವೂ ನಂಬುಗೆಯೂ ಉಂಟಾಗುವಂತೆ ಮಾಡಿಕೊಂಡನು ಅದು ಮೊದಲು ಇವನನ್ನು ಬಿಟ್ಟು ಅವರು ಅವ ಆಲೋಚನೆಯನ್ನೂ ಮಾಡುತ್ತಿರಲಿಲ್ಲ.

ಹೋದ ಕಡೆಗಳಲ್ಲಿ ಜನರ ಮಾತು ತಿಳಿಯದೆ ಮಧ್ಯಸ್ಥರನ್ನಿಟ್ಟುಕೊಂಡು ವ್ಯಾಪಾರಗಳನ್ನು ನಡಸುವುದು ಅಪಾಯಕರವೆಂದು ತಿಳಿದು, ಪ್ರಚಂಡನು ಸುಮಾರಾಗಿ ನಾಲ್ಕೈದು ಭಾಷೆಗಳಲ್ಲಿ ಮಾತನಾಡುವಷ್ಟು ಕಲಿತಿದ್ದನು ತೀರಪ್ರದೇಶಗಳಲ್ಲಿರುವ ಸುಂಕದ ಅಧಿಕಾರಿಗಳೆಲ್ಲರಿಗೂ ಇವನ ವ್ಯಾಪಾರ ಗೊತ್ತಿದ್ದಿತು, ಮುಖ್ಯವಾಗಿ ವೇಗ ವತಿಯ ವೇಗದಿಂದಲೂ ನಾವಿಕರ ಚಟುವಟಿಕೆಯಿಂದಲೂ ಇವನನ್ನು ಹಿಡಿಯಲು ಅವರಿಗೆ ಅಸಾಧ್ಯವಾಗಿತ್ತು.

ಧರ್ಮದೇವನನ್ನು ಹಡಗಿನಲ್ಲಿ ಸೇರಿಸಿಕೊಳ್ಳುವಾಗ, “ನನ್ನ ವ್ಯಾಪಾರದ ಗುಟ್ಟನ್ನೂ ಮತ್ತು ನಾನು ಹೋಗಿ ಬರುವ ಸ್ಥಳಗಳನ್ನೂ ತಿಳಿದು, ಇವನು ಎಲ್ಲಿ ಸಮಯ ನೋಡಿ ನನ್ನನ್ನು ಹಿಡಿದು ಸುಂಕದ ಅಧಿಕಾರಿಗಳಲ್ಲಿ ಒಪ್ಪಿಸಿಬಿಡುವನೋ” ಎಂದು ಪ್ರಚಂಡನು ಅನುಮಾನಪಟ್ಟಿದ್ದನು. ಆದರೆ ಜಾಲದುರ್ಗದಲ್ಲಿ ಹೊಡೆದ ಗುಂಡಿನ ಘೋಷವೂ ಆ ಕಾಲದಲ್ಲಿ ಧರ್ಮದೇವನಿದ್ದ ಸ್ಥಿತಿಯೂ, ಆ ಅನುಮಾನವನ್ನು ಹೋಗ ಲಾಡಿಸಿದುವು.

ಮಾರನೆ ಬೆಳಿಗ್ಗೆ ವೇಗವತಿಯು ಲೀಲಾವತೀಪಟ್ಟಣವನ್ನು ಸೇರಿದಾಗ ಪ್ರಚಂ ಡನು ಧರ್ಮದೇವನನ್ನು ಕರೆದು ಎಲೈ ಮಾಲತೀಯ, ಮುಂದೆ ಏನ ಮಾಡಬೇಕೆಂ ದಿರುವೆ? ನನ್ನ ಬಳಿ ಇದ್ದರೆ ಎಲ್ಲರಿಗೂ ಕೊಡುವಂತೆ ನಿನಗೂ ಲಾಭವನ್ನು ಹಂಚಿ ಕೊಡುವೆನು, ನೀನು ನನ್ನಲ್ಲಿಯೇ ಇರು ಎಂದು ಹೇಳಲು, ಧರ್ಮದೇವನು ಸ್ವಲ್ಪ ಯೋಚಿಸಿ ಈ ಮುಗುಪಳಿಯು ಸದ್ಯಕ್ಕೆ ಮೂರು ತಿಂಗಳ ವರೆಗೆ ನಡೆಯಲಿ; ಆ ಮೇಲೆ ನೋಡೋಣ ಎಂದನು ಅದಕ್ಕೆ ಪ್ರಚಂಡನೊಪ್ಪಿ ಅವನ ವಚ್ಚಕ್ಕಾಗಿ ಒಂದು ತಿಂಗಳ ಹಣವನ್ನು ಮುಂಗಡವಾಗಿ ಕೊಟ್ಟನು.

ಲೀಲಾವತೀಪಟ್ಟಣವು ಧರ್ಮದೇವನಿಗೆ ತಿಳಿದಿದ್ದ ಊರೇ, ಜಯಲಕ್ಷ್ಮಿಯ ಪ್ರಯಾಣಗಳಲ್ಲಿ ಅನೇಕಾವೃತ್ತಿ ಇವನು ಅಲ್ಲಿ ಇಳಿಯುತ್ತಿದ್ದನು. ಈಗ ಆ ಊರಿನಲ್ಲಿ

ಇವನು ಒಬ್ಬ ಕ್ಷೌರಕನ ಅಂಗಡಿಗೆ ಹೋಗಿ ಕ್ಷೌರಮಾಡಿಸಿಕೊಂಡು ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳಲು, ಸೆರೆಮನೆಯನ್ನು ಸೇರುವುದಕ್ಕೆ ಹಿಂದೆ ತನಗಿದ್ದ ವಿಶಾಲವಾದ ನೆತ್ತಿಯೂ, ನಗೆಮೊಗವೂ, ನೇತ್ರಕಾಂತಿಯೂ, ಮುಖದ ಕಳೆಯೂ ಹೋಗಿ ಅಂಡಾಕಾರವಾದ ಮುಖವೂ, ಮುಚ್ಚಿದ ಬಾಯೂ, ಗಂಟುಹುಬ್ಬುಗಳೂ, ವ್ಯಸನ ಸೂಚಕವಾದ ನೇತ್ರಕಾಂತಿಯೂ, ಬಹುಕಾಲ ಅಂಧಕೂಪದ ವಾಸದಿಂದುಂಟಾದ ಶ್ರೀಮಂತರ ಮೆಯ್ ಬಣ್ಣವೂ, ಯೋಗಾನಂದಪ್ರಸಾದಜನಿತಜ್ಞಾನಶಕ್ತಿಗಳಿಂದುಂಟಾದ ಮುಖದ ತೇಜಸ್ಸೂ ತೋರಿಬರುತ್ತಿದ್ದುವು ಇವನನ್ನು ನೋಡಿದವರೆಲ್ಲರೂ ಇವನು ದೃಢಸಂಕಲ್ಪದವನೆಂದೂ ಹಿಡಿದ ಕೆಲಸವನ್ನು ನೆರವೇರಿಸದೆ ಬಿಡನೆಂದೂ ತಿಳಿಯುವರು ಆನಂದನ ಉಪದೇಶದಂತೆ ತನ್ನ ಶರೀರದಾರ್ಢ್ಯವನ್ನು ಕಾಪಿಟ್ಟುಕೊಳ್ಳಲು ಕಾಲಕಾಲಕ್ಕೆ ತಕ್ಕ ವ್ಯಾಯಾಮಮಾಡುತ್ತಲಿದ್ದುದರಿಂದ ಇವನಿಗೆ ದೇಹಶಕ್ತಿಯು ಚೆನ್ನಾಗಿದ್ದಿತು. ವಯಸ್ಸು ಹೆಚ್ಚಿದಂತೆ ಧ್ವನಿಯೂ ಬದಲಾಯಿಸಿ ಹೋಗಿದ್ದುದರಿಂದ ಇವನನ್ನು ಗುರ್ತಿಸಲು ಆರಿಗೂ ಸಾಧ್ಯವಾಗುತ್ತಿರಲಿಲ್ಲ. ಕೂಪದ ಕತ್ತಲೆಯಲ್ಲಿ ಪದಾರ್ಥಗಳನ್ನು ನೋಡಿದ್ದ ಅಭ್ಯಾಸಬಲದಿಂದ ಇವನಿಗೆ ಕತ್ತಲೆಯಲ್ಲಿಯೂ ಕಣ್ಣು ಚೆನ್ನಾಗಿ ಕಾಣುತಲಿದ್ದಿತು. ಒಟ್ಟಿನೇನು, ತನ್ನನ್ನು ಗುರ್ತಿಸಲು ತನಗೇ ಅಸಾಧ್ಯವಾಗಿದ್ದಿತು ಎಂದರೆ, ಇತರರು ಗುರ್ತಿಸಲಾರರೆಂಬುದನ್ನು ಹೇಳಬೇಕೇ?

ಅನಂತರ, ಧರ್ಮದೇವನು ನಾವಿಕರ ಉಡುಪುಗಳನ್ನು ಮಾರುವ ಅಂಗಡಿಗೆ ಹೋಗಿ ಅಲ್ಲಿ ತನಗೆ ಬೇಕಾದ ಎರಡು ಜತೆಯ ಉಡುಪುಗಳನ್ನು ಕೊಂಡು ಒಂದನ್ನು ತೊಟ್ಟು, ತನ್ನ ಉಪಯೋಗಕ್ಕಾಗಿ ಯಾಗಪ್ಪನು ಕೊಟ್ಟಿದ್ದ ಉಡುಪನ್ನು ಅವನಿಗೆ ಹಿಂತಿರುಗಿ ಕೊಟ್ಟನು ಕ್ಷೌರಮಾಡಿಕೊಂಡು ನಾವಿಕರ ಉಡುಪನ್ನು ತೊಟ್ಟು ಇದುರಿಗೆ ಬಂದ ಧರ್ಮದೇವನನ್ನು ನೋಡಿ, ಪ್ರಚಂಡನು ಇವನು ಮಾಲತೀಯನೋ ಅಲ್ಲವೋ ಎಂದು ಅನುಮಾನಪಟ್ಟು, ಅವನ ಬಾಯಿಯಿಂದ ತಾನೇ ಮಾಲತೀಯನೆಂದು ಬಾರಿಬಾರಿಗೂ ಹೇಳಿಸಿ ತನಗಿದ್ದ ಅನುಮಾನವನ್ನು ನಿವೃತ್ತಿಮಾಡಿಕೊಂಡನು.

ವೇಗವತಿಯು ಒಮ್ಮೆ ಮಲಯದ್ವೀಪಕ್ಕೆ ಸುಮಾರು ಅರ್ಧಮೈಲಿ ದೂರದಲ್ಲಿ ಹೋಗಬೇಕಾಗಿ ಬಂದಿತು. ಆಗ ಧರ್ಮದೇವನಿಗೆ ನೀರಿನಲ್ಲಿ ದುಮ್ಮಿಕ್ಕಿ ಆ ದ್ವೀಪವನ್ನು ಸೇರಬೇಕೆಂಬ ಆಲೋಚನೆಯು ಹುಟ್ಟಿತು; ಕೂಡಲೆ, "ನಾನು ನೀರಿಗೆ ದುಮ್ಮಿಕ್ಕಿ

ಈಸಿಕೊಂಡು ಹೋದರೆ ಸುಮಾರು ಅರ್ಧ ಘಂಟೆಯಲ್ಲಿ ದ್ವೀಪವನ್ನು ಸೇರಬಹುದು; ಆದರೆ ಆವ ಆಯುಧವೂ ಇಲ್ಲದೆ ಅಲ್ಲಿಗೆ ಹೋಗಿ ಏನಮಾಡಲಿ? ನಾನು ಹಾಗೆ ಹೊರಟರೆ ನಾವಿಕರು ಏನೆಂದಾರು"? ಎಂದು ಸುಮ್ಮನಿದ್ದನು.

ವೇಗವತಿಯ ನಾವಿಕರೆಲ್ಲರೂ ಶ್ರದ್ಧೆಯಿಂದಲೂ ಚಟುವಟಿಕೆಯಿಂದಲೂ ಕೆಲಸ ಮಾಡುತ್ತಲಿದ್ದ ಕಾರಣ ಪ್ರತಿಯೊಂದು ಪ್ರಯಾಣದಲ್ಲಿಯೂ ಒಬ್ಬೊಬ್ಬನ ಪಾಲಿಗೂ ಹೆಚ್ಚಾಗಿ ಹಣವು ಸಿಕ್ಕುತ್ತಲಿದ್ದಿತು ಪ್ರಯಾಣ ಮುಗಿದ ಕೂಡಲೆ ಬಂದ ದುಡ್ಡನ್ನು ಪ್ರಚಂಡನು ಎಲ್ಲರಿಗೂ ಹಂಚಿಕೊಡುತ್ತಲಿದ್ದ ಕಾರಣ ಎಲ್ಲರೂ ಅವನು ಹೇಳಿದ ಕೆಲಸವನ್ನು ಆದರದಿಂದ ಮಾಡುತ್ತಲಿದ್ದರು. ಒಂದಾನೊಂದು ಸಲ ವೇಗವತಿಯ ನಾವಿಕರು ಸುಂಕದವರ ಸಂಗಡ ಜಗಳವನ್ನಾಡಿ ತಪ್ಪಿಸಿಕೊಂಡು ಹೋದರು. ಆ ಜಗಳದಲ್ಲಿ ಸುಂಕದವರಿಬ್ಬರು ಸತ್ತರು; ಧರ್ಮದೇವನ ತೋಳಿಗೆ ತುಪಾಕಿಯು ಪೆಟ್ಟು ತಾಕಿ ಅವನು ಕೆಳಗೆ ಬಿದ್ದನು. ಸುಂಕದವರು ಸತ್ತುದನ್ನೂ ತನಗೆ ಗಾಯವಾದುದನ್ನೂ ಕಂಡು ಧರ್ಮದೇವನು ಆತ್ಯಾನಂದಪಟ್ಟನ. ಇತರರ ದುಃಖವನ್ನು ನೋಡಿ ಸಹಿಸಲಾರದೆಯೂ, ತಾನು ಕಷ್ಟಾನುಭವವಂ ಮಾಡಲರಿಯದೆಯೂ ಇರುವ ಮನುಷ್ಯನಿಗೆ ಯಾವಾಗಲೂ ಕನಿಕರಹುಟ್ಟುವುದು, ಆದರೆ ಧರ್ಮದೇವನಿಗೆ ಮಾತ್ರ ಈಗ ಆ ರೀತಿ ಕನಿಕರ ಹುಟ್ಟಲಿಲ್ಲ. ಅವನ ಮನಸ್ಸು ಮೃದುವಾದುದಾದರೂ, ತಾನು ಹಿಂದೆ ಮಾಡಿದ್ದ ಪ್ರತಿಜ್ಞೆಯನ್ನು (ಎಂದರೆ, ತನಗೆ ಕಷ್ಟವನ್ನು ಕೊಟ್ಟವರಿಗೆ ಕಷ್ಟವನ್ನೂ, ಉಪಕಾರ ಮಾಡಿದವರಿಗೆ ಉಪಕಾರವನ್ನೂ ಮಾಡಬೇಕೆಂಬ ಶಪಥವನ್ನು) ನೆರವೇರಿಸಲು ಮನಸ್ಸು ಹಿಂಜರಿಯುವುದೆಂಬ ಭೀತಿಯಿಂದ, ಅವನು ಇಂಥ ಅಪಾಯುಗಳುಂಟಾದನೂ ಮನಸ್ಸನ್ನು ಗಟ್ಟಿಮಾಡಿಕೊಳ್ಳಲು ಅನುಕೂಲವೆಂದು ಸಂತೋಷಪಡುತ್ತಲಿದ್ದನು.

ಧರ್ಮದೇವನು ಕೆಳಗೆ ಬಿದ್ದುದನ್ನು ನೋಡಿ ತಲ್ಲಣಿಸಿ ಯಾಗಪ್ಪನು ಒಡನೆಯೇ ಅವನನ್ನು ಎತ್ತಿ ಕುಳ್ಳಿರಿಸಿ, ತುಂಬ ಪೆಟ್ಟು ಬಿದ್ದಿತೇ ಎಂದು ಆದರದಿಂದ ವಿಚಾರಿಸಿದನು. ಕಾರಾಗೃಹವನ್ನು ಸೇರುವುದಕ್ಕೆ ಮೊದಲು, ಲೋಕವೆಲ್ಲವೂ ಧರ್ಮದಿಂ ನಡೆಯುವುದೆಂದು ಧರ್ಮದೇವನು ತಿಳಿದಿದ್ದನು; ಅಲ್ಲಿಂದ ಈಚೆಗೆ ಬಂದಾಗ, ಲೋಕವೆಲ್ಲವೂ ಅಧರ್ಮಪರಿಪೂರ್ಣವಾದುದೆಂದು ತಿಳಿದುಕೊಂಡನು ಆವ ಪ್ರಯೋಜನಾಪೇಕ್ಷೆಯೂ ಇಲ್ಲದೆ ತನ್ನ ಸುಖದುಃಖಗಳಿಗೆ ಭಾಗಿಯಾಗುತ್ತಲಿದ್ದ ಯಾಗಪ್ಪನ ಗುಣವನ್ನು ನೋಡಿ

ಧರ್ಮದೇವನು ಆಶ್ಚರ್ಯಪಟ್ಟು, ತಾನು ಹಿಂದೆ ಮಾಡಿಕೊಂಡಿದ್ದ ಎರಡು ಅಭಿಪ್ರಾಯಗಳೂ ತಪ್ಪೆಂದುಕೊಂಡು, ಯಾಗಪ್ಪನ ಶ್ರದ್ಧಾಭಕ್ತಿಗೆ ಮೆಚ್ಚಿ ಅವನಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟು, ಹಡಗ ನಡೆಸುವ ವಿದ್ಯೆಯನ್ನು ಅನುಕೂಲವಾದಾಗಲೆಲ್ಲಾ ಅವನಿಗೆ ಕಲಿಸುತ್ತ ಬಂದನು. "ಇದರಿಂದ ನನಗೇನು ಪ್ರಯೋಜನ" ಎಂದು ಯಾಗಪ್ಪನು ಕೇಳಲು "ನಿನ್ನ ಅದೃಷ್ಟವನ್ನಾರು ಬಲ್ಲರು, ನೀನು ಏತಕ್ಕೆ ಒಂದು ದಿನ ನೌಕಾಧಿಪತಿಯಾಗಬಾರದು. ಒಂದು ವೇಳೆ ನೌಕಾಧಿಪನಾದರೆ ಈ ವಿದ್ಯೆವು ನಿನಗೆ ಅತ್ಯವಶ್ಯಕವು" ಎಂದನು.

ವೇಗವತಿಯು ಇದುವರೆಗೆ ಮಾಡಿದ ಪ್ರಯಾಣಗಳಲ್ಲಿ ಸುಮಾರು ಎರಡುವರೆ ತಿಂಗಳುಗಳಾದುವು. ದೊಡ್ಡ ಹಡಗುಗಳನ್ನು ನಡೆಸುವುದು ಧರ್ಮದೇವನಿಗೆ ಚೆನ್ನಾಗಿ ಗೊತ್ತಿದ್ದಿತು, ವೇಗವತಿಯನ್ನು ಸೇರಿದ ಮೇಲೆ ಸಣ್ಣ ಹಡಗನ್ನೂ ಸಮುದ್ರತೀರದಲ್ಲಿ ನಡೆಸುವ ಶಕ್ತಿಯುಂಟಾಗಿ ಕಡಲಗಳ್ಳರ ಮತ್ತು ಕಳ್ಳವ್ಯಾಪಾರಿಗಳ ಪರಿಚಯವೂ, ಸ್ನೇಹವೂ, ಸಂಕೇತಭಾಷೆಯೂ ಚೆನ್ನಾಗಿ ತಿಳಿಯಿತು. ಇವರ ಶಕ್ತಿಯುಕ್ತಿಗಳನ್ನೂ, ಸಾಹಸಗಳನ್ನೂ, ಐಕಮತ್ಯವನ್ನೂ ನೋಡಿ ಧರ್ಮದೇವನು ಇಂತಹ ಜನರನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವವನು ಯತ್ನಪಟ್ಟರೆ ಆವ ಕೆಲಸವನ್ನು ತಾನೇ ಮಾಡಲರಿಯನು ಎಂದು ಯೋಚನೆಮಾಡುತ್ತಲಿದ್ದನು.

ಧರ್ಮದೇವನು ಜಯಲಕ್ಷ್ಮಿಯಲ್ಲಿದ್ದಾಗ ಸುಮಾರು ಇಪ್ಪತ್ತು ಇಪ್ಪತ್ತೈದು ಸಾರಿ ಮಲಯದ್ವೀಪವನ್ನು ದಾಟಿ ಹೋಗುತ್ತ ಬರುತ್ತಲಿದ್ದರೂ, ಒಂದು ಸಾರಿಯಾದರೂ ಆ ದ್ವೀಪದಲ್ಲಿಳಿದಿರಲಿಲ್ಲ. ಈಗ ಅಲ್ಲಿಗೆ ಹೋಗಬೇಕೆಂಬ ಕುತೂಹಲವಿದ್ದರೂ ಅವಕಾಶ ಸಿಕ್ಕಲಿಲ್ಲ ಈಗ ವೇಗವತಿಯನ್ನು ಮಲಯದ್ವೀಪದ ಬಳಿ ನಿಲ್ಲಿಸುವಂತೆ ಹೇಳಿ, ತಾನು ಒಬ್ಬನೇ ಹೋದರೆ, ನಾವಿಕರಿಗೆ ಅನುಮಾನವು ಹುಟ್ಟಿ ಇವನೇನ ಮಾಡುವನೋ ನೋಡೋಣವೆಂದು ಬೆನ್ನ ಹತ್ತಿ ಬಂದರೂ ಬರಬಹುದು, ಸಂಗಡ ಆರನ್ನಾದರೂ ಕರೆದುಕೊಂಡು ಹೋದರೆ ಅವನಿಗೆ ತನ್ನ ಗುಟ್ಟು ತಿಳಿಯುವುದು; ಆರಿಗೂ ಅನುಮಾನವಾಗದಂತೆ ಹೇಗೆ ಆ ನಿಕ್ಷೇಪವನ್ನು ಕಂಡುಹಿಡಿಯುವುದು ಎಂದು ಎಷ್ಟು ಯೋಚಿಸಿದರೂ ಬಗೆಹರಿಯದೆ, ಪ್ರಚಂಡನ ಸಂಗಡ ತಾನು ಮಾಡಿಕೊಂಡಿದ ಷುಗುವಳಿ ಮುಗಿದಬಳಿಕ ತನ್ನ ಪಾಲಿಗೆ ಬಂದ ಹಣದಲ್ಲಿ ಒಂದು ಸಣ್ಣ ದೋಣಿ

ಯನ್ನು ಕ್ರಯಕ್ಕೆ ತೆಗೆದು ಅದರಲ್ಲಿ ಮಲಯದ್ವೀಪಕ್ಕೆ ಹೋಗಿ ನಿಕ್ಷೇಪವನ್ನು ಹುಡುಕ ಬೇಕೆಂದು ನಿಶ್ಚಯಿಸಿಕೊಂಡನು. ಅಷ್ಟರಲ್ಲಿಯೇ ದೈವಾಧೀನದಿಂದ ಒಂದು ಅನು ಕೂಲಕಾಲವು ಬಂದು ಒದಗಿತು.

ಒಂದು ದಿನ ಪ್ರಚಂಡನು ನಾವಿಕರೆಲ್ಲರನ್ನೂ ಕರೆದು ಕಾಶ್ಮೀರದ ಶಾಲುಗಳು, ರತ್ನಗಂಬಳಿಗಳು ಮುಂತಾದ ಅಮೌಲ್ಯವಾದ ಪದಾರ್ಥಗಳನ್ನು ಇಲ್ಲಿಂದ ಅಮರ ದೇಶಕ್ಕೂ, ರೇಷ್ಮೆ ಬಟ್ಟೆಗಳನ್ನು ಅಲ್ಲಿಂದ ಲೀಲಾವತಿಗೂ ಸಾಗಿಸುವುದೊಂದು ಕೆಲಸ ವಿದೆ ಇದನ್ನು ಎರಡು ಪಟ್ಟಣಗಳಿಗೂ ನಡುವೆ ನಿರ್ಜನವಾಗಿರುವುದೊಂದು ಎಡ ತಿಟ್ಟನ್ನು ಗೊತ್ತುಮಾಡಿಕೊಂಡು, ಅಮರದೇಶದಿಂದ ತರುವ ಪದಾರ್ಥಗಳನ್ನೂ, ನಾವು ತೆಗೆದುಕೊಂಡು ಹೋಗುವ ಪದಾರ್ಥಗಳನ್ನೂ ಅಲ್ಲಿ ಇಳಿಸಿ, ನಮ್ಮ ನಮ್ಮ ಸರಕುಗ ಳನ್ನು ಬದಲಾಯಿಸಿಕೊಳ್ಳಬಹುದು ಇದಕ್ಕೆಲ್ಲಾ ಅನುಕೂಲವಾಗಿರುವ ಸ್ಥಳವು ಮಲಯದ್ವೀಪವೆಂದು ನನಗೆ ತೋರುತ್ತದೆ. ನಿಮ್ಮ ಅಭಿಪ್ರಾಯವೇನು ಎನ್ನಲು ಅದೇ ಸರಿಯೆಂದು ಎಲ್ಲರೂ ಒಪ್ಪಿದರು. ಮಾರನೇ ದಿನ ರಾತ್ರೆ ವೇಗವತಿಯು ಮಲಯ ದ್ವೀಪಕ್ಕೆ ಪ್ರಯಾಣಮಾಡಿತು.

ಅನುಕೂಲಕಾಲ ತಾನಾಗಿಯೇ ಒದಗಿದುದಕ್ಕಾಗಿ ಧರ್ಮದೇವನು ದೇವರನ್ನು ಸ್ತುತಿಸಿ ಎಷ್ಟು ಹೊತ್ತಿಗೆ ದ್ವೀಪವನ್ನು ಸೇರುವೆನೆಂದಿದ್ದನು. ಆ ರಾತ್ರೆ ಅವನಿಗೆ ನಿದ್ದೆಯೇ ಬರಲಿಲ್ಲ ಕಣ್ಣು ಮುಚಿದರೆ ನಾಗೇಂದ್ರನ ಮರಣಶಾಸನವು ಆತನ ಇದಿರಿಗೆ ಬಂದು ನಿಲ್ಲುತ್ತಲಿದ್ದಿತು. ನಿಕ್ಷೇಪವು ಸಿಕ್ಕಿದರೆ ಇಷ್ಟರಿಗೆ ಅನುಕೂಲಗಳನ್ನೂ ಶತ್ರು ಗಳಿಗೆ ಕೆಡುಕುಗಳನ್ನೂ ಮಾಡಬಹುದು ಎಂದು ಯೋಚಿಸುತ್ತಲಿದ್ದನು. ಕೊನೆಗೆ ನಿದ್ದೆ ಬಂದ ಮೇಲೆ, ಗುಹೆಯಲ್ಲಿ ತಾನು ಇಳಿದುಹೋಗಿ, ಮೇಲಿನಿಂದ ನೀರಿನ ತೊಟ್ಟು ಗಳಂತೆ ಬೀಳುತ್ತಲಿರುವ ಆಣಿಮುತ್ತುಗಳನ್ನೂ, ಅಲ್ಲೆಲ್ಲಾ ಎರಚಿರುವ ರತ್ನಗಳನ್ನೂ ಆರಿಸಿ, ತನ್ನ ಅಂಗಿಯ ಚೀಲದಲ್ಲಿ ತುಂಬಿಕೊಂಡು, ಹೊರಗೆ ಬಂದು ಬೆಳಕಿನಲ್ಲಿ ನೋಡು ವಲ್ಲಿ ಅವುಗಳೆಲ್ಲಾ ಕಲ್ಲಾದಂತೆಯೂ, ಪುನಃ ಗುಹೆಯನ್ನಿಳಿಯಲು ಪ್ರಯತ್ನಪಟ್ಟಾಗ ಗುಹೆ, ಮುತ್ತು, ರತ್ನಗಳೆಲ್ಲವೂ ಮಾಯವಾದಂತೆಯೂ ಅವನಿಗೆ ಸ್ವಪ್ನವಾಯಿತು ಒಡನೆಯೇ ಎಚ್ಚರವಾಗಿ ಅಯ್ಯೋ, ಧನವು ಸಿಕ್ಕದೇ ಹೋಯಿತಲ್ಲಾ ಎಂದು ಸಂಕಟ

ಪಟ್ಟುಕೊಂಡು ಸ್ವಪ್ನವು ನಿಜವೆಂಬ ಭ್ರಮೆಯಿಂದ ಬೆಳಗಿನವರೆಗೂ ನಿದ್ದೆಬಾರದೆ ಜ್ವರ ಬಂದಂತೆ ಇದ್ದನು.

ಬೆಳಗಾಗುತಲೆ ಧರ್ಮದೇವನ ಧನಜ್ವರವು ನಿಂತರೂ ಅವನ ಆಲೋಚನೆಯು ಬಗೆ ಹರಿಯಲಿಲ್ಲ. ಸಾಧಾರಣವಾಗಿ ಎಲ್ಲರ ಸಂಗಡಲೂ ಅವಾಗಲೂ ನಗುತ್ತ ಮಾತ ನಾಡುತ್ತಲಿದ್ದವನು ಯೋಚನಾಪರನಾಗಿರುವುದನ್ನು ನಾವಿಕರು ನೋಡಿದರೆ ಏನ ತಿಳಿದುಕೊಳ್ಳುವರೋ ಎಂಬ ಭೀತಿಯಿಂದ ಆ ದಿನ ಸಾಯಂಕಾಲ ತಾನೊಬ್ಬನೇ ಹಡ ಗನ್ನು ನಡೆಸುವ ಏರ್ಪಾಡನ್ನು ಮಾಡಿಕೊಂಡರ ಏಕಾಂತದಲ್ಲಿ ಆಲೋಚಿಸಬಹು ದೆಂದು ಯೋಚಿಸಿ, ಪ್ರಚಂಡನನ್ನು ಕೇಳಲು ಅವನು ಹಾಗೆಯೇ ಆಗಲಿ ಎಂದು ಒಪ್ಪಿ ಕೊಂಡನು ಪಾಠಕಮಹಾಶಯರೇ, ಶಾಂತವಾಗಿರುವ ಸಮುದ್ರದ ಮಧ್ಯೆ ಅಲ್ಲಾ ಡದೆ ಹೋಗುತ್ತಲಿರುವ ಹಡಗಿನಲ್ಲಿ ನಾವಿಕರೆಲ್ಲರೂ ಗಾಢನಿದ್ದೆಮಾಡುತ್ತಲಿದ್ದು ಹಡ ಗನ್ನು ನಡೆಸುತ್ತಲಿರುವನೊಬ್ಬನೇ ಅದರಲ್ಲಿ ಕುಳಿತು ಇರುವ ಅಸನ್ನಿವೇಶಕ್ಕಿಂತ ಏಕಾಂತ ವಾದ ಸನ್ನಿವೇಶವು ಎಲ್ಲಿಯಾದರೂ ದೊರಕುವುದೋ? ಆದುದರಿಂದಲೇ ಧರ್ಮ ದೇವನು ನೌಕಾಧಿಪನ ಅಪ್ಪಣೆಯನ್ನು ಕೇಳಿದನು.

ಇವನು ಆಲೋಚನೆಮಾಡುತ್ತಿರುವಾಗ ಮಧ್ಯರಾತ್ರಿಯಾಯಿತು ಅಷ್ಟು ಹೊತ್ತಿಗೆ ಬೆಳದಿಂಗಳು ಬಂದು ವೇಗವತಿಯು ಮಲಯದ್ವೀಪವನ್ನು ಸೇರಿತು. ಅಮರ ದೇಶದಿಂದ ಬರತಕ್ಕ ಹಡಗು ಇನ್ನೂ ಬಂದಿರಲಿಲ್ಲವಾದುದರಿಂದ, ತಾವು ತಂದ ಸಾಮಾ ನುಗಳನ್ನು ಈಗಲೇ ಇಳಿಸುವುದಿಲ್ಲವೆಂದು ತಿಳಿದು, ಧರ್ಮದೇವನು ದೋಣಿಯನ್ನು ಹಾಕಿಕೊಂಡು ಯಾಗಪ್ಪನ ಜತೆಯಲ್ಲಿ ದ್ವೀಪವನ್ನು ಸೇರಿ, ದಾಯ ಸರಿಯಾಗಿ ಬೀಳು ವುದೋ ಇಲ್ಲವೋ, ಬೀಳದಿದ್ದರೆ ಸರ್ವಸ್ವವೂ ಹೋಗುವುದಲ್ಲಾ ಎಂದು ಯೋಚನೆ ಯಿಂದ ದಾಳವನ್ನೇ ನೋಡುತ್ತಲಿರುವ ಜೂಜುಗಾರನಂತೆ ಅವಸ್ಥೆಪಟ್ಟನು. ಆಗ ಆರಾದರೂ ಅವನ ಮುಖವನ್ನು ನೋಡಿದ್ದರೆ ಅವನ ಮನೋವಿಕಾರಗಳಿಗೆ ಕಾರಣಗ ಳನ್ನು ಕಂಡು ಹಿಡಿಯಬಹುದಾಗಿದ್ದಿತು ಆದರೆ ಯಾಗಪ್ಪನು, ಬೆಳದಿಂಗಳಲ್ಲಿ ಕಾಣುತ್ತ ಲಿದ್ದ ಆ ದ್ವೀಪದ ಸೊಗಸನ್ನು ನೋಡಿ ಆನಂದ ಪಡುತ್ತಲಿದ್ದ ಕಾರಣ, ಧರ್ಮದೇವನ ಮುಖವನ್ನೇ ನೋಡಲಿಲ್ಲ.

ವೇಗವತಿಯ ನಾವಿಕರು ಈ ದ್ವೀಪದಲ್ಲಿ ಆಗಾಗ ಇಳಿಯುತ್ತಲಿದ್ದಕಾರಣ ಅವ

ರಿಗೆ ಇದರ ಪರೀಕ್ಷೆಯುವು ವಿಶೇಷವಾಗಿದ್ದಿತು. ಧರ್ಮದೇವನು ಇದನ್ನು ಬಲ್ಲನಾದುದ ರಿಂದ ಅವನು ಯಾಗಪ್ಪನನ್ನು ನೋಡಿ ನಾವು ಈ ರಾತ್ರೆ ಎಲ್ಲಿ ಮಲಗೋಣ ಎಂದನು.

ಹಡಗಿನಲ್ಲಿ. "ಗುಹೆಯಲ್ಲಿದ್ದರೆ ಒಳ್ಳೆಯದಲ್ಲವೆ"?

ಆವ ಗುಹೆ? "ಈ ದ್ವೀಪದಲ್ಲಿರುವ ಗುಹೆ."

ಈ ದ್ವೀಪದಲ್ಲಿ ಗುಹೆಯಿರುವುದು ನನಗೆ ತಿಳಿಯದು ಎಂದು ಯಾಗಪ್ಪನು ಹೇಳುತಲೆ, ಧರ್ಮದೇವನು ಉತ್ಸಾಹಗೆಟ್ಟು, ಮೈ ಬೆವರಿ, ಮುಂದೆ ಆವ ಮಾತನ್ನೂ ಆಡಲರಿಯದೆ ಸುಮ್ಮನಿದ್ದು, ಸ್ವಲ್ಪಕಾಲ ಯೋಚನೆಮಾಡಿ, ಬಹುಶಃ ಗುಹೆಯ ಬಾಯಿಯು ಮುಚ್ಚಿಹೋಗಿರಬೇಕು, ಆದುದರಿಂದಲೇ ಅದು ಇರುವುದು ಆರಿಗೂ ತಿಳಿ ಯದು, ಅದನ್ನು ರಾತ್ರಿವೇಳೆಯಲ್ಲಿ ಹುಡುಕುವುದು ಅಸಾಧ್ಯ ಎಂದು ಆತುರವನ್ನು ನುಂಗಿ ಸಮಾಧಾನ ಮಾಡಿಕೊಂಡನು.

ಇಷ್ಟರಲ್ಲಿಯೇ ಬೆಳಕಾಗಿ ಅಮರದೇಶದ ಹಡಗು ಕಾಣಿಸಿತು. ಒಡನೆಯೇ ಇವರಿಬ್ಬರೂ ಹಡಗನ್ನು ಸೇರಿ, ತಮ್ಮ ಸಾಮಾನುಗಳನ್ನು ಕೆಳಗೆ ಇಳುಹಿ, ಆ ಹಡಗಿನ ಸಾಮಾನುಗಳನು ತಮ್ಮ ಹಡಗಿಗೆ ತುಂಬಿಕೊಂಡರು. ಅಷ್ಟರಲ್ಲಿಯೇ ಊಟದ ಹೊತ್ತಾದುದರಿಂದ ಊಟ ತೀರಿಸಿಕೊಂಡು ಮುಂದೆ ಪ್ರಯಾಣ ಮಾಡುವುದು ಒಳ್ಳೆಯ ದೆಂದು ವೇಗವತಿಯ ನಾವಿಕರು ಅಡಿಗೆಗೆ ಹೂಡಿದರು.

ಇದೇ ಸರಿಯಾದ ಸಮಯವೆಂದು ಧರ್ಮದೇವನು ಕೈಯಲ್ಲಿ ಒಂದು ತುಪಾಕಿ ಯನ್ನು ಹಿಡಿದು ಅಡಿಗೆಯಾಗುವುದರೊಳಗಾಗಿ ನಾನು ಬೇಟೆಯಾಡಿಕೊಂಡು ಬರು ತ್ತೇನೆ ಎಂದು ಹೇಳಿ ಹೊರಟನು. ಬೇಡವೆಂದು ಎಷ್ಟು ಹೇಳಿದರೂ ಕೇಳದೆ, ಯಾಗ ಪ್ಪನೂ ಅವನ ಹಿಂದೆಯೇ ಹೋದನು; ಇನ್ನೂ ಒತ್ತಿ ಹೇಳಿದರೆ ಎಲ್ಲಿ ಅವನ ಮನ ಸ್ಸಿಗೆ ಅಸಮಾಧಾನವಾಗುವುದೋ ಎಂದು ಧರ್ಮದೇವನು ಸುಮ್ಮನಾದನು. ಸ್ವಲ್ಪ ದೂರ ಹೋಗುವುದರಲ್ಲಿಯೇ, ಇವರಿದಿರಿಗೆ ಒಂದು ಕಾಡುಕುರಿಯು ಓಡಿತು; ಧರ್ಮ ದೇವನು ಅದನ್ನು ಹೊಡೆದು ಯಾಗಪ್ಪನ ಕೈಯಲ್ಲಿ ಕೊಟ್ಟು ನಾನು ಬರುವುದರೊಳ ಗಾಗಿ ಇದರ ಬಾಡನ್ನು ಊಟಕ್ಕೆ ಸಿದ್ಧಪಡಿಸಿರು. ಒಂದು ತುಪಾಕಿಯನ್ನು ಹಾರಿಸಿದರೆ ಆ ಸದ್ದನ್ನು ಕೇಳಿ ನಾನು ಹಿಂತಿರುಗಿ ಬರುವೆನು ಎಂದು ಹೇಳಿ ಕಳುಹಿಸಿದನು. ಯಾಗ ಪ್ಪನು ಊಟಕ್ಕೆ ಅಣಿಮಾಡಲು ಹಿಂತಿರುಗಿದನು.

ಅವನು ಅತ್ತ ತಿರುಗಲು, ಇತ್ತ ಧರ್ಮದೇವನು ಬಂಡೆಗಳನ್ನು ಏರುತ್ತ ಏರುತ್ತ ಸುಮಾರು ಒಂದು ಸಾವಿರ ಅಡಿಗಳ ಉನ್ನತದಲ್ಲಿದ್ದ ಒಂದು ಕೋಡುಗಲ್ಲನ್ನು ಹತ್ತಿ ನೋಡಲು, ಅವನಿಗೆ ಆ ದ್ವೀಪದ ಪಶ್ಚಿಮಭಾಗದಲ್ಲಿ ಹಡಗುಗಳು ಬಂದು ನಿಲ್ಲಲು ಏಕಾಂತವಾಗಿರುವ ಒಂದು ದೊಡ್ಡ ಕೊಲ್ಲಿಯು ಕಂಡಿತು ಮತ್ತೊಂದು ಕಡೆ ತಿರುಗಲು ಅಡಿಗೆಯನ್ನು ಮಾಡಿಕೊಂಡು ಆಡುತ್ತ ಪಾಡುತ್ತ ಇರುವ ನಾವಿಕರನ್ನು ನೋಡಿ, "ಇವರೊಬ್ಬೊಬ್ಬರೂ ಅಪಾಯಕರವಾದ ಈ ಕಳ್ಳವ್ಯಾಪಾರವನ್ನು ಮಾಡಿ ವಿಶೇಷ ದುಡ್ಡನ್ನು ಗಳಿಸಿ ಅವ್ಯದಾದರೂ ಒಂದು ತೀರಪ್ರದೇಶವನ್ನು ಸೇರಿದರೆ ಮಿತ ಮೀರಿ ವೆಚ್ಚಮಾಡಿ, ಹೇರಳವಾಗಿ ಕುಡಿದು ಕೂಡಿದ್ದ ಹಣವನ್ನೆಲ್ಲಾ ಕಳೆದುಕೊಂಡು ಪುನಃ ಈ ನಿಹೀನವ್ಯಾಪಾರಕ್ಕೆ ಇಳಿಯುವರಲ್ಲಾ" ಎಂದು ವ್ಯಾಕುಲಪಟ್ಟು, ಒಡನೆಯೇ "ಈಗ ನಾನು ಅವರ ವ್ಯಾಪಾರವನ್ನು ಹೀಯಾಳಿಸುತ್ತೇನೆ ; ಒಂದು ವೇಳೆಯಲ್ಲಿ ನಿಕ್ಷೇಪವು ದೊರೆಯದಿದ್ದರೆ ಮರಳಿ ಅದೇ ವ್ಯಾಪಾರಕ್ಕೆ ಇಳಿಯಬೇಕಾಗುವುದು." ಎಂದು ಯೋಚಿಸಿದನು. ಆದರೆ ಯೋಗಾನಂದನ ಮಾತು ಸುಳ್ಳಾಗಲಾರದೆಂದು ಅವನಿಗೆ ನಂಬುಗೆ ಇದ್ದಿತು; ಒಂದು ವೇಳೆ ಅದು ಸುಳ್ಳಾದರೂ ಹೀಗೆ ಜೀವನಮಾಡುವುದಕ್ಕಿಂತ ತಿರುಪವೆತ್ತಿ ಜೀವಿಸುವುದು ಉತ್ತಮವೆಂದು ಧರ್ಮದೇವನು ನಿಶ್ಚಯಿಸಿದನು.

ಮೂರು ತಿಂಗಳ ಹಿಂದೆ, ಧರ್ಮದೇವನು ಕಾರಾಗೃಹದಿಂದ ಬಿಡುಗಡೆಯಾದರೆ ಸಾಕೆಂದಿದ್ದನು; ಈಗ ಬಿಡುಗಡೆಯಾದುದು ನಾಲದೆ ಧನದ ಆಸೆಯು ಹುಟ್ಟಿತು. ಅದು ಅವನ ತಪ್ಪಲ್ಲ, ದೇವರು ಮನುಷ್ಯನ ಶಕ್ತಿಯುಕ್ತಿಗಳಿಗೆ ಪರಿಮಿತಿಯಿಟ್ಟನೇ ಹೊರತು ಅವನ ಆಸೆಯೆಂಬುದಕ್ಕೆ ಪರಿಮಿತಿಯನ್ನೇ ಇಡಲಿಲ್ಲ.

ಶಿಖರದಿಂದ ಧರ್ಮದೇವನು ಕೆಳಗೆ ಇಳಿದು ಪಶ್ಚಿಮಭಾಗದ ಕೊಲ್ಲಿಯನ್ನು ಸೇರಿ ಪೂರ್ವಕ್ಕೆ ಪರಿಶೋಧಿಸುತ್ತ ಹೊರಡಲು, ಮನುಷ್ಯಕಲ್ಪಿತವಾದ ಕೆಲವು ಗುರುತುಗಳು ಸಮುದ್ರತೀರದಿಂದ ಸುಮಾರು ಐವತ್ತು ಗಜಗಳ ದೂರದಲ್ಲಿದ್ದ ಒಂದು ಗುಂಡುಕಲ್ಲಿನ ವರೆಗೂ ಕಂಡುಬಂದುವು, ಮುಂದೆ ಏನೂ ಕಾಣಲಿಲ್ಲ. ಅವುಗಳನ್ನು ನೋಡಿ ಇವೇ ಸೋದರಳಿಯ ಮಹೇಂದ್ರನಿಗಾಗಿ ನಾಗೇಂದ್ರನು ಮಾಡಿಟ್ಟ ಗ.ರ್ತುಗಳು ಎಂದು ಊಹಿಸಿ, ಅವುಗಳು ಮಲಿನವಾಗಿದ್ದುದನ್ನು ಕಂಡು, ಆರಾದರೂ ಬಂದು ಈ ಕುರುಹುಗಳ ಆಧಾರದ ಮೇಲೆ ಹೂತಿದ್ದ ಧನವನ್ನು ಅಪಹರಿಸಿರಬಹುದೋ ಎಂಬ ಅನುಮಾನವು

ಹುಟ್ಟಿ, ಮಾನಸಿಕವಾದ ಸುಖದುಃಖಗಳೇ ಕಾಲಕ್ರಮೇಣ ಅಳಿಸಿಹೋಗುವುವು, ಹಾಗಿರುವಲ್ಲಿ ಭೌತಿಕವಾದ ಈ ಗುರ್ತುಗಳೂ ಕಾಲಕ್ರಮದಿಂದ ಮಲಿನವಾಗುವುದೇ ನಾಶ್ಚರ್ಯ? ಇದರಿಂದ ಹೇಗೆ ಇಲ್ಲಿ ಧನವಿಲ್ಲವೆಂದು ಹೇಳಲಾದೀತು ಎಂದು ಸಮಾಧಾನ ಮಾಡಿಕೊಂಡನು.

ಇಷ್ಟರಲ್ಲಿಯೇ ನಿಗುದಿಮಾಡಿಕೊಂಡಿದ್ದ ಹಾಗೆ ತುಪಾಕಿಯ ಸದ್ದು ಕೇಳಲು, ಧರ್ಮದೇವನು ಒಡನೆಯೇ ಬಂಡೆಗಳನ್ನು ಹತ್ತಿ ನಾವಿಕರೆಲ್ಲರೂ ಕಾಣುವಂತೆಯೇ ಆತುರದೊಡನೆ ಓಡಿಬರುತ್ತಲಿರಲು, ಕಾಲು ಜಾರಿ ಕೆಳಕ್ಕೆ ಉರುಳಿಬಿದ್ದನು. ಅದನ್ನು ನೋಡಿ ಎಲ್ಲರೂ ಒಂದೇ ಸಲ ಓಡಿಬಂದರು, ಆದರೆ ಯಾಗಪ್ಪನು ಎಲ್ಲರಿಗಿಂತ ಮುಂದೆ ಬಂದು, ಧರ್ಮದೇವನು ಬೋರಲುಬಿದ್ದಿದ್ದುದನ್ನೂ, ಮೂಗಿನಲ್ಲಿ ರಕ್ತಸುರಿಯುತ್ತ ಲಿದ್ದುದನ್ನೂ, ಮೈಮೇಲೆ ಪ್ರಜ್ಞೆಯಿಲ್ಲದಿರುವುದನ್ನೂ ನೋಡಿ, ಅವನ ಬಾಯಿಗೆ ಸ್ವಲ್ಪ ಮೈರೇಯವನ್ನು ಬಿಟ್ಟನು. ಕೂಡಲೇ ಧರ್ಮದೇವನು ಕಣ್ಣುಬಿಟ್ಟು ನೋಡಿ ನನ್ನ ಮೈಕೈಯೆಲ್ಲವೂ ಜಜ್ಜಿಹೋಗಿರುವುವು, ಮೊಣಕಾಲುಕೀಲುಗಳಲ್ಲಿ ಬಹಳ ನೋವು; ತಲೆಯು ತಿರುಗುತ್ತಲಿದೆ; ಈಗ ಊಟದ ಹೊತ್ತಾಗಿರುವುದರಿಂದ, ನೀವೆಲ್ಲರೂ ಹೋಗಿ ಊಟಮಾಡಿ ಬನ್ನಿರಿ ಎಂದು ಹೇಳಿದನು.

ಅವನ ಮಾತಿಗೆ ನಾವಿಕರಾರೂ ಒಪ್ಪದೆ ಹೇಗಾದರೂ ಮೆಲ್ಲಗೆ ಎತ್ತಿಕೊಂಡು ಹೋಗಿ ಹಡಗಿನಲ್ಲಿ ಮಲಗಿಸಬೇಕೆಂದು ಅವನನ್ನು ಎತ್ತಲು ಪ್ರಯತ್ನಪಟ್ಟರು. ತನ್ನ ಮೆಯ್ಯ ಮೇಲೆ ಅವರು ಕೈಹಾಕಿದ ಒಡನೆ, ಅಯ್ಯಯ್ಯೋ, ಎಂದು ಗಟ್ಟಿಯಾಗಿ ಕಿರುಚಿ ಕೊಂಡು ನೀವೇನಾದರೂ ನನ್ನನ್ನು ಎತ್ತಿದರೆ ಪ್ರಾಣವೇ ಹೋಗುವುದು ಎಂದು ಹೇಳಿದನು. ಹಸಿವಿನಿಂದ ಒಳಲಿದ್ದರೂ, ನೋವಿನಿಂದ ನರಳುತ್ತಿರುವ ತನ್ನನ್ನು ಬಿಟ್ಟು ಹೊರಡಲಾರದೆ ಮುಂದೆ ಏನ ಮಾಡಲಿಕ್ಕೂ ತೋಚದೆ ಸುಮ್ಮನೆ ನಿಂತಿರುವವರನ್ನು ನೋಡಿ, ಧರ್ಮದೇವನು ನೀವೆಲ್ಲರೂ ಊಟತೀರಿಸಿಕೊಂಡು ಬನ್ನಿರಿ; ನನಗೆ ಈಗ ಊಟಬೇಕಾಗಿಲ್ಲ; ನೆಮ್ಮದಿಯಾಗಿ ಸ್ವಲ್ಪ ಬಿದ್ದಿದ್ದರೆ ಸಾಕು ಎಂದು ಹೇಳಿ ಅವರೆಲ್ಲ ರನ್ನೂ ಕಳುಹಿಸಿಕೊಟ್ಟನು. ಹಸಿವನ್ನು ತಡೆಯಲಾರದೆ, ಬಿಟ್ಟರೆ ಸಾಕೆಂದಿದ್ದ ನಾವಿಕರು ಮತ್ತೊಂದು ಸಾರಿ ಹೇಳಿಸಿಕೊಳ್ಳದೆ ಹೊರಟರು.

ಸುಮಾರು ಹನ್ನೊಂದು ಘಂಟೆಯ ಹೊತ್ತಿಗೆ ನಾವಿಕರು ಊಟತೀರಿಸಿಕೊಂಡು ಪುನಃ ಧರ್ಮದೇವನ ಎಡೆಗೆ ಬಂದರು. ಆ ವೇಳೆಗೆ ಅವನು ಗಟ್ಟಿಯಾಗಿ ನರಳುತ್ತಲಿದ್ದುದನ್ನು ನೋಡಿ, ಏತಕ್ಕೆಂದು ಕೇಳಲು, ಅವನು ನೋವು ಹೆಚ್ಚಾಯಿತೆಂದು ಹೇಳಿದನು. ಆಗ ಪ್ರಚಂಡನು ಪ್ರಯಾಣವು ನಿಂತುಹೋದರೆ ಕೆಲಸವು ಕೆಟ್ಟುಹೋಗುವುದೆಂದು ಯೋಚಿಸಿ, ಕಂಬಳಿದಂಡಿಗೆಯನ್ನು ಮಾಡಿ ಅವನನ್ನು ಹಡಗಿಗೆ ಸಾಗಿಸಿರಿ ಎಂದು ಅಪ್ಪಣೆಮಾಡಿದನು. ಅದನ್ನು ಕೇಳಿ ಧರ್ಮದೇವನು ನನಗೆ ಹಿಂದೆ ತೋಚಿದ್ದ ನೋವಲ್ಲದೆ ಎದೆಯ ಬಲಪಾರ್ಶ್ವದಲ್ಲಿ ದಬ್ಬಳದಿಂದ ಚುಚ್ಚುವಂತೆ ಯಾತನೆಯಾಗುತ್ತಲಿದೆ; ನನ್ನನ್ನು ಮುಟ್ಟಿದರೆ ಬೇರೆ ನಾನು ಉಳಿಯುವುದಿಲ್ಲ ಎಂದು ಹೇಳಲು, ಒಬ್ಬ ನಾವಿಕನು ಬಂದು ನೋಡಿ, ಇವನ ಪಕ್ಕೆಲುಬು ಮುರಿದಿರುವಂತೆ ಇದೆ ಎಂದನು; ಮತ್ತೊಬ್ಬನು ಇವನನ್ನು ಇಲ್ಲಿ ಬಿಟ್ಟುಹೋಗುವುದು ಧರ್ಮವಲ್ಲ, ಹೇಗಾದರೂ ಉಪಾಯಮಾಡಿ ಹಡಗಿಗೆ ಸಾಗಿಸಬೇಕು ಎಂದನು

ನನ್ನನ್ನು ಉಳಿಸಿಕೊಳ್ಳುವುದಕ್ಕಾಗಿ ನೀವು ಮಾಡುವ ಕೆಲಸಗಳು ನನ್ನನ್ನು ಈಗಲೇ ಸಾಯಿಸುವುವು, ಆದುದರಿಂದ ನನಗೆ ಸ್ವಲ್ಪ ಆಹಾರವನ್ನು ಇಟ್ಟು ನೀವು ಹೋಗಿಬಿಡಿರಿ ಎಂದು ಧರ್ಮದೇವನು ಪ್ರಾರ್ಥಿಸಲು, ಪ್ರಚಂಡನು "ಇವನನ್ನು ಬಿಟ್ಟು ಹೊರಡಲು ನನ್ನ ಮನಸ್ಸೊಡಂಬಡದು, ಸಾಯಂಕಾಲದ ವರೆಗೆ ಇಲ್ಲಿಯೇ ಇದ್ದು ಅನುಕೂಲವಾದರೆ ಇವನನ್ನು ಕರೆದುಕೊಂಡು ಹೋಗೋಣ" ಎಂದನು. ಆವ ಸಂದರ್ಭದಲ್ಲಿಯೂ ತಾನು ಮಾಡಿರುವ ಕಟ್ಟಳೆಗೆ ವಿರೋಧವಾಗಿ ಪ್ರಯಾಣವನ್ನೇ ಆಗಲಿ, ಇತರ ಕೆಲಸವನ್ನೇ ಆಗಲಿ, ನಿಲ್ಲಿಸದ ನೌಕಾಧಿಪನು ಈ ರೀತಿ ಆಡಿದುದನ್ನು ಕೇಳಿ, ನಾವಿಕರೆಲ್ಲರೂ ಪರಮಾಶ್ಚರ್ಯಪಟ್ಟರು. ಬಳಿಕ ಯಾಗಪ್ಪನು ನೌಕಾಧಿಪನನ್ನು ನೋಡಿ ನೀವೆಲ್ಲರೂ ಪ್ರಯಾಣಮಾಡಿರಿ, ನಾನಿಲ್ಲಿದ್ದು ಮಾಲತೀಯನನ್ನು ನೋಡಿಕೊಳ್ಳುವೆನು ಎನಲು, ಅದಕ್ಕೆ ಧರ್ಮದೇವನು ನನ್ನ ಅವಿವೇಕಕ್ಕಾಗಿ ನೀನು ನಿನಗೆ ಬರುವ ಲಾಭವನ್ನು ಬಿಟ್ಟುಬಿಡುವುದು ನನಗಿಷ್ಟವಿಲ್ಲ ಎಂದು ಹೇಳಿದನು.

ಆಗ ಪ್ರಚಂಡನು ಧರ್ಮದೇವನನ್ನು ನೋಡಿ ಎಲೈ ಮಾಲತೀಯ, ನಿನ್ನನ್ನು ಬಿಟ್ಟುಹೋಗಲು ನನಗಿಷ್ಟವಿಲ್ಲ; ಪ್ರಯಾಣವನ್ನು ಹೆಚ್ಚು ನಾವಕಾಶಮಾಡಲು ಆಗುವುದಿಲ್ಲ; ಈಗ ಏನ ಮಾಡಲಿ ಹೇಳು, ನನಗೇನೂ ತೋಚುವುದಿಲ್ಲ, ಎಂದು ಹೇಳಿದು

ದಕ್ಕೆ, ಧರ್ಮದೇವನು ನೀವೆಲ್ಲರೂ ಹೋಗಿಬನ್ನಿರಿ. ನನಗೆ ಸ್ವಲ್ಪ ಆಹಾರವನ್ನೂ, ಕಾಡುಮೃಗಗಳ ಹಾವಳಿಯನ್ನು ತಪ್ಪಿಸಿಕೊಳ್ಳಲು ಒಂದು ತುಪಾಕಿ, ಅದಕ್ಕೆ ಬೇಕಾದ ಮದ್ದು, ಗುಂಡೂ, ನೀವು ಬರುವುದು ನಾವಕಾಶವಾಗುವುದಾದರೆ ಒಂದು ಗುಡಿಸಲು ಹಾಕಿಕೊಳ್ಳಲು ಪಿಕಾಶಿ ಮಚ್ಚು ಕತ್ತಿ ಇವುಗಳನ್ನೂ ಕೊಟ್ಟುಹೋದರೆ ಒಂದೆರಡು ದಿನಗಳು ಇಲ್ಲಿದ್ದು ಆಯಾಸತೀರಿಸಿಕೊಂಡು, ಇಲ್ಲಿರುವ ಮೂಲಿಕೆಗಳಿಂದ ನೋವನ್ನು ಆರಿಸಿಕೊಂಡು, ನೀವು ಹಿಂತಿರುಗಿಬರುವುದರೊಳಗಾಗಿ ನಿಮ್ಮೊಡನೆ ಹೊರಡುವುದಕ್ಕೆ ಸಿದ್ಧವಾಗಿರುವೆನು. ಎಂದನು,

ಧರ್ಮದೇವನ ಅವಸ್ಥೆಯನ್ನೂ ಮುಷ್ಕರವನ್ನೂ ನೋಡಿ, ಪ್ರಚಂಡನು ನಿನ್ನ ಇಷ್ಟವಿದ್ದಂತಾಗಲಿ ಎಂದು ಅವನು ಕೇಳಿದ ಪದಾರ್ಥಗಳನ್ನು ತರಿಸಿ ಕೊಟ್ಟು, ಕೆಲವು ಉಪಚಾರೋಕ್ತಿಗಳನ್ನು ಹೇಳಿ ಮುಂದೆ ಪ್ರಯಾಣಮಾಡಿದನು. ಈ ನಾವಿಕರ ಗುಣಗಳನ್ನೂ ಅವರಾಡಿದ ಮಾತುಗಳನ್ನೂ ನೆನಸಿಕೊಂಡು ಈ ಕಳ್ಳರಲ್ಲಿ ಕೂಡ ಇಷ್ಟು ಸ್ನೇಹವೂ ಶ್ರದ್ಧಾಭಕ್ತಿಗಳೂ ಇರುವುವೇ ಎಂದು ಧರ್ಮದೇವನು ಆಶ್ಚರ್ಯ ಪಟ್ಟನು.

---

# ಹತ್ತೊಂಬತ್ತನೆಯ ಅಧ್ಯಾಯ

## ಅಜ್ಞಾತನಾಮಕನು

ವೇಗವತಿಯು ಮಲಯದ್ವೀಪವನ್ನು ಬಿಟ್ಟು ಲೀಲಾವತೀ ಮಾರ್ಗವನ್ನು ಹಿಡಿದು ಹೊರಟ ಸ್ವಲ್ಪ ಹೊತ್ತಿನ ಮೇಲೆ, ಧರ್ಮದೇವನು ಎದ್ದು ಒಂದು ಉನ್ನತವಾದ ಬಂಡೆಯ ಮರೆಯಲ್ಲಿ ನಿಂತು, ಹಡಗು ಕಣ್ಣಿಗೆ ಕಾಣುವ ವರೆಗೆ ಅಲ್ಲಿಯೇ ಇದ್ದು, ಅನಂತರ ಕಯ್ಯಲ್ಲಿ ಪಿಕಾಶಿಯನ್ನೂ, ಮಚ್ಚು ಕತ್ತಿಯನ್ನೂ, ತುಪಾಕಿ ಮದ್ದು ಗುಂಡುಗಳನ್ನೂ ತೆಗೆದುಕೊಂಡು ತಾನು ಬೆಳಿಗ್ಗೆ ನೋಡಿದ್ದ ಗುಂಡುಕಲ್ಲಿನ ಬಳಿಗೆ ಓಡಿದನು. ಆಗ ಸುಮಾರು ಮಧ್ಯಾಹ್ನವಾಗಿ ಬಿಸಿಲು ಚುರುಕಾಗಿದ್ದಿತು ; ಅದನ್ನು ತಡೆಯಲಾರದೆ ಪಕ್ಷಿಗಳು ಸೊಕ್ಕಿ ಮರದ ಮೇಲೆ ನೆರಳಿನಲ್ಲಿ ನಿಶ್ಶಬ್ದವಾಗಿ ಕುಳಿತಿದ್ದುವು; ಹಾದಿಯಲ್ಲಿ ಹಲ್ಲಿ ಹರಣೆ ಮುಂತಾದವುಗಳು ಇದ್ದ ಸ್ಥಳವನ್ನು ಬಿಟ್ಟು ಪೊದರುಗಳನ್ನಾಶ್ರಯಿಸುತ್ತಲಿದುವು;

ಮಿಡಿತೆಗಳು ಹಾರಿ ಗರಿಕೆಗಳ ಸಂದುಗಳನ್ನು ಸೇರಿ ಚಿವ್ ಚಿವ್ ಎಂದು ದೀನಸ್ವರ ದಿಂದ ಕೂಗುತ್ತಲಿದ್ದುವು, ಕಾಡು ಕುರಿಗಳು ಧರ್ಮದೇವನು ಬರುವುದನ್ನು ಕಂಡು ಬಂಡೆಯಿಂದ ಬಂಡೆಗೆ ನೆಗೆದು ಕೊನೆಗೆ ಮರದ ನೆರಳಲ್ಲಿ ತಂಪಾಗಿರುವ ಬುಗ್ಗೆಗಳ ಸಮೀಪದಲ್ಲಿ ಮೇಯುತ್ತಲಿದ್ದುವು. ಆ ದ್ವೀಪವು ಹೀಗೆ ಜೀವಭರಿತವಾಗಿದ್ದರೂ ಧರ್ಮದೇವನು ಏಕಾಂಗಿಯಾಗಿದ್ದಂತೆ ಭಾವಿಸಿಕೊಂಡನು.

ಈ ಮಧ್ಯಾಹ್ನದ ಬೆಳಕು ಧರ್ಮದೇವನಿಗೆ ಭಯಂಕರವಾಗಿದ್ದಿತು. ಆ ಹಡ ಗಿನವರಾರಾದರೂ ತನ್ನ ಕೃತ್ರಿಮವನ್ನು ತಿಳಿದು, ತಾನು ಮಾಡುವ ಕಾರ್ಯಗಳನ್ನು ಮರೆಯಲ್ಲಿ ನಿಂತು ಎಲ್ಲಿ ನೋಡುವರೋ ಎಂಬ ಗಾಬರಿಯೇ ಇವನ ಭಯವು. ಇದ ಕ್ಕಾಗಿಯೇ ಇವನು ಆಗಾಗ ಉನ್ನತವಾಗಿರುವ ಬಂಡೆಯನ್ನು ಹತ್ತಿ ಸುತ್ತು ಮುತ್ತಲೂ ನೋಡಿ ಆರೂ ಇಲ್ಲವೆಂದು ಸಮಾಧಾನವನ್ನು ಮಾಡಿಕೊಂಡು ಕೆಳಗೆ ಇಳಿದು ಬರುತ್ತ ಲಿದ್ದನು.

ವಿವೇಕವಿಲ್ಲದೆ ಆತುರಪಟ್ಟು ಮಾಡುವ ಕೆಲಸ ನಿಷ್ಫಲವಾಗುವುದೆಂದು ತಿಳಿದು ಧರ್ಮದೇವನು ಕೊಲ್ಲಿಯಿಂದ ಗುಂಡುಕಲ್ಲಿನವರೆಗೆ ನೆಲವನ್ನೂ ಅಲ್ಲಿ ಮಾಡಿದ್ದ ಗುರ್ತು ಗಳನ್ನೂ, ಎರಡು ಮೂರಾವೃತ್ತಿ ಚೆನ್ನಾಗಿ ನೋಡಿ, ನಾಗೇಂದ್ರನು ತನ್ನ ಹಡಗನ್ನು ಈ ಕೊಲ್ಲಿಯಲ್ಲಿ ಬಿಟ್ಟು, ತಂದಿದ್ದ ಧನವನ್ನು ಗುಹೆಯಲ್ಲಿ ನಿಕ್ಷೇಪಿಸಿ, ಅದರ ಬಾಯಿಗೆ ಈ ಗುಂಡುಕಲ್ಲನ್ನು ಇಟ್ಟಿರಬೇಕು ಎಂದು ಊಹಿಸಿದನು. ಆದರೆ ಇಷ್ಟು ದೊಡ್ಡ ಕಲ್ಲನ್ನು ಅವನೊಬ್ಬನೇ ಹೇಗೆ ಎತ್ತಿ ಇಟ್ಟಿದ್ದಾನು? ಬಹುಶಃ ಎತ್ತಿ ಇಡುವುದಕ್ಕಿಂತ ಮೇಲಿನಿಂದ ಉರುಳಿಸಿರಬಹುದು ಎಂದು ಯೋಚಿಸಿ, ಇಲ್ಲಿಯವರೆಗಿದ್ದ ಸೂಚನೆಗಳು ಇದರಮೇಲೆ ಕಾಣದೆ ಇರುವುದರಿಂದ ಇದರ ಕೆಳಗೆ ಗುಹೆಯ ಬಾಯಿ ಇರಬೇಕು ಎಂದು ನಿಶ್ಚಯಿಸಿ, ಕಲ್ಲಿನ ಸುತ್ತಲೂ ನೆಲವನ್ನು ಅಗೆದು ನೋಡಲು ಒಳಗಡೆ ಒಂದು ಗಾರೆಯ ಗೋಡೆಯು ಕಾಣಿಸಿತು. ಅದರಲ್ಲಿ ಒಂದು ಕಡೆ ಸುಮಾರು ತೋಳು ಹಿಡಿ ಯುವಷ್ಟು ಒಂದು ರಂಧ್ರಮಾಡಿ, ಮರದ ಸನ್ನೆಯಿಂದ ಮೀಟಿದರೆ ಗುಂಡುಕಲ್ಲು ಸುಲಭ ವಾಗಿ ಉರುಳಿ ಹೋಗುವುದೆಂದು ಯೋಚಿಸಿ ಬಲವಾದ ಒಂದು ರೆಂಬೆಯನ್ನು ಕತ್ತರಿಸಿ ತಂದನು.

ಗಾರೆಯ ಗೋಡೆಯ ತೂತಿನಿಂದ ಸನ್ನೆಯನ್ನು ಹಾಕಿ ಎಷ್ಟು ಮೀಟಿದರೂ ಗುಂಡು ಕಲ್ಲು ಅಲ್ಲಾಡಲೇ ಇಲ್ಲ. ಅದರ ಸುತ್ತಲೂ ಜಡಿದಿದ್ದ ಜಲ್ಲಿಕಲ್ಲುಗಳನ್ನು ಬಿಡಿಸಿದ ಹೊರತು ಗುಂಡು ಅಲ್ಲಾಡದೆಂದು ಅವುಗಳನ್ನು ಕೀಳಲು ನೋಡಿ ಸಾಧ್ಯವಿಲ್ಲವೆಂದು ತಿಳಿದು ಮೂರು ಕಡೆ ಸಣ್ಣ ತೂತುಗಳನ್ನು ಮಾಡಿ ಮದ್ದುತುಂಬಿ ಸುಗಂಗವನ್ನು ಹಾರಿಸಿದನು. ಕೂಡಲೆ ಗುಂಡುಕಲ್ಲು ಅಲ್ಲಾಡಿ ಜಲ್ಲಿಕಲ್ಲುಗಳು ಸಡಲಿದುವು ಒಡನೆಯೇ ಗಾರೆಗೋಡೆಯ ತೂತಿನಿಂದ ಅನೇಕಕ್ರಿಮಿಕೀಟಗಳೂ, ಹರಣೆಗಳೂ, ಸಣ್ಣ ಸಣ್ಣ ಹಾವುಗಳೂ ಹೊರಗೆ ಹೊರಟವು; ಕೊನೆಗೆ ಒಂದು ಘಟಸರ್ಪವು ಧನವನ್ನು ಕಾಯುತ್ತಲಿದ್ದು ಧನಾಧ್ಯಕ್ಷನು ಬಂದ ಮೇಲೆ ತನಗಿನ್ನೇನು ಕೆಲಸವೆಂದು ಹೊರಡುವುದೋ ಎಂಬಂತೆ ಹೊರಗೆ ನಲಿಯುತ್ತ ಒಂದು ಸಮುದ್ರತೀರದಲ್ಲಿದ್ದ ಒಂದು ದೊಡ್ಡ ಪೊದೆಯನ್ನು ಸೇರಿಕೊಂಡಿತು.

ಧರ್ಮದೇವನು ಪುನಃ ಸನ್ನೆಮರದಿಂದ ಗುಂಡುಕಲ್ಲನ್ನು ಮೀಟಲು ಅದು ಉರುಳಿ ಸಮುದ್ರದ ಕೊಲ್ಲಿಗೆ ಹೋಗಿ ಬಿದ್ದಿತು. ಆ ಕಲ್ಲಿನ ಅಡಿಯಲ್ಲಿದ್ದ ಮಣ್ಣನ್ನು ತೆಗೆಯುತ್ತಲೆ ಕಬ್ಬಿಣದ ಬಳೆ ಹಾಕಿದ ಒಂದು ಚೌಕವಾದ ಸಣ್ಣ ಚಪ್ಪಡಿಯು ಕಂಡಿತು; ಅದನ್ನು ಮೀಟಿ ನೋಡಲು, ಕೆಳಗೆ ಇಳಿಯಲು ಅನುಕೂಲವಾಗಿ ಗಾರೆಯಿಂದ ಕಟ್ಟಿದ ಮೆಟ್ಟಿಲುಗಳು ಕಂಡವು. ಪ್ರಥಮಪ್ರಯತ್ನದಲ್ಲಿ ಹಿಡಿದ ಕೆಲಸ ಇಷ್ಟುಮಟ್ಟಿಗೆ ಕೈಗೂಡಿತೆಂಬ ಸಂತೋಷವು ಧರ್ಮದೇವನಿಗಿದ್ದರೂ, ಈ ಮೆಟ್ಟಿಲುಗಳನ್ನು ನೋಡುತಲೆ ಅವನಿಗೆ ಕೈಕಾಲು ಸಡುಗಿ, ಮೈ ಬೆವರಿ, ಮನಸ್ಸು ತಲ್ಲಣಿಸಿತು. ಇವನಲ್ಲದೆ ಮತ್ತಾರಾಗಿದ್ದರೂ ಆತುರದಿಂದ ಒಳಗೆ ಇಳಿಯುತ್ತಲಿದ್ದರು; ಆದರೆ ಇವನು ವಿವೇಕಶಾಲಿಯಾದುದರಿಂದ ಅಲ್ಲಿಯೇ ನಿಂತು "ಎಲೈ ಧರ್ಮದೇವ, ನೀನು ಹೆದರಬೇಡ ; ಧನವು ಸಿಕ್ಕುವುದೆಂಬ ಆಸೆಯನ್ನು ಬಿಡು; ನಾಗೇಂದ್ರನು ಇಲ್ಲಿ ಧನವನ್ನು ಇಡಲಿಲ್ಲ ; ಯೋಗಾನಂದನು ಹೇಳಿದ ನಿಕ್ಷೇಪವು ಅವನ ಕನಸಿನ ಗಂಟು; ಒಂದು ವೇಳೆ ನಾಗೇಂದ್ರನು ಧನವಿಲ್ಲಿಟ್ಟಿದ್ದುದು ವಾಸ್ತವವಾಗಿದ್ದರೂ, ದುಷ್ಟಬುದ್ಧಿಯ ಕಡೆಯವರು ನಾನು ಈಗ ಬಂದಿರುವಂತೆ ಬಂದು ಧನವನ್ನು ಅಪಹರಿಸದೆ ಇದ್ದಿರಲಾರರು. ಹೇಗಾದರೂ ಧನವಿಲ್ಲವೆಂದು ಮನಸ್ಸನ್ನು ಗಟ್ಟಿಮಾಡಿಕೊಂಡು ಒಳಗೆ ಇಳಿ. ಸಿಕ್ಕಿದರೆ ನಿನ್ನ ಪುಣ್ಯವೆಂದು ತಿಳಿ ; ಇಲ್ಲವಾದರೆ ಸಂಕಟಪಡಬೇಡ" ಎಂದು ತಾನೇ ಹೇಳಿಕೊಂಡನು.

ಈ ರೀತಿ ಧೈರ್ಯಮಾಡಿಕೊಂಡು ಒಳಗೆ ಇಳಿಯುವುದರೊಳಗಾಗಿಯೇ ಧರ್ಮದೇವನಿಗೆ ಮತ್ತೊಂದಾಲೋಚನೆಯು ಹುಟ್ಟಿತು. ನಾಗೇಂದ್ರನು ಇಲ್ಲಿ ಧನವನ್ನಿಡದಿದ್ದರೂ, ಅಥವಾ ಇಟ್ಟಿದ್ದ ಧನವನ್ನು ದುಷ್ಟಬುದ್ಧಿಯ ಕಡೆಯವರು ದೋಚಿಕೊಂಡು ಹೋಗಿದ್ದರೂ ಈ ಗುಹೆಗೆ ಇಷ್ಟು ಬಂದೋಬಸ್ತನ್ನು ಮಾಡಬೇಕಾದ ಅವಶ್ಯಕತೆಯು ಇರುತ್ತಿರಲಿಲ್ಲ; ಆದುದರಿಂದ ಧನವು ಬಹುಶಃ ಇಲ್ಲಿ ಇರಬಹುದು ಎಂದು ಊಹಿಸಿ, ಧನವು ಸಿಕ್ಕಿದರೆ ಸಂತೋಷ, ಸಿಕ್ಕದಿದ್ದರೆ ದುಃಖವಿಲ್ಲ ಎಂದು ನಿರ್ಧರಮಾಡಿಕೊಂಡು ಒಳಗೆ ಇಳಿದನು.

ಗುಹೆಯು ಒಳಗೆ ಅಷ್ಟು ಕತ್ತಲೆಯಾಗಿರಲಿಲ್ಲ, ಅಲ್ಲಲ್ಲಿ ಒಂಡೆಗಳ ಸಂದುಗಳಿಂದ ಬೆಳಕೂ ಗಾಳಿಯೂ ಒಳಕ್ಕೆ ಬರುತ್ತಲಿದ್ದುವು. ಧರ್ಮದೇವನು ಕೆಳಕ್ಕೆ ಇಳಿದು ಗುಹೆಯ ಮಧ್ಯೆ ನಿಂತು ಸುತ್ತುಮುತ್ತಲೂ ನೋಡಿ ನಾನಾ ಬಣ್ಣದ ಕಲ್ಲುಗಳನ್ನು ಕಂಡು ಅಯ್ಯೋ! ಇವೇ ನಾಗೇಂದ್ರನ ರತ್ನಗಳು, ಇವುಗಳನ್ನೇ ಯೋಗಾನಂದನು ರತ್ನಗಳೆಂದು ಭಾವಿಸಿದ್ದುದು, ಅವನ ಭ್ರಾಂತಿಯೇ ನನಗೂ ಉಂಟಾಯಿತು ಎಂದು ವ್ಯಸನಪಟ್ಟು, ನಾಗೇಂದ್ರನ ಮರಣಶಾಸನವನ್ನು ಬಾಯಲ್ಲಿ ಹೇಳಿಕೊಂಡು ನಿಂತನು ಆಗ ಆತುರಗಾರನಿಗೆ ಬುದ್ಧಿ ಶೂನ್ಯವು ಎಂಬ ಗಾದೆಯು ಅವನಿಗೆ ಜ್ಞಾಪಕಕ್ಕೆ ಬಂದಿತು. ಆಹಾ! ನಾಗೇಂದ್ರನ ಮರಣಶಾಸನದ ಪ್ರಕಾರ ಇದರೊಳಗೆ ಮತ್ತೊಂದು ಸಣ್ಣ ಗುಹೆ ಇರಬೇಕು. ಇದರ ಬಾಗಿಲು ವಾಯುವ್ಯಮೂಲೆಯಲ್ಲಿರಬೇಕು ಎಂದು ಜ್ಞಾಪಿಸಿಕೊಂಡು ಆ ಮೂಲೆಯ ಗೋಡೆಯನ್ನು ಪಿಕಾಸಿಯಿಂದ ಕುಟ್ಟಲು ಟೊಳ್ಳು ಸದ್ದಾಯಿತು. ತನ್ನ ಶ್ರಮವು ವ್ಯರ್ಥವಾಗಬಾರದೆಂದು ಆ ಗೋಡೆಯ ಮಿಕ್ಕಾದ ಭಾಗಗಳನ್ನು ಕುಟ್ಟಿನೋಡಿ ಅಲ್ಲೆಲ್ಲಿಯೂ ಈ ಟೊಳ್ಳು ಸದ್ದನ್ನು ಕಾಣದೆ ತಾನು ಮೊದಲು ನೋಡಿದ ಸ್ಥಳದಲ್ಲಿ ಅಗೆಯಲು ಪ್ರಾರಂಭಿಸಿದನು. ಕಲ್ಲಿನಂತೆ ಬಣ್ಣಹಾಕಿದ್ದ ಗೋಡೆಯ ಗಾರೆಯು ಹೆಪ್ಪು ಹೆಪ್ಪಾಗಿ ಕೆಳಗೆ ಬಿದ್ದು, ಒಳಗೆ ಒಂದು ಕಲ್ಲಿನ ದ್ವಾರವೂ ಅದಕ್ಕೆ ಕೀಲುಗಳು ಹಾಕಿ ಮುಚ್ಚಿದ್ದ ಒಂದು ಕಲ್ಲಿನ ಕದವೂ ಕಂಡುಬಂದುವು. ಈ ಕಲ್ಲಿನ ಕದಕ್ಕೆ ಒಂದು ಕಬ್ಬಿಣದ ಒಳೆಯು ಇದ್ದಿತು; ಅದನ್ನು ಹಿಡಿದು ಕದವನ್ನು ಎಳೆಯಲು ಬಾಗಿಲು ತೆರೆದು ಹೋಗಿ ಒಳಗಿನ ಗುಹೆಯು ಕಂಡಿತು.

ಧನವಿರಬಹುದೆಂಬುದಕ್ಕೆ ದೃಷ್ಟಾಂತಗಳು ಹೆಚ್ಚಾದಷ್ಟೂ ಧರ್ಮದೇವನಿಗೆ ಅಧೈರ್ಯವು ಹೆಚ್ಚುತಲಿದ್ದಿತು. ಒಳಗಿನ ಗುಹೆಯಿರುವುದೆಂದು ತಿಳಿದ ಕೂಡಲೆ, ಅವನ

ಕಯ್ಯಲ್ಲಿದ್ದ ಪಿಕಾಸಿಯು ಕೆಳಗೆ ಬಿದ್ದು, ತಲೆ ತಿರಿಯುವಂತೆ ಆಗಿ, ಎರಡು ಕೈಗಳಿಂದ ತಲೆಯನ್ನು ಒತ್ತಿಹಿಡಿದು, ಮೇಲಾರಾದರೂ ಇದ್ದು ತನ್ನ ಕೆಲಸವನ್ನು ನೋಡುವರೋ ಎಂಬ ವ್ಯಾಜದಿಂದ ಹೊರಕ್ಕೆ ಬಂದು ಶಿಖರದ ಬಂಡೆಯನ್ನು ಮೆಲ್ಲಮೆಲ್ಲಗೆ ಹತ್ತಿ ಸುತ್ತಲೂ ನೋಡಿ, ಅಲ್ಲಿಂದಿಳಿದು ಗುಹೆಯನ್ನು ಪುನಃ ಪ್ರವೇಶಿಸಿದನು. ಇವನು ಸಣ್ಣ ಗುಹೆಯ ಬಾಗಿಲನ್ನು ಸೇರುವುದರೊಳಗಾಗಿ ಆ ಗುಹೆಯಲ್ಲಿದ್ದ ಕೆಟ್ಟ ಗಾಳಿಯೆಲ್ಲಾ ಹೋಗಿದ್ದಿತು. ಒಳಗೆ ಪ್ರವೇಶಮಾಡಿ ನೋಡಲು ಒಂದು ಕಡೆ ಕಲ್ಲ ಸಂದಿನಿಂದ ಸ್ವಲ್ಪ ಬೆಳಕು ಬರುತ್ತಲಿದ್ದರೂ ಒಟ್ಟು ಕತ್ತಲಾಗಿದ್ದಿತು; ಅವನಿಗೆ ಕತ್ತಲೆಯಲ್ಲಿ ಚೆನ್ನಾಗಿ ಕಣ್ಣು ಕಾಣಿಸುತ್ತಲಿದ್ದುದರಿಂದ ಎಲ್ಲಾ ಕಡೆಯನ್ನೂ ನಿಧಾನವಾಗಿ ನೋಡಿ ಈ ಗುಹೆಯೂ ಮೊದಲಿನ ಗುಹೆಯಂತೆ ಬರಿದಾಗಿದ್ದುದನ್ನು ಗ್ರಹಿಸಿದನು.

ಒಡನೆಯೇ ಅವನು ನೈಋತ್ಯಮೂಲೆಯಲ್ಲಿ ಧನವು ನಿಕ್ಷೇಪಿಸಿರುವುದೆಂದು ಜ್ಞಾಪಿಸಿಕೊಂಡು ಪಿಕಾಸಿಯಿಂದ ಆ ಮೂಲೆಯ ನೆಲವನ್ನು ಸುಮಾರು ಒಂದಡಿ ಆಳ ಅಗೆದನು. ಆವ ಧನವೂ ಕಂಡುಬರಲಿಲ್ಲ; ಪುನಃ ಅಗೆದನು; ಎಷ್ಟು ಅಗೆದರೂ ಒರೇ ಮಣ್ಣೇ ಸಿಕ್ಕುತಲಿತ್ತು. ಗುಂಡಿಯನ್ನು ತೆಗೆದು ಹಣವನ್ನು ಹೂಳಿಡುವವನಿಗೆ ಗುಂಡಿಯು "ನನ್ನ ಬಾಯಿಗೆ ಧನವೂ ನಿನ್ನ ಬಾಯಿಗೆ ಮಣ್ಣೂ" ಎಂದು ಹೇಳುವುದೆಂಬ ಗಾದೆಯನ್ನು ಧರ್ಮದೇವನು ಕೇಳಿದ್ದನು; ಅದರಂತೆ ಧನವನ್ನು ಭೂಮಿಯು ನುಂಗಿರಬಹುದೆಂದು ಚಿಂತಿಸಿದನು. ಇನ್ನಷ್ಟು ಅಗೆದು ನೋಡೋಣವೆಂದು ಪಿಕಾಸಿಯನ್ನು ಒಂದೇ ಸ್ಥಳದಲ್ಲಿ ಮೂರು ನಾಲ್ಕಾವೃತ್ತಿ ಬಲವಾಗಿ ಹಾಕಲು ಅಡಿಯಲ್ಲಿ ಒಂದು ಮರದ ಹಲಗೆ ಇರುವಂತೆ ತೋರಿತು. ಆ ಹಲಗೆಯ ಮೇಲೆ ಪಿಕಾಸಿಯ ಪೆಟ್ಟು ಬೀಳಲು ಅವನ ಎದೆಗೆ ಗುಂಡಿನ ಪೆಟ್ಟು ಬಿದ್ದಂತಾಯಿತು. ಅವನ ಆಗಿನ ಅವಸ್ಥೆಯನ್ನು ಬಣ್ಣಿಸಲು ಆರಿಂದಲೂ ಸಾಧ್ಯವಾಗದು. "ಹಣವಿದ್ದರೆ ಚಿಂತೆ, ಹಣವಿಲ್ಲದ ಚಿಂತೆ—ಏನಾದರೂ ಚಿಂತೆ ಜೀವಕ್ಕೆ" ಎಂದು ದಾಸರು ಹೇಳುವಂತೆ ಆತನ ಅವಸ್ಥೆಯು ಇದ್ದಿತು. ಈ ರೀತಿ ಸ್ವಲ್ಪ ಚಿಂತಿಸಿ, ಮೇಲಿದ್ದ ಹಲಗೆಯ ಮಣ್ಣನ್ನು ತೆಗೆಯಲು, ಅದು ಎರಡು ಅಡಿಗಳು ಅಗಲ ಮೂರು ಅಡಿಗಳುದ್ದದ ಪೆಟ್ಟಿಗೆಯ ಮುಚ್ಚಳವಾಗಿದ್ದಿತು. ಹಲಗೆಯನ್ನು ಎತ್ತಲು ನೋಡಿದನು; ಪೆಟ್ಟಿಗೆಗೆ ಹಾಕಿದ್ದ ಬಲವಾದ ಕೀಲುಗಳೂ ಮತ್ತು ಒಳ ಹೊರ ಬೀಗಗಳೂ ತಮ್ಮ ವಶಕ್ಕೆ ಕೊಟ್ಟಿದ್ದ ಧನವನ್ನು ಯಜಮಾನನಿಗೆ ವಿನಾ ಮತ್ತಾರಿಗೂ

ಸುಲಭವಾಗಿ ಕೊಡಕೂಡದೆಂದು ಅದನ್ನು ಭದ್ರವಾಗಿ ಕಾಪಿಟ್ಟುಕೊಂಡಿವೆಯೋ ಎಂಬಂತಿದ್ದುವು ಮುಚ್ಚಳವನ್ನು ತೆರೆಯಲು ಸಾಧ್ಯವಿಲ್ಲದೆ, ಪೆಟ್ಟಿಗೆಗೂ ಮುಚ್ಚಳಕ್ಕೂ ಮಧ್ಯೆ ಇದ್ದ ಸಂದಿನಲ್ಲಿ ಪಿಕಾಸಿಯನ್ನು ಸಿಕ್ಕಿಸಿ, ಬಲವಾಗಿ ಐದಾರು ಸಲ ಮೀಟಲು ಮುಚ್ಚಳವು ಕಿತ್ತು ಕೆಳಗೆ ಬಿದ್ದಿತು ಒಳಗೆ ಮುಚ್ಚಿದ್ದ ಮಯಣದ ಬಟ್ಟೆಯನ್ನೆತ್ತಿ ನೋಡುತ್ತಲಿರುವ ವೇಳೆಗೆ, ಮೇಲೆ ಆರೋ ಓಡಾಡುವಂತೆ ಸೆರಳಾಯಿತು.

ಧರ್ಮದೇವನು ಒಡನೆಯೇ ಪೆಟ್ಟಿಗೆಯನ್ನು ಮಯಣದ ಬಟ್ಟೆಯಿಂದ ಮುಚ್ಚಿ, ತುಪಾಕಿಯನ್ನು ಕಯ್ಯಲ್ಲಿ ಹಿಡಿದು ಗುಹೆಯಿಂದ ಹೊರಗೆ ಬಂದು ಬಂಡೆಯನ್ನು ಹತ್ತಿ ನೋಡುವಲ್ಲಿ, ಒಂದು ಕುರಿಯು ಮೇಲೆ ಮೇಯುತಲಿದ್ದಿತು. ಮನುಷ್ಯರಾರೂ ಇಲ್ಲವೆಂದು ತಿಳಿದು, ಅವನು ಪುನಃ ಗುಹೆಯನ್ನು ಹೊಕ್ಕು ಮಯಣದ ಬಟ್ಟೆಯನ್ನು ಎತ್ತಿ ನೋಡಲು ಕಣ್ಣು ಚದುರಿತು. ಸ್ವಲ್ಪಕಾಲ ಕಣ್ಣುಮುಚ್ಚಿಕೊಂಡಿದ್ದು, ಅನಂತರ ಕಣ್ಣು ಬಿಟ್ಟು ನೋಡುವಲ್ಲಿ, ಪೆಟ್ಟಿಗೆಯಲ್ಲಿ ಮಾಡಿದ್ದ ಮೂರು ಅರೆಗಳೊಳಗೆ, ಒಂದರಲ್ಲಿ ಭಂಗಾರದ ಇಟ್ಟಿಗೆಗಳೂ, ಮತ್ತೊಂದರಲ್ಲಿ ಚಿನ್ನದ ಹಳೆಯ ನಾಣ್ಯಗಳೂ, ಇವೆರಡಕ್ಕಿಂತ ದೊಡ್ಡದಾದ ಮೂರನೆಯದರಲ್ಲಿ ಮುತ್ತುಗಳೂ ಕೆಂಪುಗಳೂ ವಜ್ರಗಳೂ ಹೇರಳವಾಗಿ ತುಂಬಿರುವುದನ್ನು ಕಂಡನು ಅವುಗಳನ್ನು ನೋಡಿ ಇದೇನು ಭ್ರಾಂತಿಯೋ ನಿಜವೋ ಎಂದು, ಆ ಅರೆಗೆ ಕೈಹಾಕಿ ಕೆಲವು ಕೆಂಪು ಮುತ್ತು ವಜ್ರಗಳನ್ನು ಸೇರೆಸೇರೆಯಾಗಿ ಎತ್ತಿ ಪೆಟ್ಟಿಗೆಗೆ ಸುರಿದು, ಕಿವಿಗಿಂಪಾಗಿ ಕೇಳಿದ ಶಬ್ದದಿಂದ ಆನಂದಪಟ್ಟು, ಅದರಿಂದುಂಟಾದ ಸಂತೋಷವಂ ತಡೆಯಲಾರದೆ, ಗುಹೆಯ ಹೊರಗೆ ಬಂದು, ಹುಚ್ಚನಂತೆ ಕೆಲವು ಕಾಲ ದ್ವೀಪದಲ್ಲಿ ಓಡಾಡುತ್ತಲಿದ್ದನು. ಮನಸ್ಸು ಸಮಾಧಾನಸ್ಥಿತಿಗೆ ಬಂದ ಮೇಲೆ ಮರಳಿ ಗುಹೆಯೊಳಗೆ ಬಂದು ಪೆಟ್ಟಿಗೆಯ ಪಕ್ಕದಲ್ಲಿ ನಿಂತು ತನ್ನ ಗುರುವಾದ ಯೋಗಾನಂದನಿಗೂ ದೇವರಿಗೂ ವಂದನೆ ಮಾಡಿದನು ಇಷ್ಟರಲ್ಲಿಯೇ ಸೂರ್ಯನು ಪಡುವಣ ಸಮುದ್ರದಲ್ಲಿ ಮುಳುಗಲಾರಂಭಿಸಿದನು. ಇನ್ನು ಕತ್ತಲಾಗುವುದೆಂದು ತಿಳಿದು ಗುಹೆಯಿಂದ ಹೊರಗೆ ಬಂದು, ಅದರ ಬಾಯಿಗೆ ಒಂದು ಚೌಕದ ಕಲ್ಲನ್ನು ಮುಚ್ಚಿ, ಅದರ ಮೇಲೆ ಮಲಗಿದನು ಆ ದಿನ ಇವನು ಊಟವೇ ಮಾಡಲಿಲ್ಲ, ಆದರೂ ಇವನಿಗೆ ಹಸಿವು ತೋರಲಿಲ್ಲ. ದೇಹಶ್ರಮಪಟ್ಟಿದ್ದನಾದುದರಿಂದ ಇವನಿಗೆ ಒಳ್ಳೆಯ ನಿದ್ರೆ ಬಂದು ಮಾರಣೆಯ ದಿನ ಬೆಳಿಗ್ಗೆ ಸೂರ್ಯೋದಯವಾಗಿ ಬಿಸಿಲು ಕಣ್ಣನ್ನು ಚುಚ್ಚುವ

ವರೆಗೂ ಏಳಲೇ ಇಲ್ಲ. ಎದ್ದ ಮೇಲೆ ಗುಹೆಯನ್ನು ಹೊಕ್ಕು ಕೆಲವು ವಜ್ರಗಳನ್ನು ಮಾತ್ರ ಅಂಗಿಯ ಜೇಬಿನಲ್ಲಿ ತುಂಬಿಕೊಂಡು, ಪೆಟ್ಟಿಗೆಯನ್ನು ಕೈಲಾದ ವರೆಗೂ ಪೂರ್ವದಂತೆ ಮುಚ್ಚಿ, ಅದರ ಮೇಲೆ ಮಣ್ಣನ್ನು ಹರಡಿ ಕಾಲಿನಲ್ಲಿ ತುಳಿದು ಅಗೆದ ಸುಳಿವು ತಿಳಿಯದಂತೆ ಮಾಡಿ, ಗುಹೆಗಳ ಬಾಗಿಲುಗಳನ್ನು ಕಲ್ಲು ಮಣ್ಣುಗಳಿಂದ ಮುಚ್ಚಿ, ಹೊರಗಿನ ಬಾಯಿಗೆ ಶೀಘ್ರದಲ್ಲಿಯೇ ಬೆಳೆಯುವ ಬಳ್ಳಿಗಳನ್ನು ನೆಟ್ಟು ನೀರು ಹಾಕುತ್ತ ವೇಗವತಿಯ ಆಗಮನವನ್ನೇ ನಿರೀಕ್ಷಿಸುತ್ತಲಿದ್ದನು.

ಆರನೆಯ ದಿನ ವೇಗವತಿಯು ಧರ್ಮದೇವನನ್ನು ಕರೆದುಕೊಂಡು ಹೋಗಲು ಮಲಯದ್ವೀಪಕ್ಕೆ ಬಂದಿತು. ಹಡಗು ಬರುವುದನ್ನೇ ನೋಡುತ್ತಲಿದ್ದ ಧರ್ಮದೇವನು ಒಡನೆಯೇ ದಡವನ್ನು ಸೇರಿ, ಆ ವೇಳೆಗೆ ಹಡಗಿನಿಂದ ದೋಣಿಯಲ್ಲಿ ಬಂದ ನಾವಿಕರ ಯೋಗಕ್ಷೇಮವನ್ನು ವಿಚಾರಿಸಿದನು. ಮೊದಲು ಧರ್ಮದೇವನ ಯೋಗಕ್ಷೇಮವನ್ನು ವಿಚಾರಿಸಬೇಕೆಂಬ ಆತುರದಿಂದ, ನಿನ್ನ ದೇಹಸ್ಥಿತಿ ಹೇಗಿದೆ, ಎಂದು ಅವರು ಮಾಡಿದ ಪ್ರಶ್ನೆಗೆ ಅವನು ನನ್ನನ್ನು ನೀವು ಬಿಟ್ಟು ಹೋದುದರಿಂದ ಎಲ್ಲಾ ವಿಷಯದಲ್ಲಿಯೂ ಅನುಕೂಲವಾಯಿತು ; ಕಾಲಲ್ಲಿ ಮಾತ್ರ ಒಂದು ಕಡೆ ನೋವು ಇನ್ನೂ ಸ್ವಲ್ಪ ಇದೆ. ಆದರೆ ಅದು ಕೆಲಸಕ್ಕೆ ಅಡ್ಡಿಮಾಡುವಹಾಗಿಲ್ಲ ಎಂದನು " ಈ ಪ್ರಯಾಣವು ಬಹು ಲಾಭಕರವಾಗಿದ್ದಿತು ; ಆದರೆ ಹಿಂತಿರುಗಿ ಬರುವ ಸಮಯದಲ್ಲಿ ಸುಂಕದ ಅಧಿಕಾರಿಗಳು ನಮ್ಮನ್ನು ಅಟ್ಟಿಕೊಂಡು ಬಂದರು. ಅವರ ಕೈಗೆ ನಾವು ಸಿಕ್ಕುವುದರಲ್ಲಿದ್ದೆವು ; ಅಷ್ಟರಲ್ಲಿಯೇ ನಮ್ಮ ಪುಣ್ಯಕ್ಕೆ ಕತ್ತಲೆಯಾದುದರಿಂದ ತಪ್ಪಿಸಿಕೊಂಡು ಬಂದೆವು " ಎಂದರು. ಯಾಗಪ್ಪನು "ಈ ಪ್ರಯಾಣದಲ್ಲಿ ನೀನಿದ್ದಿದ್ದರೆ ನಮಗೆ ಸುಂಕದವರ ಯೋಚನೆಯೇ ಇರುತ್ತಿರಲಿಲ್ಲವಲ್ಲಾ ಎಂದು ವ್ಯಸನಪಟ್ಟೆವು. ಈ ಸಾರಿ ಹೆಚ್ಚು ಲಾಭವು ಸಿಕ್ಕಿತು ; ಅದರಲ್ಲಿ ನಿನಗೇನೂ ಸಿಕ್ಕುವುದಿಲ್ಲವಲ್ಲಾ ಎಂದು ನಾನು ವ್ಯಸನಪಡುತ್ತೇನೆ " ಎಂದನು. ಈ ಮಾತನ್ನು ಕೇಳಿ ಧರ್ಮದೇವನಿಗೆ ತಡೆಯಲಾರದಷ್ಟು ನಗು ಬಂದಿತು; ಅದನ್ನು ಕಷ್ಟದಿಂದ ಅಡಗಿಸಿಕೊಂಡು ಬರುವ ಲಾಭವು ಹೋಯಿತಲ್ಲಾ ಎಂದು ವ್ಯಸನಪಡುವಂತೆ ನಟಿಸಿದನು.

ತನಗಾಗಿಯೇ ಬಂದ ಹಡಗನ್ನು ಏರಿ, ಧರ್ಮದೇವನು ಲೀಲಾವತೀಪಟ್ಟಣವನ್ನು ಸೇರಿದ ಕೂಡಲೇ ರತ್ನಪಡಿ ವ್ಯಾಪಾರ ಮಾಡುತ್ತಲಿದ್ದ ಒಬ್ಬ ಸೆಟ್ಟಿಯ ಬಳಿಗೆ

ಹೋಗಿ ಕೆಲವು ಸಣ್ಣ ವಜ್ರಗಳನ್ನು ಅರುವತ್ತು ಸಾವಿರ ವರಹಗಳಿಗೆ ಮಾರಿದನು. ಈ ವ್ಯಾಪಾರದಿಂದ ಸೆಟ್ಟಿಗೆ ಸುಮಾರು ಸೇಕಡಾ ಅರುವತ್ತರಂತೆ ಲಾಭ ಬಂದುದರಿಂದ ಅವನು ಅವ ಪ್ರಶ್ನೆಯನ್ನೂ ಮಾಡದೆ ಹಣವನ್ನು ಕೊಟ್ಟು ಇನ್ನೂ ಇಂತಹ ವಜ್ರಗಳಿದ್ದರೆ ತೆಗೆದುಕೊಂಡು ಬಾ, ತಕ್ಕ ಬೆಲೆಯನ್ನು ಕೊಡುವೆನು, ಎಂದು ಹೇಳಿ ಕಳುಹಿಸಿದನು.

ಮಾರನೇ ದಿನ ಧರ್ಮದೇವನು ಯಾಗಪ್ಪನನ್ನು ಕರೆದು ಅಪ್ಪಾ! ನನಗೆ ತಂದೆ ತಾಯಿಗಳಾರೂ ಇಲ್ಲ; ನನ್ನನ್ನು ಸಾಕುತ್ತಲಿದ್ದ ಸೋದರಮಾವನ ಸಂಗಡ ಜಗಳವಾಡಿಕೊಂಡು ನಾವಿಕನಾಗಿ ಜೀವನಮಾಡುತ್ತಲಿದ್ದು ಕೊನೆಗೆ ನಿಮ್ಮನ್ನು ಸೇರಿದೆನು. ಸೋದರಮಾವನು ಶ್ರೀಮಂತನು, ಮಕ್ಕಳಿಲ್ಲದುದರಿಂದ ಆಸ್ತಿಯನ್ನೆಲ್ಲಾ ನನ್ನ ಹೆಸರಿಗೆ ಬರೆದಿಟ್ಟು ಮೃತಪಟ್ಟನೆಂದು ನನಗೆ ಈಗ ತಿಳಿಯಿತು ಎಂದು ಹೇಳಿ, ಅವನೊಂದಿಗೆ ಕೆಲವು ಮಾತುಗಳನ್ನಾಡಿ ಅವನನ್ನು ತನ್ನ ವಶಮಾಡಿಕೊಂಡು ಅವನಿಗೆ ಒಂದು ಸಣ್ಣದಾದ ಹೊಸ ಹಡಗನ್ನು ಕೊಂಡುಕೊಟ್ಟು, ಅದಕ್ಕೆ ಬೇಕಾದ ನಾವಿಕರನ್ನು ಏರ್ಪಾಡು ಮಾಡಿಕೊಳ್ಳಲು ದುಡ್ಡನ್ನು ಕೊಟ್ಟು “ ಒಂದಾನೊಂದು ಕಾಲದಲ್ಲಿ ನೀನು ಮಾಡಿದ ಪ್ರಶ್ನೆಗೆ, ದೈವಕೃಪೆಯಿದ್ದರೆ ನೀನೂ ಏತಕ್ಕೆ ನೌಕಾಧಿಪನಾಗಬಾರದು, ಎಂದು ನಾನು ಹೇಳಿದುದು ನಿನಗೆ ಜ್ಞಾಪಕವಿರಬಹುದು. ಇಗೋ! ಈಗ ಆ ಕಾಲವು ಒದಗಿದೆ. ನೀನು ಮಲಯಪಟ್ಟಣಕ್ಕೆ ಹೋಗಿ ಕಾಳಿಕಾಬೀದಿಯಲ್ಲಿರುತ್ತಿದ್ದ ಭುಜಂಗಭೂಷಣನು ಮತ್ತು ಅದೇ ಊರ ಪಾಳೆಯದಲ್ಲಿ ವಾಸವಾಗಿರುತ್ತಿದ್ದ ಲಲಿತಾಂಗಿಯು ಇವರಿಬ್ಬರ ವೃತ್ತಾಂತಗಳನ್ನು ತಿಳಿದುಕೊಂಡು ಮಲಯದ್ವೀಪಕ್ಕೆ ಬಂದು ನನಗೆ ತಿಳಿಸು. ನಿನಗೋಸ್ಕರ ನಾನು ಅಲ್ಲಿಯೇ ಕಾದಿರುವೆನು ” ಎಂದು ಹೇಳಿ ಕಳುಹಿಸಿದನು.

ಧರ್ಮದೇವನಿಗೆ ಸೋದರಮಾವನ ಆಸ್ತಿ ಸಿಕ್ಕಿದ ವರ್ತಮಾನವು ವೇಗವತಿಯ ನಾವಿಕರೆಲ್ಲರಿಗೂ ನಿಮಿಷಮಾತ್ರದಲ್ಲಿ ತಿಳಿದು, ಅವರು ತಮ್ಮ ಯಜಮಾನ ಪ್ರಚಂಡನನ್ನು ಮುಂದಿಟ್ಟುಕೊಂಡು ಧರ್ಮದೇವನ ಬಳಿಗೆ ಬಂದು ಅವನು ಹಣಗಾರನಾದುದಕ್ಕಾಗಿ ತಮ್ಮ ಸಂತೋಷವನ್ನು ತಿಳಿಸಿದರು ಅವನ ವಿದ್ಯೆ, ಬುದ್ಧಿ, ನಾಗರಕತೆಯನ್ನು ನೋಡಿ ಇವನು ಅವನೋ ದೊಡ್ಡ ಮನೆತನಕ್ಕೆ ಸೇರಿದವನಾಗಿರಬಹುದೆಂದು ಈ ಮಧ್ಯೆ ಅವರು ಊಹಿಸಿದ್ದರು. ಈಗ ಅದು ಸ್ಥಿರಪಟ್ಟಿತು. ಮುಗುವಳಿಮಾಡಿ

ಕೊಂಡಿದ್ದ ಮೂರು ತಿಂಗಳು ಅಂದಿಗೆ ಮುಗಿದುದರಿಂದ ಅವನು ನಾವಿಕರೆಲ್ಲರಿಗೂ ತಕ್ಕ ಬಹುಮಾನವನ್ನು ಮಾಡಿ, ಪ್ರಚಂಡನಿಂದ ಅಪ್ಪಣೆಯನ್ನು ಪಡೆದು, ನನ್ನ ಕಾರ್ಯಕ್ಕೆ ನಿಮ್ಮ ಸಾಹಾಯ್ಯವು ಬೇಕಾಗುವುದಾದರೆ ನಿಮಗೆ ಜ್ಞಾಪಕಮಾಡಿಕೊಳ್ಳುವೆನು ಎಂದು ಹೇಳಿ ಲೀಲಾವತೀಪಟ್ಟಣದಿಂದ ಜಲಂಧರಪಟ್ಟಣಕ್ಕೆ ಆ ದಿನ ಹೋಗುತ್ತಲಿದ್ದ ಒಂದು ಹಡಗಿನಲ್ಲಿ ಪ್ರಯಾಣವನ್ನು ಮಾಡಿದನು.

ಧರ್ಮದೇವನು ಆ ಪಟ್ಟಣವನ್ನು ಸೇರಿದಾಗ ಆ ಊರಿನಲ್ಲಿ ಹೊಸದಾಗಿ ತಯಾರಾಗಿದ್ದ ಒಂದು ಹಡಗನ್ನು ಪರೀಕ್ಷಾರ್ಥವಾಗಿ ರೇವಿನಲ್ಲಿ ನಡೆಸುತ್ತಲಿದ್ದರು ಅದು ಕೇವಲ ಸಣ್ಣದಲ್ಲದೆಯೂ, ವಿಶೇಷ ದೊಡ್ಡದಲ್ಲದೆಯೂ, ಲಘುವಾಗಿಯೂ, ಬಲವಾಗಿರುವಂತೆಯೂ, ವೇಗವಾಗಿ ಹೋಗುವಂತೆಯೂ ಧರ್ಮದೇವನಿಗೆ ತೋರಿತು. ಆ ಪಟ್ಟಣದವರು ಇಂಥ ಹಡಗುಗಳನ್ನು ಕಟ್ಟುವುದರಲ್ಲಿ ನಿಸ್ಸೀಮರೆಂದು ಅವನು ಕೇಳಿದ್ದನು. ಹಡಗಿನ ಚೆಂದವನ್ನು ನೋಡಿ ಮೋಹಿಸಿ ಅದಕ್ಕೆ ನಲವತ್ತು ಸಾವಿರ ವರಹಗಳ ಬೆಲೆಯೆಂದು ತಿಳಿದು, ಅದನ್ನು ತನಗೆ ಮಾರುವುದಾದರೆ ಅರುವತ್ತುಸಾವಿರ ವರಹಗಳನ್ನು ಕೊಡುವೆನೆಂದು ಅದರ ಯಜಮಾನನಿಗೆ ಹೇಳಿದನು ಕಂಡ ಹಾಗೆ ಇಪ್ಪತ್ತುಸಾವಿರ ವರಹಗಳು ಹೆಚ್ಚಾಗಿ ಸಿಕ್ಕುತ್ತದೆ, ಇದಲ್ಲದೆ ಈ ಹಡಗು ಆರಿಗೋಸ್ಕರ ಕಟ್ಟಲ್ಪಟ್ಟಿತೋ ಅವನು ಇನ್ನೂ ಮೂರು ತಿಂಗಳು ಬರುವುದಿಲ್ಲ; ಅಷ್ಟರೊಳಗೆ ಇನ್ನೊಂದು ಇಂತಹ ಹಡಗನ್ನು ಮಾಡಬಹುದು ಎಂದು ಯಜಮಾನನು ಯೋಚಿಸಿ, ಈ ಹಡಗನ್ನು ಧರ್ಮದೇವನಿಗೆ ಮಾರಲು ಒಪ್ಪಿದನು. ಒಡನೆಯೇ ಧರ್ಮದೇವನು ಹಡಗಿನ ಯಜಮಾನನನ್ನು ಒಬ್ಬ ಕೋಮಟಿಯ ಹತ್ತಿರಕ್ಕೆ ಕರೆದುಕೊಂಡು ಹೋಗಿ, ಅವನೊಂದಿಗೆ ಏಕಾಂತವಾಗಿ ಕೆಲವು ಮಾತುಗಳನ್ನಾಡಿ ಅವನಿಂದ ದುಡ್ಡನ್ನು ಕೊಡಿಸಿದನು. ಯಜಮಾನನು ಸಂತೋಷಪಟ್ಟು, ಬೇಕಾಗಿದ್ದಲ್ಲಿ ಆ ಹಡಗಿಗೆ ತಕ್ಕ ನಾವಿಕರನ್ನು ಏರ್ಪಾಡುಮಾಡಿ ಕೊಡುವೆನು ಎಂದನು. “ನನ್ನ ಹಡಗನ್ನು ನಾನೇ ನಡೆಸುವುದು ನನಗೆ ಇಷ್ಟ; ನಾವಿಕರನ್ನು ಸಂಪಾದಿಸಿ ಕೊಡುವುದಕ್ಕೆ ಬದಲಾಗಿ ನೌಕಾಧಿಪನ ಕೊಟ್ಟಡಿಯಲ್ಲಿ ಒಂದು ನಿಲವುಗನ್ನಡಿಯನ್ನು ಹಾಕಿ ಕೊಡುವುದಲ್ಲದೆ ಆರ ಕಣ್ಣಿಗೂ ಕಾಣದಂತೆ ಒಂದು ಸಣ್ಣ ಬೀರುವನ್ನು ಮಾಡಿಕೊಟ್ಟರೆ ಸಾಕು” ಎಂದನು. ಮಾರನೇದಿನ ಬೆಳಗಾಗುವುದರಲ್ಲಿಯೇ ಇವನು ಹೇಳಿದ ಹಾಗೆ ಎಲ್ಲವೂ ಅಣಿಯಾದುವು.

ಆ ದಿನ ಬೆಳಿಗ್ಗೆ ಧರ್ಮದೇವನು ಅಂಗಡಿಗಳಿಗೆ ಹೋಗಿ ತನಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಸುಮಾರು ಹತ್ತು ಗಂಟೆಗೆ ಜಲಂಧರಪಟ್ಟಣವನ್ನು ಬಿಟ್ಟು ಹಡಗನ್ನು ತಾನೇ ನಡೆಸಿಕೊಂಡು ಹೊರಟನು. ರೇವಿನಲ್ಲಿದ್ದವರೆಲ್ಲರೂ ನಾವಿಕರಾರೂ ಇಲ್ಲದೆ ಯಜಮಾನನೇ ಹಡಗ ನಡೆಸುವುದನ್ನು ನೋಡಬೇಕು ಎಂದು ಕಾದಿದ್ದರು. ಧರ್ಮದೇವನು ಚಮತ್ಕಾರದಿಂದ ಹಡಗ ನಡೆಸುವುದನ್ನು ಕಂಡು ಪರಮಾಶ್ಚರ್ಯಪಟ್ಟು, ಇವನು ಆರೋ ಒಬ್ಬ ದೊಡ್ಡ ವರ್ತಕ, ಅನ್ಯದೇಶದ ಅಧಿಕಾರಿ, ಮಲೆಯಾಳಪ್ರಾಂತ್ಯ ಹೋಗುವನು ಎಂದು ನಾನಾವಿಧವಾಗಿ ಹೇಳುತ್ತಲಿದ್ದರು ಇವನಿಂಥವನೆಂಬುದನ್ನೂ, ಮಲಯದ್ವೀಪಕ್ಕೆ ಹೋಗುವನೆಂಬುದನ್ನೂ ಆರೂ ಊಹಿಸಲಿಲ್ಲ.

ಸ್ವಲ್ಪ ದೂರ ನಡೆಸುವುದರಲ್ಲಿಯೇ ಧರ್ಮದೇವನಿಗೆ ಹಡಗಿನ ವೇಗವು ಗೊತ್ತಾಯಿತು ಸ್ವಾಧೀನತೆಯು ಉಂಟಾಯಿತು ಮೂರನೇ ದಿನ ಸಂಜೆಗೆ ಮೊದಲೇ ಹಡಗು ಮಲಯದ್ವೀಪವನ್ನು ಸೇರಿ, ಗುಹೆಯ ಸಮೀಪದ ಏಕಾಂತವಾದ ಕೊಲ್ಲಿಯಲ್ಲಿ ನಿಂತಿತು. ಒಡನೆ ಧರ್ಮದೇವನು ದೋಣಿಯಲ್ಲಿ ಇಳಿದು ದಡವನ್ನು ಸೇರಿ ಗುಹೆಯನ್ನು ಹೊಕ್ಕು ಪೆಟ್ಟಿಗೆಯಲ್ಲಿದ್ದ ಧನವನ್ನೆಲ್ಲಾ ಹಡಗಿಗೆ ಸಾಗಿಸಿ, ಹಡಗಿನಲ್ಲಿ ಮಲಗಿದ್ದನು. ಮಾರನೆಯ ದಿನ ಗುಹೆಯ ಬಾಯನ್ನು ಯಥಾಪ್ರಕಾರ ಮುಚ್ಚಿ ಯಾಗಪ್ಪನು ಬರುವುದನ್ನೇ ಇದಿರು ನೋಡುತ್ತಲಿದ್ದನು ಇವನು ಬರುವುದು ನಾಲ್ಕು ದಿವಸಗಳು ಸಾವಕಾಶವಾಯಿತು. ಅಲ್ಲಿಯ ವರೆಗೆ ಧರ್ಮದೇವನು ಪ್ರತಿನಿತ್ಯವೂ ದ್ವೀಪವನ್ನು ಒಂದು ಸುತ್ತು ಬಂದು, ರೇವುಗಳನ್ನೂ ಗುಹೆಯನ್ನೂ ಗುಣವೃದ್ಧಿ ಹೇಗೆ ಮಾಡಬಹುದೆಂದು ಯೋಚಿಸುತ್ತಲಿದ್ದನು.

ಯಾಗಪ್ಪನು ಬಂದ ಕೂಡಲೆ ಧರ್ಮದೇವನು ಹಡಗನ್ನು ಸೇರಿ, ಸಮಾಚಾರವನ್ನು ವಿಚಾರಿಸಲು, ಭುಜಂಗಭೂಷಣನು ಸತ್ತು ಹೋದನೆಂತಲೂ ಲಲಿತಾಂಗಿಯು ಅದೃಶ್ಯಳಾದಳೆಂತಲೂ ತಿಳಿಯಬಂದಿತು. ಭುಜಂಗಭೂಷಣನು ವೃದ್ಧನಾಗಿದ್ದುದರಿಂದ ಸಾಯುವುದೇನೋ ಸ್ವಭಾವ; ಲಲಿತಾಂಗಿಯು ಅದೃಶ್ಯಳಾದಳೆಂದರೆ ಅರ್ಥವಾಗಲಿಲ್ಲ; ಅದನ್ನು ವಿಚಾರಿಸಬೇಕೆಂದು ಯೋಚಿಸಿ, ತನ್ನ ಗುಟ್ಟನ್ನು ಹೊರಗೆ ಬಿಡದೆ ಈ ವರ್ತಮಾನವನ್ನೂ, ತನಗೆ ಬೇಕಾದ ಇತರ ಸಂಗತಿಗಳನ್ನೂ ಇತರರ

ಮೂಲಕ ವಿಚಾರಿಸುವುದು ಅನುಚಿತವೆಂದು ತಿಳಿದು, ತಾನೇ ಮಲಯಪಟ್ಟಣಕ್ಕೆ ಹೋಗಬೇಕೆಂದು ನಿಶ್ಚಯಿಸಿದನು.

ತನ್ನ ಗುರ್ತನ್ನು ಹಿಡಿಯಲು ತನಗೇ ಅಸಾಧ್ಯವಾಗಿದ್ದಿತೆಂದು ಮೊದಲೇ ನಮ್ಮ ವಾಚಕರಿಗೆ ತಿಳಿಸಿರುವೆವು. ಧರ್ಮದೇವನಿಗೆ ಪುನಃ ಆ ವಿಷಯದಲ್ಲಿ ಅನುಮಾನ ಹುಟ್ಟಿ ಹಡಗಿನಲ್ಲಿರುವ ನಿಲುಗನ್ನಡಿಯಲ್ಲಿ ತನ್ನನ್ನು ನೋಡಿಕೊಂಡು ಸ್ವಭಾವವಾಗಿಯೇ ನನ್ನನ್ನು ಗುರುತಿಸಲು ಅಸಾಧ್ಯ ; ಇದರ ಮೇಲೆ ನಾನು ಬೇಕಾದ ವೇಷವನ್ನು ಧರಿಸಲು ಅನುಕೂಲವಿರುವುದರಿಂದ ಎಲ್ಲಿಗೆ ಬೇಕಾದರೂ ಧಾರಾಳವಾಗಿ ಹೋಗಬಹುದೆಂದು ಧೈರ್ಯವಾಗಿದ್ದನು.

ಒಂದಾನೊಂದು ಪ್ರಾತಃಕಾಲ ಯಾಗಪ್ಪನನ್ನೂ ಅವನ ನಾವಿಕರಲ್ಲಿ ನಾಲ್ವರನ್ನೂ ಕರೆದುಕೊಂಡು ಮಲಯ ಪಟ್ಟಣಕ್ಕೆ ಪ್ರಯಾಣಮಾಡಿ, ಆ ಪಟ್ಟಣದ ರೇವನ್ನು ಸೇರುತ್ತಲೆ, ಸುಂಕದ ಅಧಿಕಾರಿಗಳೂ, ಅವರ ಜತೆಯಲ್ಲಿ ಕೆಲವು ಸಿಪಾಯಿಗಳೂ ತನ್ನ ಹಡಗಿಗೆ ಬರಲು, ಧರ್ಮದೇವನು ಸ್ವಲ್ಪ ಚಕಿತನಾದರೂ ಅದನ್ನು ಎಳ್ಳಷ್ಟಾದರೂ ಹೊರಗೆ ತೋರ್ಪಡಿಸದೆ, ತಾನು ಉದಾರಸಿಂಹನ ಹೆಸರಿನಲ್ಲಿ ಜಲಂಧರದಲ್ಲಿ ಪಡೆದಿದ್ದ ರಹದಾರಿಯನ್ನು ತೋರಿಸಿ, ಅವರಿಗೆ ಬೇಕಾದ ಸಂಗತಿಗಳನ್ನು ತಿಳಿಸಿ ಅವರನ್ನು ಕಳುಹಿಸಿ ಕೊಟ್ಟನು.

ಧರ್ಮದೇವನು ಹಡಗಿನಿಂದ ಇಳಿದು ಊರಿನಲ್ಲಿ ಹೋಗುತ್ತಿದ್ದಾಗ ಇದಿರಿಗೆ ತನ್ನ ಸಂಗಡ ಜಯಲಕ್ಷ್ಮಿಯಲ್ಲಿ ಕೆಲಸಮಾಡುತ್ತಲಿದ್ದ ಒಬ್ಬ ನಾವಿಕನು ಬಂದನು. ತನ್ನ ಪರೀಕ್ಷೆಗೆ ಇದು ಬಹು ಅನುಕೂಲವಾಯಿತೆಂದು ಧರ್ಮದೇವನು ಸಂತೋಷಪಟ್ಟು, ಅವನ ಇದಿರಿಗೆ ನಿಂತು ಕೆಲವು ಹೊತ್ತು ಮಾತನಾಡಿ, ಅವನು ತನ್ನನ್ನು ಸ್ವಲ್ಪವೂ ಗುರ್ತಿಸದೆ ಹೋಗಲು, ಅವನ ಕಯ್ಯಲ್ಲಿ ಇನಾಮಾಗಿ ಆ ದೇಶದ ಒಂದು ಸಣ್ಣ ಚಿನ್ನದ ನಾಣ್ಯವನ್ನು ಕೊಟ್ಟು ಮುಂದೆ ಹೊರಟನು. ಸ್ವಲ್ಪ ದೂರ ಹೋಗುವುದರೊಳಗಾಗಿಯೇ ಹಿಂದೆ ಕೂಗುತ್ತ ಓಡಿಬರುತ್ತಲಿದ್ದ ಆ ನಾವಿಕನನ್ನು ನೋಡಿ ಏನೆಂದು ಕೇಳಲು, ಅವನು ಅಯ್ಯೋ ! ತಾವು ಚಿಲ್ಲರೆ ನಾಣ್ಯವನ್ನು ಕೊಡುವುದಕ್ಕೆ ಬದಲಾಗಿ ಚಿನ್ನದ ನಾಣ್ಯವನ್ನು ಕೊಟ್ಟಂತೆ ತೋರುತ್ತೆ ; ಅದನ್ನು ತಮಗೆ ಹಿಂದಿರುಗಿ ಕೊಡಲು ಬಂದೆನು ಎಂದನು. ಧರ್ಮದೇವನು ಅದಕ್ಕೆ ನೀನು ಹೇಳುವಂತೆ ನಾನು

ತಪ್ಪುಮಾಡಿದುದೇನೋ ನಿಜ, ಆದರೆ ನಿನ್ನ ಸತ್ಯಕ್ಕೆ ಮೆಚ್ಚಿ ಆ ನಾಣ್ಯದ ಜತೆಗೆ ಇದನೂ ಸೇರಿಸುವೆನು ಎಂದು ಮತ್ತೊಂದು ಚಿನ್ನದ ನಾಣ್ಯವನ್ನು ಕೊಟ್ಟು, ಈ ದುಡ್ಡನ್ನು ಕುಡಿದು ವ್ಯರ್ಥಮಾಡದೆ ನನ್ನ ಹೆಸರಿನಲ್ಲಿ ನಿನ್ನ ಹೆಂಡಿತಿ ಮಕ್ಕಳಿಗೆ ಅವರಿಗೆ ಇಷ್ಟವಾದ ಅಪೂರ್ವವಸ್ತುಗಳನ್ನು ತೆಗೆದುಕೊಡು ಎಂದನು. ಅಯ್ಯಾ! ತಾವು ಆರು, ತಮ್ಮ ಹೆಸರೇನು ಎಂದು ಅವನು ಕೇಳಿದುದಕೆ, "ಉದಾರಸಿಂಹ" ಎಂದು ಹೇಳಿ ಮುಂದೆ ಹೊರಟನು. ನಾವಿಕನು ಈ ಎರಡು ನಾಣ್ಯಗಳನ್ನು ತನ್ನ ಹೆಂಡಿತಿಯ ಕಯ್ಯಲ್ಲಿ ಕೊಟ್ಟು ಉದಾರಸಿಂಹನ ಉದಾರತ್ವವನ್ನು ಕೊಂಡಾಡುತ್ತಲಿದ್ದನು.

ಧರ್ಮದೇವನು ಮೊದಲು ತನ್ನ ತಂದೆ ವಾಸವಾಗಿದ್ದ ಮನೆಗೆ ಹೋದನು. ಆ ಮನೆಯ ಸಮೀಪವನ್ನು ಸೇರಿ ಅದರ ಮುಂದೆ ನಿಂತಾಗ ಅವನ ಕಾಲುಗಳು ಅದುರಿದುವು. ಸ್ವಲ್ಪ ಕಾಲ ಅಲ್ಲಿಯೇ ಇದ್ದು ಮನೆಯ ಮುಂದೆ ವಾಸಮಾಡುತ್ತಲಿದ್ದ ಆಳನ್ನು ಇಲ್ಲಿ ಬಾಡಿಗೆಗೆ ಸ್ಥಳ ಸಿಕ್ಕುವುದೋ ಎಂದು ಕೇಳಿ, ಅವನು ಇಲ್ಲವೆಂದು ಹೇಳಿದರೂ ಕೇಳದೆ, ನಾಲ್ಕನೆಯ ಅಂತಸ್ತನ್ನು ನಾನು ನೋಡಬೇಕು, ಅಲ್ಲಿ ಆರಾದರೂ ವಾಸವಾಗಿದ್ದರೆ ಅವರ ಅಪ್ಪಣೆಯನ್ನು ಕೇಳಿ ಬಾ ಎಂದು ಅವನ ಕಯ್ಯಲ್ಲಿ ಒಂದು ರೂಪಾಯಿಯನ್ನು ಕೊಟ್ಟನು. ಅವನು ಒಡನೆಯೇ ಮೇಲೆ ಹೋಗಿ ಅಲ್ಲಿದ್ದವರ ಅನುಮತಿಯನ್ನು ಪಡೆದು ಧರ್ಮದೇವನಿಗೆ ತಿಳಿಸಿದನು.

ಅವನು ತನ್ನ ತಂದೆಯಿದ್ದ ಕೊಟ್ಟಡಿಯನ್ನು ಪ್ರವೇಶಿಸಲು, ಅಲ್ಲಿ ವಾಸವಾಗಿದ್ದ ನೂತನದಂಪತಿಗಳು ಎದ್ದು ಅವನಿಗೆ ಒಂದು ಆಸನವನ್ನು ಕೊಟ್ಟು ತಾವು ನಿಂತಿದ್ದರು. ಧರ್ಮದೇವನು ಅವರನ್ನು ನೋಡಿ ಮರ್ಯಾದೆಮಾಡಿ, ತನ್ನ ತಂದೆ ಆವಾಗಲೂ ಕುಳಿತುಕೊಳ್ಳುತ್ತಲಿದ್ದ ಸ್ಥಳವನ್ನು ನೋಡಿ ಕಂಬನಿಗಳನ್ನು ಸುರಿಸುತ್ತ ನಿಂತಿದ್ದನು. ಇವನು ಹೀಗೆ ದುಃಖಿಸುವುದನ್ನು ಕಂಡು ಅವರು ಪಶ್ಚಾತ್ತಾಪಪಟ್ಟು, ದುಃಖದ ಕಾರಣ ಇಂತಹುದೆಂದು ತಿಳಿಯದಿದ್ದರೂ ಆ ವೇಳೆಯಲ್ಲಿ ಅವನನ್ನು ಪ್ರಶ್ನೆ ಮಾಡುವುದು ಯುಕ್ತವಲ್ಲವೆಂದು ತಿಳಿದು ಸುಮ್ಮನಿದ್ದರು ಧರ್ಮದೇವನು ತೃಪ್ತಿಯಾಗುವವರೆಗೂ ದುಃಖಿಸಿ "ಹಿಂದೆ ನಾವು ಇಲ್ಲಿದ್ದೆವು, ನನಗೆ ಮುಖ್ಯ ಪ್ರೇಮ ಕಾರಣವಾಗಿದ್ದ ವಸ್ತುವು ಇಲ್ಲಿಯೇ ಕಾಲಾಧೀನವಾಗಿ ಹೋದುದರಿಂದ ಈ ಸ್ಥಳವನು ನೋಡಲು ಬಂದೆನು" ಎಂದು ಹೇಳಿ ಅವರ ಕ್ಷಮಾಪಣೆಯನ್ನು ಕೇಳಿದನು.

ಆಗ ಆ ದಂಪತಿಗಳು “ ಇದು ತಮ್ಮ ಮನೆ, ಆವಾಗ ಬೇಕಾದರೂ ತಾವು ಇಲ್ಲಿಗೆ ಬರ ಬಹುದು ” ಎಂದು ಹೇಳಿದರು.

ಧರ್ಮದೇವನು ಅವರಿಗೆ ತಕ್ಕ ಉಪಚಾರಗಳನ್ನು ಹೇಳಿ ಅಲ್ಲಿಂದ ಇಳಿದು ಮೂರನೆ ಅಂತಸ್ತಿನಲ್ಲಿದ್ದ ಕದರ್ಧಕನೇನಾದನೆಂದು ವಿಚಾರಿಸಲು, ಅವನಿಗೆ ಅನೇಕ ಕಷ್ಟಗಳು ಸಂಭವಿಸಿ ಈಗ ಅವನು ಆ ಪಟ್ಟಣದ ಉತ್ತರಭಾಗಕ್ಕೆ ಸ್ವಲ್ಪ ದೂರದಲ್ಲಿ ಮನೋರಂಜಿನೀ ಎಂಬ ಹೆಸರಿನ ಒಂದು ಭೋಜನಶಾಲೆಯನ್ನು ಇಟ್ಟುಕೊಂಡು ಜೀವಿಸುವನು ಎಂದು ಹೇಳಿದರು. ಬಳಿಕ ಧರ್ಮದೇವನು ಕೆಳಗಿಳಿದು ಅಳಿನಿಂದ ಮನೆಯ ಯಜಮಾನನ ಹೆಸರು ಗುರ್ತುಗಳನ್ನು ತಿಳಿದು, ಆ ದಿನವೇ ಒಬ್ಬ ವಕೀಲನ ಮೂಲಕ ಆ ಮನೆಯನ್ನು ಉದಾರಸಿಂಹನ ಹೆಸರಿನಲ್ಲಿ ಕೇಳಿದಷ್ಟು ದುಡ್ಡು ಕೊಟ್ಟು ಕೊಂಡುಕೊಂಡನು. ಅದೇ ವಕೀಲನ ಮೂಲಕವಾಗಿಯೇ ನಾಲ್ಕನೆಯ ಮಹಡಿಯನ್ನು ಒಡನೆ ಬಿಟ್ಟುಕೊಟ್ಟರೆ ಆ ಮನೆಯಲ್ಲಿ ಮಿಕ್ಕ ಅನುಕೂಲವಾದ ಅವ ಕಡೆ ಬೇಕಾದರೂ ಹೆಚ್ಚು ಬಾಡಿಗೆಯಿಲ್ಲದೆ ವಾಸವಾಗಿರಬಹುದೆಂದು ಅಲ್ಲಿದ್ದ ದಂಪತಿಗಳಿಗೆ ಹೇಳಿ ಕಳುಹಿಸಿದನು.

ಆ ದಿನ ಸಾಯಂಕಾಲವೇ ಆರೋ ಒಬ್ಬ ಅಜ್ಞಾತನಾಮಕನಾದ ದೊಡ್ಡ ಮನು ಷ್ಯನು ಮಲಯಪಟ್ಟಣದ ಪಾಳೆಯದಲ್ಲಿ ಒಂದು ಗುಡಿಸಲನ್ನು ಹೊಕ್ಕು ಅಲ್ಲಿ ಸುಮಾರು ಎರಡು ಗಳಿಗೆಯವರೆಗೆ, ಹಿಂದೆ ಇದ್ದು ಸತ್ತು ಅಥವಾ ದೇಶಾಂತರ ಹೋದ ವರ ವರ್ತಮಾನಗಳನ್ನು ಕೇಳಿ, ಅಲ್ಲಿಂದ ಹೊರಡುವಾಗ ತನ್ನ ಜತೆಯಲ್ಲಿ ಬಂದಿದ್ದ ನಾವಿಕನೊಬ್ಬನಿಗೆ ಕೆಲವು ಮಾತುಗಳನ್ನು ಹೇಳಿ ಹೊರಟುಹೋದನು. ಬೆಳಗಾದ ಕೂಡಲೆ ರಾತ್ರಿ ದೊಡ್ಡ ಮನುಷ್ಯನ ಜತೆಯಲ್ಲಿ ಬಂದಿದ್ದ ನಾವಿಕನು ಆ ಗುಡಿಸಲಿ ನಲ್ಲಿದ್ದ ಬೆಸ್ತನಿಗೆ ಮೀನ ಹಿಡಿಯಲು ಅನುಕೂಲವಾದ ಒಂದು ಹೊಸ ದೋಣಿ ಯನ್ನೂ ಅದಕ್ಕೆ ಬೇಕಾದ ಇತರ ಸಾಮಾನುಗಳನ್ನೂ ಉಚಿತವಾಗಿ ಕೊಟ್ಟು ಹೋದನು. ಜಯಲಕ್ಷ್ಮಿಯ ನಾವಿಕನೂ, ನಾಲ್ಕನೆಯ ಮಹಡಿಯಲ್ಲಿದ್ದ ನೂತನ ದಂಪತಿಗಳೂ, ಪಾಳೆಯದ ಬೆಸ್ತನೂ ಅಜ್ಞಾತನಾಮಕನು ಮಾಡಿದ ಬಹುಮಾನಗಳಿಗೆ ಸಂತೋಷಪಟ್ಟು ಅವನನ್ನು ಕೊಂಡಾಡುತ್ತಲಿದ್ದರು.

---

# ಇಪ್ಪತ್ತನೆಂಯ ಅಧ್ಯಾಯ

## " ಮನೋರಂಜಿನೀ "

ಮಲಯಪಟ್ಟಣದಿಂದ ಉತ್ತರಕ್ಕೆ ಹೋಗುವ ದೊಡ್ಡ ದಾರಿಯಲ್ಲಿ ಸುಮಾರು ಏಳೆಂಟು ಮೈಲಿ ದೂರದಲ್ಲಿ ಒಂದು ಅನ್ನಶಾಲೆಯು ಇದ್ದಿತು. ಆ ಕಡೆ ವ್ಯಾಪಾರಗಾರರೂ ಪ್ರಯಾಣಿಕರೂ ವಿಶೇಷವಾಗಿ ಸಂಚಾರಮಾಡುತ್ತಲಿದ್ದುದರಿಂದ ಎಲ್ಲರೂ ಆ ಶಾಲೆಯಲ್ಲಿ ಇಳಿದು ಊಟಮಾಡಿಕೊಂಡು ಮುಂದೆ ಹೋಗುತ್ತಲಿದ್ದರು. ಈ ಮನೆಗೆ ಸೇರಿದಂತಿದ್ದ ಉದ್ಯಾನವು ಹೂವಿನ ತೋಟಗಳಿಂದಲೂ, ಲತಾಗೃಹಗಳಿಂದಲೂ, ಅಲ್ಲಲ್ಲಿ ಅಪೂರ್ವವಾದ ಫಲಗಳಿಂದ ತುಂಬಿದ ವೃಕ್ಷಗಳಿಂದಲೂ, ಆಟಪಾಟಗಳಿಗೆ ಅನುಕೂಲವಾದ ಸ್ಥಳಗಳಿಂದಲೂ ರಮ್ಯವಾಗಿದ್ದಿತು ಭೋಜನಶಾಲೆಯ ಒಳಗೆ ಚಿತ್ರವಿಚಿತ್ರಗಳಾದ ಪಟಗಳಿಂದಲೂ ಕುರ್ಚಿ ಮೇಜು ಮಂಚಗಳೇ ಮೊದಲಾದ ಸಾಮಾನುಗಳಿಂದಲೂ ಅಲಂಕೃತವಾಗಿ ನೋಡುವವರ ಮನಸ್ಸನ್ನು ಆಕರ್ಷಿಸುತ್ತಾ ಮನೋರಂಜಿನೀ ಎಂಬ ತನ್ನ ಹೆಸರನ್ನು ಸಾರ್ಥಕಮಾಡಿಕೊಳ್ಳುತಿದ್ದಿತು. ಆದುದರಿಂದಲೇ ಅನೇಕರು ಅಲ್ಲಿಗೆ ವಿಹಾರಾರ್ಥವಾಗಿ ಕೂಡ ಹೋಗುತ್ತಲಿದ್ದರು. ಈಚೆಗೆ, ಎಂದರೆ ಸುಮಾರು ನಾಲ್ಕೈದು ವರ್ಷಗಳ ಹಿಂದ, ಪ್ರಯಾಣಿಕರ ಅನುಕೂಲಕ್ಕಾಗಿಯೂ ವ್ಯಾಪಾರದ ಸೌಕರ್ಯಕ್ಕಾಗಿಯೂ ಸರ್ಕಾರದವರು ಸಮುದ್ರತೀರದಲ್ಲಿ ಒಂದು ದೊಡ್ಡ ಕಾಲುವೆಯನ್ನು ತೋಡಿಸಿದರು ಅದು ಸಮೀಪವಾಗಿಯೂ, ಅನುಕೂಲವಾಗಿಯೂ, ಸುಲಭವಾಗಿಯೂ ಇದ್ದುದರಿಂದ ಎಲ್ಲರೂ ಆ ಕಾಲುವೆಯಲ್ಲಿಯೇ ಹೋಗಿಬರುತ್ತಿದ್ದರು ಈ ಹಾದಿಯಲ್ಲಿ ಜನರ ಸುಳಿವೇ ಇಲ್ಲದೆ ಭೋಜನಶಾಲಾಧ್ಯಕ್ಷನ ಆದಾಯವು ಕಡಿಮೆಯಾಗಿ, ಹಿಂದೆ ಸಂಪಾದಿಸಿದ್ದುದನ್ನು ವೆಚ್ಚಮಾಡಿಕೊಂಡು ಜೀವಿಸುತ್ತಲಿದ್ದನು ಅವನೂ ಅವನ ಹೆಂಡಿತಿಯೂ ಡಂಭಗಾರರಾದುದರಿಂದ, ಗಳಿಸಿದ್ದ ದ್ರವ್ಯವು ಸ್ವಲ್ಪ ಕಾಲದಲ್ಲಿಯೇ ವೆಚ್ಚವಾಗಿ, ಅಂದಂದಿನ ಕಾಲಕ್ಷೇಪವಾಗುವುದೇ ಕಷ್ಟವಾಗುತ್ತ ಬಂದಿತು. ಹೀಗಿರುವಲ್ಲಿ ಅಲ್ಲಿದ್ದ ಮನೋರಂಜಕವಾಗಿದ್ದ ಪದಾರ್ಥಗಳೆಲ್ಲವೂ ಒಂದೊಂದಾಗಿ ಮಾಯವಾಗುತ್ತ ಬಂದು, ಬರಿಯ ಭೋಜನಶಾಲೆಯೂ ಅದರ ಹೆಸರೂ ಮಾತ್ರ ನಿಂತಿದ್ದುವು

ಆ ಯಜಮಾನನಿಗೆ ಸುಮಾರು ನಲವತ್ತು ಅಥವಾ ನಲವತ್ತೈದು ವಯಸ್ಸಿರ

ಬಹುದು. ಅವನು ಉದ್ದ, ದೃಢಕಾಯನಾಗಿ ಶರೀರಪುಷ್ಟಿ ಚೆನ್ನಾಗಿದ್ದುದರಿಂದ ಅವನ ಉದ್ದವು ಕಾಣುತ್ತಿರಲಿಲ್ಲ ಅವನ ಪರಿಚಯವು ನಮ್ಮ ಪಾಠಕರಿಗೆ ಮೊದಲೇ ಆಗಿದೆ. ಅವನು ಹಿಂದೆ ಚಿಪ್ಪಿಗನ ಕೆಲಸ ಮಾಡುತ್ತಲಿದ್ದು, ಅದರಲ್ಲಿ ಜೀವನಕ್ಕೆ ಅನುಕೂಲವಾಗದೆ, ಇದ್ದ ಆಸ್ತಿಯನ್ನೆಲ್ಲಾ ಮಾರಿ, ಸುಮಾರು ಹನ್ನೆರಡು ವರ್ಷಗಳ ಹಿಂದೆ ಮನೋರಂಜಿನಿಯನ್ನು ಕ್ರಯಕ್ಕೆ ಕೊಂಡು, ಅಲ್ಲಿ ಜನಗಳಿಗೆ ಅನ್ನವನ್ನು ಹಾಕಿ ಜೀವಿಸುತ್ತಲಿದ್ದನು. ಹೀಗೆ ಎರಡು ವರ್ಷಗಳಾದ ಬಳಿಕ ಅವನು ತನ್ನ ಊರಿನ ಕಳಾಕಾಂತೆಯೆಂಬ ಒಬ್ಬ ಹೆಂಗುಸನ್ನು ಮದುವೆಯಾದನು ಅವಳು ಆಗ ದೃಢಕಾಯ ಳಾಗಿದ್ದಳು ; ಈಚೆಗೆ, ಎಂದರೆ ಸುಮಾರು ಎರಡು ವರುಷಗಳಿಂದ, ಆಗಾಗ ಅವಳಿಗೆ ಚಳಿಜ್ವರ ಬರುತ್ತಲಿದ್ದುದರಿಂದ ಮೆಯ್ಯೆಲ್ಲ ಕೃಶವಾಗಿ ಅವಾಗಲೂ ಒಂದು ಒರಗು ಮಂಚದ ಮೇಲೆ ಮಲಗಿಕೊಂಡೇ ಇರುವಳು.

ಈ ಶಾಲೆಯ ಅಧ್ಯಕ್ಷನು ಕದರ್ಥಕನೆಂದು ನಮ್ಮ ಪಾಠಕರು ಅವಾಗಲೇ ಊಹಿಸಿರಬಹುದು. ಇವನು ಆ ಮಾರ್ಗದಲ್ಲಿ ತನ್ನ ಶಾಲೆಯಲ್ಲಿ ಊಟಮಾಡಲಿಕ್ಕೆ ಯಾರಾದರೂ ಬರುವರೋ ಎಂದು ಪ್ರತಿನಿತ್ಯವೂ ಮನೆಯ ಬಾಗಿಲಿನಲ್ಲಿ ಬೆಳಗಿ ನಿಂದ ಸಾಯಂಕಾಲದ ವರೆಗೂ ನೋಡಿ, ಆರೂ ಬಾರದೇ ಇರುವುದನ್ನು ಕಂಡು, ಗೊಣಗುಟ್ಟುತ್ತ ಒಳಗೆ ಹೋಗುತ್ತಲಿದ್ದನು, ಕಳಾಕಾಂತೆಯು ಮತ್ತಷ್ಟು ಗೊಣ ಗುಟ್ಟುವಳು ಆಗ ಕದರ್ಥಕನು ದೈವಕೃಪೆಯಿದ್ದಂತಾಗಲಿ ಎಂದು ಅವಳಿಗೆ ಸಮಾ ಧಾನ ಹೇಳುತ್ತಲಿದ್ದನು.

ಒಂದು ದಿನ ಕದರ್ಥಕನು ಎಂದಿನಂತೆ ಬಾಗಿಲಲ್ಲಿ ನಿಂದಿರಲು, ದೂರದಲ್ಲಿ ಒಂದು ಅರಬ್ಬಿ ಕುದುರೆಯ ಮೇಲೆ ಅವನೋ ಒಬ್ಬನು ಮಲಯಪಟ್ಟಣದ ಕಡೆಯಿಂದ ತನ್ನ ಮನೆಯ ಕಡೆಗೆ ಬರುತ್ತ, ಅಲ್ಲಿ ಹಲಗೆಯಲ್ಲಿ ದೊಡ್ಡದಾಗಿ ಬರೆದಿದ್ದ "ಮನೋ ರಂಜಿನೀ" ಎಂಬ ಹೆಸರನ್ನು ನೋಡಿ ನಿಂತನು. ಆಗ ಕದರ್ಥಕನು ಅವನ ಸಮೀ ಪಕ್ಕೆ ಹೋಗಿ ಅವನು ಸನ್ಯಾಸಿಯೆಂದು ತಿಳಿದು ಅವನಿಗೆ ತಕ್ಕ ಮರ್ಯಾದೆಯನ್ನು ಮಾಡಲು, ಸನ್ಯಾಸಿಯು ಮನೋರಂಜಿನಿಯು ಇದೇಯೋ? ಇದರ ಯಜಮಾನನಾರು? ಅವನು ಎಲ್ಲಿರುವನು? ಎಂದು ಕೇಳಿದನು. ಅದಕ್ಕೆ ಕದರ್ಥಕನು ಸ್ವಾಮೀ! ಇದೇ

ಮನೋರಂಜಿನೀ ; ಇದರ ಯಜಮಾನನು ನಾನೇ ತಾವು ಕೆಳಗಿಳಿದು ಮನೆಯೊಳಗೆ ಸ್ವಲ್ಪ ವಿಶ್ರಮಿಸಿಕೊಳ್ಳಬೇಕು ಎಂದನು.

ಒಡನೆಯೇ ಸನ್ಯಾಸಿಯು ಕೆಳಗಿಳಿದು ಕುದುರೆಯನ್ನು ಸಮೀಪದಲ್ಲಿದ್ದ ಒಂದು ಮರಕ್ಕೆ ಕಟ್ಟಿ ಒಳಕ್ಕೆ ಹೋದನು. ಕದರ್ಥಕನು ಅವಸರದಿಂದ ಸನ್ಯಾಸಿಯ ಹಿಂದೆ ಓಡಿ ಒಳಗಿದ್ದ ಕುರ್ಚಿಗಳಲ್ಲಿ ಒಂದರ ದೂಳನ್ನೊರಸಿ ಹಾಕಿ, ತನಗೆ ಮತ್ತೊಂದನ್ನು ಅದರ ಎದುರಿಗೆ ಹಾಕಿಕೊಂಡನು. ಸನ್ಯಾಸಿಯು ಕುರ್ಚಿಯಲ್ಲಿ ಕೂರುತಲೆ, ಕದರ್ಥಕನು ತಮಗೇನು ಬೇಕು, ಅದನ್ನು ತಿಳಿಸಿದರೆ ಶಿರಸಾವಹಿಸಿ ತಂದು ಕೊಡುವೆನು ಎಂದನು ಸನ್ಯಾಸಿಯು ಆತನ ಮುಖವನ್ನು ಗುರುತಿಸಿ ನೋಡಿ ಆತನು ತನ್ನ ಮುಖವನ್ನು ಅದೇ ರೀತಿ ಗುರುತಿಸಿ ನೋಡಲಪೇಕ್ಷಿಸುವಂತೆ ಸ್ವಲ್ಪಕಾಲ ಸುಮ್ಮನಿದ್ದು, ಅನಂತರ ಕದರ್ಥಕನೆಂಬುವನು ನೀನೇಯೋ ಎಂದನು.

ನಾನೇ ಅವನು, ತಾವು ಯಾರು? ಎಲ್ಲಿಂದ ಬಿಜಯಮಾಡಿಸಿದಿರಿ? ತಮಗೇನು ಬೇಕು?

ನಾನೊಬ್ಬ ಪರದೇಶಿ, ನನ್ನ ಹೆಸರು ನಿರ್ಮಲಾನಂದ, ನಾನು ದೇಶಾಟನೆ ಮಾಡಿಕೊಂಡು ತಿರಿಯುತ್ತಲಿರುವೆನು.

ತಾವು ಬಿಜಯಮಾಡಿಸಿದುದು ಬಹಳ ಸಂತೋಷ. ತಮಗೇನು ಬೇಕು? ಅಪ್ಪಣೆಯಾಗಲಿ

ನೀನು ಮಲಯಪಟ್ಟಣದಲ್ಲಿ ರಾಜಬೀದಿಯ ಕಾಳಿಕಾಗುಡಿಯ ಅಡ್ಡರಸ್ತೆ ನಾಲ್ಕಂಸ್ತಿನ ಮನೆಯಲ್ಲಿ ಆವಾಗಲಾದರೂ ವಾಸವಾಗಿದ್ದೆಯೋ?

ಅಹುದು.

ಆವಾಗ ಚಿಪ್ಪಿಗನ ಕೆಲಸವನ್ನು ಮಾಡುತ್ತಲಿದ್ದೆಯೋ?

ಇದ್ದೆ ; ಆದರೆ ಆ ಕೆಲಸದಲ್ಲಿ ವರಮಾನ ಕಡಿಮೆಯಾದುದರಿಂದ ಅದನ್ನು ಬಿಟ್ಟು ಇಲ್ಲಿ ಬಂದೆ ತಾವು ಬಿಸಿಲಿನಲ್ಲಿ ಬಂದು ದಣಿದಿದ್ದೀರಿ, ಏನಾದರೂ ಸ್ವಲ್ಪ ಫಲಾಹಾರ ತೆಗೆದುಕೊಂಡರೆ ವಾಸಿಯಲ್ಲವೇ?

ಒಳ್ಳೆಯ ಪದಾರ್ಥಗಳಿದ್ದರೆ ಆಗಲಿ ಎಂದು ಸನ್ಯಾಸಿಯು ಹೇಳುತಲೆ, ಕದರ್ಥ

ಕನು ಒಳಗೆ ಹೋಗಿ ತಕ್ಕ ಏರ್ಪಾಡನ್ನು ಮಾಡಿ ಹಿಂದಿರುಗಿ ಬಂದು ಇನ್ನು ಹತ್ತು ನಿಮಿಷಗಳಲ್ಲಿ ಸಿದ್ಧವಾಗುವುವು ಎಂದು ತಿಳಿಸಿದನು

ನೀನೊಬ್ಬನೇ ಇರುವೆಯೋ ?

ನನ್ನ ಹೆಂಡಿತಿ ಮತ್ತು ಒಬ್ಬ ಆಳು ವಿನಾ ಮತ್ತಾರೂ ಇಲ್ಲ. ಆಳು ಅಡಿಗೆಯ ಮನೆಯಲ್ಲಿದ್ದಾನೆ , ಹೆಂಡಿತಿಯು ಜ್ವರದಲ್ಲಿ ನರಳುತ್ತಿರುವುದರಿಂದ ಇದ್ದರೂ ಇಲ್ಲದಂತೆ ಎಂದು ಹೇಳಬಹುದು ಅವಳು ಆವಾಗಲೂ ಮಹಡಿಯಲ್ಲಿ ಮಲಗಿರುವಳು.

ಓಹೋ ! ನಿನಗೆ ಹೆಂಡಿತಿಯೊಬ್ಬಳು ಇದ್ದಾಳೆಯೋ ? ಎಂದು ಸನ್ಯಾಸಿಯು ಸುತ್ತುಮುತ್ತಲು ನೋಡಲು, ಸಂಸಾರಿಯ ಮನೆಯಲ್ಲಿರಬೇಕಾದ ವಸ್ತುಗಳಾವುದನ್ನೂ ಕಾಣದೆ, ಸನ್ಯಾಸಿಯು ಸುತ್ತುನೋಡಿದನೆಂದು ಕದರ್ಥಕನು ಊಹಿಸಿ, ಸ್ವಾಮೀ ! ಸರಿಯಾದ ಮಾರ್ಗದಲ್ಲಿ ನಡೆಯುವವರಿಗೆ ದೈವಸಹಾಯವು ಕಡಿಮೆ ಎಂದನು ಆಗ ನಿರ್ಮಲಾನಂದನು ಅವನ ಮುಖವನ್ನು ನೋಡುತ್ತ, ಹಾಗೆಂದರೇನು ಎಂದುದಕ್ಕೆ, ಸತ್ಯಮಾರ್ಗವನ್ನು ಬಿಟ್ಟು ಎಂದೂ ನಾನು ಹೋದವನಲ್ಲ ; ಆದರೂ ದೈವಬಲವು ಕಮ್ಮಿಯಾಗಿ ಜೀವನವು ನಡೆಯುವುದೇ ಕಷ್ಟವಾಗಿದೆ ಎಂದು ಸಂಕಟಪಟ್ಟನು

ಒಳ್ಳೆಯ ಮಾರ್ಗದಲ್ಲಿ ನಡೆಯುತ್ತಲಿದ್ದರೆ ಆವಾಗಲಾದರೂ ಒಮ್ಮೆ ದೇವರ ಕೃಪೆಯು ಅಂಥವನ ಮೇಲೆ ಬಿದ್ದೇ ಬೀಳುವುದು

ತಾವು ಸನ್ಯಾಸಿಗಳಾದುದರಿಂದ ಈರೀತಿ ಹೇಳುವಿರಿ. ನನ್ನ ಅನುಭವದಲ್ಲಿ ಹಾಗಿಲ್ಲ.

ನೀನು ಹಾಗೆ ಹೇಳುವುದು ತಪ್ಪೆಂಬುದನ್ನು ನಾನೇ ಈಗ ನಿನಗೆ ತೋರಿಸಿ ಕೊಡುತ್ತೇನೆ ; ನೋಡುವೆಯಂತೆ. ಆದರೆ ನನಗೆ ನೀನೇ ಕದರ್ಥಕನೆಂಬುದನ್ನು ಮೊದಲು ಸ್ಥಿರಪಡಿಸಿಕೊಡು.

ನಾನೇ ಎಂದು ಮೊದಲೇ ಅರಿಕೆಮಾಡಿದ್ದೆ ; ಇದರ ಮೇಲೆ ತಮಗೆ ಇನ್ನೇನಾದರೂ ತಿಳಿಯಬೇಕಾಗಿದ್ದರೆ ಪ್ರಶ್ನೆಮಾಡಿದರೆ ತಿಳಿಸುವೆನು

ಧರ್ಮದೇವನೆಂಬ ನಾವಿಕನನ್ನು ನೀನು ಬಲ್ಲೆಯೋ ?

ಅಯ್ಯೋ ! ನಾನು ಬಲ್ಲೆನೇ ! ಅವನು ಜೀವದೊಂದಿಗಿದ್ದಾನೆಯೋ ? ಅವನಿಗೆ ಬಿಡುಗಡೆಯಾಯಿತೇ ? ಸುಖವಾಗಿದ್ದಾನೆಯೋ ? ತಮಗೇನಾದರೂ ಅವನ ಸಮಾಚಾರ

ತಿಳಿದಿದ್ದರೆ ದಯಮಾಡಿ ತಿಳಿಸಬೇಕು. ಅವನನ್ನು ಸರ್ಕಾರದವರು ಹಿಡಿದುಕೊಂಡು ಹೋದ ಮೇಲೆ ಅವನ ಸುದ್ದಿಯೇ ತಿಳಿಯದು.

ಅವನು ಕಾರಾಗೃಹದಲ್ಲಿ ಸತ್ತನು.

ಮಹಾಸ್ವಾಮೀ ! ಒಳ್ಳೆಯವರಿಗೆ ಕಾಲವಿಲ್ಲವೆಂಬುದಕ್ಕೆ ಇದೊಂದು ದೃಷ್ಟಾಂತ. ಅವನಿಗೇನಾಗಿದ್ದಿತು ?

ಯೌವನವೂ ದಾರ್ಢ್ಯವೂ ಇರುವವರು ಕಾರಾಗೃಹದಲ್ಲಿ ಹೇಗೆ ಸಾಯುವರು ? ಅಲ್ಲಿಯ ಕಷ್ಟವನ್ನನುಭವಿಸಲಾರದೆ ಸತ್ತನು.

ಅಯ್ಯೋ, ಎಂದು ಕದರ್ಧಕನು ಕಂಬನಿಗಳನ್ನು ಸುರಿಸಿದನು.

ನೀನು ಅಳುವುದನ್ನು ನೋಡಿದರೆ ನಿನಗೆ ಅವನಲ್ಲಿ ಪ್ರೇಮವಿದ್ದಿತೆಂದು ತೋರುತ್ತದೆ.

ಅವನನ್ನು ನಾನು ಆವಾಗಲೂ ಪ್ರೀತಿಸುತಲಿದ್ದೆ. ಒಂದು ವೇಳೆ ಮಾತ್ರ, ಎಂದರೆ ಅವನು ಜಯಲಕ್ಷ್ಮಿ ಎಂಬ ಹಡಗಿನ ಅಧಿಪತಿಯಾಗುತಲಿದ್ದಾಗ, ಅವನನ್ನು ನೋಡಿ ನನಗೆ ಹೊಟ್ಟೆಯ ಕಿಚ್ಚಾಯಿತು. ಅದು ಆ ಕ್ಷಣವೇ ಹೋಯಿತು ಎಂದು ಕದರ್ಧಕನು ಕಣ್ಣನ್ನೊರಸಿಕೊಂಡನು

ಧರ್ಮದೇವನು ತಾನು ಸಾಯುವಾಗ ಕೂಡ ತನ್ನನ್ನು ಆವ ತಪ್ಪಿಗೋಸುಗ ಹಿಡಿದು ಸೆರೆಯಲ್ಲಿಟ್ಟರೋ ಗೊತ್ತಿಲ್ಲವೆಂದು ಗೋಳಿಡುತ್ತ ಸತ್ತನು.

ಅದು ನಿಜ , ಅಯ್ಯೋ ಪಾಪ, ಅವನಿಗೆ ಅದು ತಿಳಿಯದು.

ಬಂದಿಮನೆಯಲ್ಲಿ ಅವನ ಜತೆಯಲ್ಲಿ ಅನ್ಯದೇಶದ ಒಬ್ಬ ಹಣಗಾರನಿದ್ದನು. ಅವನು ಅಧಿಕಾರಿಗಳಿಗೆ ವಿಶೇಷವಾಗಿ ಲಂಚವನ್ನು ಕೊಟ್ಟು ಕಾರಾಗೃಹದಿಂದ ಬಿಡುಗಡೆಮಾಡಿಕೊಂಡು ಹೋದನು. ಕಾರಾಗೃಹದಲ್ಲಿರುವಾಗ ಧರ್ಮದೇವನು ತನಗೆ ಸ್ವಲ್ಪ ಸಹಾಯಮಾಡಿದ್ದುದರಿಂದ ತಾನು ಹೋಗುವಾಗ ಕಯ್ಯಲ್ಲಿ ಹಾಕಿದ್ದ ಒಂದು ಒಳ್ಳೆಯ ವಜ್ರದ ಉಂಗುರವನ್ನು ತನ್ನ ಗುರುತಿಗಾಗಿ ಅವನಿಗೆ ಕೊಟ್ಟನು. ಲಂಚ ಕೊಟ್ಟು ಬಿಡುಗಡೆಮಾಡಿಕೊಳ್ಳುವುದಕ್ಕೆ ಬದಲಾಗಿ ಧರ್ಮದೇವನು ತನಗೆ ಬಿಡುಗಡೆಯಾದ ಮೇಲೆ ಜೀವನೋಪಾಯಕ್ಕಿರಲೆಂದು ಆ ಉಂಗುರವನ್ನು ಇಟ್ಟುಕೊಂಡಿದ್ದನು.

ಆ ಉಂಗುರವು ಬೆಲೆಯುಳ್ಳದ್ದೋ ?

ಅದರ ಬೆಲೆ ಸುಮಾರು ಐವತ್ತುಸಾವಿರ ವರಹಗಳು ಧರ್ಮದೇವನಂಥವರಿಗೆ ಅದು ದೊಡ್ಡ ಆಸ್ತಿಯಲ್ಲವೇ ?

ಆ ಉಂಗುರವನ್ನು ಧರ್ಮದೇವನು ತನ್ನ ಜೀವನೋಪಾಯಕ್ಕೆ ಇಟ್ಟುಕೊಂಡಿದ್ದನೆಂದು ತಾವು ಹೇಳುತ್ತಲಿದ್ದಿರಿ.

ಅಹುದು. ಅವನು ಸಾಯುವಾಗ ' ನನಗೆ ಐದುಜನ ಆಪ್ತರಿರುವರು , ನನ್ನ ಕಷ್ಟಕ್ಕಾಗಿಯೂ, ನಾನು ಸತ್ತುದಕ್ಕಾಗಿಯೂ, ಅವರು ವ್ಯಸನಪಡುತ್ತಲಿರುವರು ಅವರನ್ನು ವಿಚಾರಿಸಿ, ನನ್ನ ವಿಷಯದಲ್ಲಿ ಅವರೆಲ್ಲರೂ ನಿರ್ವಂಚಕರಾಗಿದ್ದರೆಂದು ತಮಗೆ ತಿಳಿದರೆ, ಆ ಉಂಗರದ ಬೆಲೆಯನ್ನು ಅವರಿಗೆ ಹಂಚಿಕೊಡಿರಿ ' ಎಂದು ಹೇಳಿ ನನ್ನಲ್ಲಿ ಕೊಟ್ಟನು.

ಆ ಐದು ಜನಗಳಾರೆಂದು ಅವನು ಹೇಳಿದನೋ ?

ಹೂಂ, ಹೇಳಿದ. " ಮೊದಲನೆಯವನು ಕದರ್ಥಕನು ; ಎರಡನೆಯವನು ನನ್ನ ಸಂಗಡ ಜಯಲಕ್ಷ್ಮಿಯಲ್ಲಿದ್ದ ದುರ್ಮತಿಯು ; ಇವನು ಸ್ವಲ್ಪ ಅಸೂಯಾಪರನಾದರೂ ಒಳ್ಳೆಯವನು. ಮೂರನೆಯವನು ನಾನು ಮದುವೆಯಾಗಬೇಕೆಂದಿದ್ದ ಯುವತಿಯ ಬಂಧು ವಿಷಯಲಂಪಟನೆಂಬುವನು ; ಇವನು ಆ ಯುವತಿಯನ್ನು ಮೋಹಿಸುತ್ತಲಿದ್ದರೂ, ನನ್ನನ್ನು ಅತಿಪ್ರೀತಿಯಿಂದ ಕಾಣುತ್ತಲಿದ್ದನು ನಾಲ್ಕನೆಯವಳು ನಾನು ಮದುವೆಯಾಗಬೇಕೆಂದಿದ್ದ ," ತಾಳು, ತಾಳು, ಅವಳ ಹೆಸರು ಮರೆತುಹೋಯಿತು.

ಲಲಿತಾಂಗಿಯಲ್ಲವೇ ಎಂದು ಕದರ್ಥಕನು ಕೇಳುತಲೆ, ಹಾ ! ಅಹುದು ಎಂದು ಸನ್ಯಾಸಿಯು ಸಂಕಟಪಟ್ಟು, ಕೂಡಲೇ ಸಮಾಧಾನವನ್ನು ತಾಳಿ, ' ನಾನು ಈಗ ಏನ ಹೇಳುತಲಿದ್ದೆ ' ?

ನಾಲ್ಕನೆಯವಳು ಲಲಿತಾಂಗಿ.

ಸರಿಸರಿ ಐದನೆಯವನು ಧರ್ಮದೇವನ ತಂದೆ ಭುಜಂಗಭೂಷಣನೆಂಬುವನು. ನಾನು ವಿಚಾರಿಸಿದುದರಲ್ಲಿ ಇವನು ಬಹಳ ದಿವಸಗಳ ಹಿಂದೆ ಸತ್ತುಹೋದನೆಂದು ತಿಳಿಯಿತು. ಅವನು ಹೇಗೆ ಸತ್ತನೆಂಬುದು ಗೊತ್ತಾಗಲಿಲ್ಲ.

ಹೇಗೆ ? ಹೊಟ್ಟೆಗಿಲ್ಲದೆ ಪ್ರಾಣವನ್ನು ಬಿಟ್ಟನು. ಇದನ್ನು ನಾನು ಚೆನ್ನಾಗಿ ಬಲ್ಲೆ.

ಮುದುಕನಿಗಾರೂ ಸಹಾಯಕರಿರಲಿಲ್ಲವೇ? ಮೇಲೆ ಹೇಳಿದ ಧರ್ಮದೇವನ ನಾಲ್ಕು ಜನ ಆಪ್ತಸ್ನೇಹಿತರು ಸುಮ್ಮನಿದ್ದರೆ?

ಅವನು ಸಾಯುವ ವರೆಗೆ ಲಲಿತಾಂಗಿಯು ಸಂಗಡಲೇ ಇದ್ದಳು. ಅವನ ಸಹಾಯಾರ್ಥವಾಗಿ ಧನಕೋಟಿಯು

ಅವನಾರು?

ಜಯಲಕ್ಷ್ಮಿಯ ಯಜಮಾನ

ಧನಕೋಟಿಯು ಏನ ಮಾಡಿದ?

ಒಂದು ಚೀಲದ ತುಂಬ ವರಹಗಳನ್ನು ತಂದಿಟ್ಟಿದ್ದನು. ಮುದುಕನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ಉಪಚಾರಮಾಡಬೇಕೆಂದು ಲಲಿತಾಂಗಿಯು ಎಷ್ಟೋ ಪ್ರಯತ್ನಪಟ್ಟರೂ, ಅವನು ಅದಕ್ಕೊಪ್ಪದೆ "ನಾನಿದ್ದ ಕಡೆಯಲ್ಲೇ ಇರುವೆನು; ಒಂದು ವೇಳೆ ನನ್ನ ಮಗನು ಬಿಡುಗಡೆಯಾಗಿ ಬಂದರೆ ಮೊದಲು ನನ್ನನ್ನು ನೋಡಲು ಇಲ್ಲಿಗೆ ಬರುವನು, ಆದುದರಿಂದ ನಾನು ಇಲ್ಲಿ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ" ಎಂದು ಹಟಹಿಡಿದು, ಕೆಲವು ಕಾಲ ಆಹಾರವನ್ನು ತೆಗೆದುಕೊಳ್ಳದೇ ಇದ್ದನು. ಆಗ ಲಲಿತಾಂಗಿಯು ನಿಮ್ಮ ಕುಮಾರರು ಬಂಧನಾಲಯದಿಂದ ಬರುವವರೆಗಾದರೂ ನೀವು ಬೀವಿಸಿರಬೇಕು, ಇಲ್ಲವಾದರೆ ಅವರು ಪ್ರಾಣವನ್ನಿಡರು ಎಂದು ಈ ಉಪಾಯಗಳಿಂದ ಅವನಿಗೆ ಸ್ವಲ್ಪಸ್ವಲ್ಪ ಆಹಾರವನ್ನು ಕೊಡುತ್ತಿದ್ದಳು. ಹೀಗೆ ಸುಮಾರು ಒಂದು ವರ್ಷವಿದ್ದು, ಮಗನು ಜೀವನೊಡನಿದ್ದಿದ್ದರೆ ಇಷ್ಟು ದಿವಸಗಳಲ್ಲಿ ಬರುತ್ತಲಿದ್ದನು; ಅವನು ಸತ್ತಿರಬೇಕು ಎಂದು ಕೊರಗುತ್ತ, ಲಲಿತಾಂಗಿಯ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು ಪ್ರಾಣಬಿಟ್ಟನು. ಅವಳನ್ನು ನೋಡಿಕೊಂಡು ಹೋಗಲು ಆಗಾಗ ವಿಷಯಲಂಪಟನು ಭುಜಂಗಭೂಷಣನ ಮನೆಗೆ ಬರುತ್ತಲಿದ್ದನು. ಭುಜಂಗಭೂಷಣನಿಗೆ ಅವನನ್ನು ಕಂಡರ ಆಗುತ್ತಿರಲಿಲ್ಲ.

ಅದು ಏಕೆ?

ಧರ್ಮದೇವನನ್ನು ಕೊಂದಾದರೂ ಅವನು ವರಿಸಿದ್ದ ಲಲಿತಾಂಗಿಯನ್ನು ತಾನು ಮದುವೆಯಾಗಬೇಕೆಂದು ವಿಷಯಲಂಪಟನಿಗೆ ಮನಸ್ಸಿದ್ದಿತು. ಇದು ಭುಜಂಗಭೂಷಣನಿಗೆ ಹೇಗೆಯೋ ತಿಳಿಯಿತು.

ಹಾಗಾದರೆ ಧರ್ಮದೇವನು ವಿಷಯಲಂಪಟನ ವಿಷಯದಲ್ಲಿ ಮೋಸಹೋಗಿದ್ದಂತೆ ತೋರುತ್ತದೆ.

ಅದಕ್ಕೆ ಸಂದೇಹವೇ ಇಲ್ಲ ಎಂದು ಕದರ್ಥಕನು ಹೇಳುತಲೆ, ತನ್ನ ಗಂಡನ ಸಂಗಡ ಆರೋ ಬಂದು ಮಾತನಾಡುತ್ತಲಿರುವರೆಂದು ತಿಳಿದು, ಮೇಲಿನಿಂದ ಅರ್ಧ ದೂರ ಇಳಿದು ಬಂದು, ಮೆಟ್ಟಲಿನ ಮೇಲೆ ಕುಳಿತಿದ್ದ ಕಳಾಕಾಂತೆಯು ದೊಡ್ಡವರ ಮಾತು ನಮಗೇಕೆ ಎಂದು ಗಂಡನಿಗೆ ಹೇಳಲು, ಅವನು ಅದು ಸರಿ ಎಂದು ಮುಂದೆ ಆವುದನ್ನೂ ಹೇಳದೆ ಸುಮ್ಮನಾದನು

ಆಗ ನಿರ್ಮಲಾನಂದನು ಉಂಗುರವನ್ನು ಹೊರಗೆ ತೆಗೆದು ತಳತಳನೆ ಮಿನುಗುತ್ತಲಿರುವ ವಜ್ರವನ್ನು ಕದರ್ಥಕನಿಗೆ ಕಾಣುವಂತೆ ನೋಡುತ್ತ, ಧರ್ಮದೇವನು ತನಗೆ ಆಪ್ತರಾಗಿಯೂ ಸ್ನೇಹಿತರಾಗಿಯೂ ಇರುವವರಿಗೆ ಇದರ ಬೆಲೆಯನ್ನು ಹಂಚಿ ಕೊಡುವಂತೆ ಕೊಟ್ಟನು. ಸಮಾಚಾರವು ಸರಿಯಾಗಿ ತಿಳಿದರೆ ಕ್ರಮವಾಗಿ ವಿನಿಯೋಗಿಸಬಹುದು , ಇಲ್ಲವಾದರೆ ಇದರ ದುಡ್ಡನ್ನು ಯತ್ನವಿಲ್ಲದೆ ಆವುದಾದರೂ ಒಂದು ಧರ್ಮ ಕೆಲಸಕ್ಕೆ ಕೊಡಬೇಕಾಗುವುದು ಎಂದು ಹೇಳಿ ಅಲ್ಲಿಂದ ಹೊರಡುವ ಪ್ರಯತ್ನ ಮಾಡಿದನು.

ಸನ್ಯಾಸಿಯು ಹೊರಟು ಹೋದರೆ ಅವನಿಗಾಗಿ ಮಾಡಿದ ಫಲಾಹಾರವು ವ್ಯರ್ಥವಾಗುವುದಲ್ಲದೆ, ಉಂಗುರವನ್ನು ಮಾರಿ ತನ್ನ ಪಾಲಿಗೆ ಬರುವ ದುಡ್ಡೂ ಹೋಗುವುದೆಂದು ಯೋಚಿಸಿ, ಕದರ್ಥಕನು ಹೆಂಡತಿಯನ್ನು ನೋಡಿ, ಇದೇ ಉಂಗುರ ನೋಡು, ಬಾ. ಇದು ಅಮೌಲ್ಯವಾದ ವಜ್ರ ಎಂದನು. ಆಗ ಅವಳು ಇಳಿದ ಬಂದು ಆವ ವಜ್ರವೆಂದು ಕೇಳಿದುದಕೆ, ಕದರ್ಥಕನು ನಾವು ಮಾತನಾಡುತ್ತಲಿದ್ದುದನ್ನು ನೀನು ಪೂರ್ತಿಯಾಗಿ ಕೇಳಲಿಲ್ಲವೆಂದು ತೋರುತ್ತಲಿದೆ. ನನ್ನ ಸ್ನೇಹಿತ ಧರ್ಮದೇವನೆಂಬುವನು ತಾನು ಸಾಯುವಾಗ ತನ್ನ ಸ್ನೇಹಿತರಿಗೆ ಇದರ ಬೆಲೆಯನ್ನು ಭಾಗ ಮಾಡಿಕೊಡುವಂತೆ ಈ ಸನ್ಯಾಸಿಯಲ್ಲಿ ಕೊಟ್ಟ ವಜ್ರದುಂಗುರ. ಇದರಲ್ಲಿ ಐದರಲ್ಲಿ ಒಂದು ಭಾಗ ನಮಗೆ ಬರುತ್ತದೆ ಎಂದನು.

ಇದರ ಬೆಲೆಯೆಷ್ಟು? ಎಂದು ಕಳಾಕಾಂತೆಯು ಕೇಳಿದುದಕೆ, ಆನಂದನು

ಐವತ್ತುಸಾವಿರ ವರಹಗಳು, ಇದರಲ್ಲಿ ಐದರಲ್ಲಿ ಒಂದು ಭಾಗವಲ್ಲದೆ ಸತ್ತ ಭುಜಂಗ ಭೂಷಣನ ಆಸ್ತಿಯಲ್ಲಿಯೂ ನಾಲ್ಕರಲ್ಲಿ ಒಂದು ಭಾಗವು ನಿನಗೆ ಸಿಕ್ಕುವುದು ಎಂದನು.

ಆಗ ಕಳಾಕಾಂತೆಯು ಹೇಗೆ ನಾಲ್ಕು ಭಾಗ? ಎಂದು ಆನಂದನನ್ನು ಕೇಳಲು, ಅವನು ಧರ್ಮದೇವನಿಗೆ ಆಪ್ತರಾಗಿದ್ದ ಐವರಲ್ಲಿ ಒಬ್ಬನು ಸತ್ತುಹೋದುದರಿಂದ, ಉಳಿದವರು ನಾಲ್ವರೇ ಎಂದನು.

ಧರ್ಮದೇವನ ನಾಶವನ್ನು ಆಶಿಸಿ ಅದಕ್ಕನುಕೂಲವಾದ ಕೆಲಸಗಳನ್ನು ಮಾಡಿದ ದುರ್ಮತಿವಿಷಯಲಂಪಟರು ಆಪ್ತರೋ? ಹಗೆಗಳೋ?

ಅಮ್ಮಾ, ಹಗೆಗಳಿಗೆ ನಾನು ಯಾವ ಭಾಗವನ್ನೂ ಕೊಡಲಾರೆ ಎಂದು ಆನಂದನು ಹೇಳುತಲೆ, ಕದರ್ಥಕನೂ ಕಳಾಕಾಂತೆಯೂ ಏಕಾಂತದಲ್ಲಿ ಕೆಲವು ಮಾತುಗಳನ್ನಾಡಿಕೊಂಡು ಆನಂದನಿಗೆ ನಾವು ನಿಜವನ್ನು ಹೇಳಿದರೆ ಲಲಿತಾಂಗಿಗೆ ಕೂಡ ಇದರಲ್ಲಿ ಭಾಗವು ದೊರೆಯಲಾರದು, ಉಂಗುರವು ನಮ್ಮದೇ ಆಗುವುದು ಎಂದು ಯೋಚಿಸಿದರು. ಆದರೆ, ಕಳಾಕಾಂತೆಯು ದುರ್ಮತಿವಿಷಯಲಂಪಟರು ಈಗ ಹಣಗಾರರಾಗಿ ದೊಡ್ಡ ಮನುಷ್ಯರೆಂದೆಣಿಸಿಕೊಂಡಿರುವರು, ಅವರ ಸಮಾಚಾರವನ್ನು ನನಗೆ ಗುರುತು ಪರಿಚಯವಾವುದೂ ಇಲ್ಲದ ಈ ಸನ್ಯಾಸಿಗೆ ತಿಳಿಸುವುದು ಅಪಾಯ, ಇದರ ಮೇಲೆ ನಿನ್ನ ಇಷ್ಟ ಎಂದು ಹೇಳಿ ಮಹಡಿಯನ್ನು ಸೇರಿದಳು

ಸನ್ಯಾಸಿಯು ಕದರ್ಥಕನನ್ನು ನೋಡಿ ನನಗಾಗಿ ಫಲಾಹಾರವನ್ನು ಮಾಡಿಸಿದೆಯಲ್ಲಾ, ಅದನ್ನು ಕೊಟ್ಟರೆ ಬಾಯಲ್ಲಿ ಹಾಕಿಕೊಂಡು ಮುಂದಕ್ಕೆ ಹೊರಡುವೆನು ಎಂದನು.

ಸ್ವಾಮೀ! ತಾವು ಇರಿ. ತಾವು ಫಲಾಹಾರ ಮಾಡುವಾಗ ಇರತಕ್ಕ ಸಂಗತಿಯನ್ನು ನಿಜವಾಗಿ ತಮಗೆ ತಿಳಿಸುತ್ತೇನೆ ಎಂದು ಫಲಾಹಾರದ ಸಾಮಾನುಗಳನ್ನು ತಂದಿಟ್ಟು, ಸ್ವಾಮೀ! ತಮ್ಮಪ್ಪಣೆಯಾದರೆ ನಾವು ಮಾತನಾಡುತ್ತಲಿರುವಾಗ ಆರೂ ಬಂದು ನಮ್ಮನ್ನು ತೊಂದರೆ ಮಾಡದಂತೆಯೂ, ನಾವು ಆಡುವ ಮಾತನ್ನು ಆರೂ ಕೇಳದಂತೆಯೂ ಬಾಗಿಲನ್ನೂ ಕಿಟಕಿಗಳನ್ನೂ ಮುಚ್ಚುವೆನು ಎಂದನು ನಿರ್ಮಲಾನಂದನು ಅದಕ್ಕೆ ಒಪ್ಪಿ ಕುರ್ಚಿಯನ್ನೂ ಫಲಾಹಾರದ ತಟ್ಟೆಯನ್ನೂ ಸುಮಾರು ಕತ್ತಲಾ

ಗಿದ್ದ ಒಂದು ಮೂಲೆಗೆ ಕರೆದುಕೊಂಡು ಹೋಗಿ ಅಲ್ಲಿ ಕುಳಿತನು. ಕದರ್ಥಕನ್ನು ಸ್ವಲ್ಪದೂರದಲ್ಲಿ ಕುಳಿತು ಸ್ವಾಮೀ! ಪ್ರಾರಂಭಿಸಲೋ, ಎಂದನು.

ಅಪ್ಪಾ! ನಿನಗಿಷ್ಟವಾದರೆ ಹೇಳು, ಇಲ್ಲವಾದರೆ ಬೇಡ.

ನಾನೇನೋ ಇದ್ದ ಸಂಗತಿಯನ್ನು ತಮಗೆ ಹೇಳಬೇಕೆಂದು ನಿಶ್ಚಯಿಸಿದ್ದೇನೆ ಆದರೆ, ತಾವು ನನಗೆ ಒಂದು ಮಾತನ್ನು ಕೊಡಬೇಕು ಅದೇನು?

ನಾನು ಈಗ ತಮಗೆ ತಿಳಿಸುವ ಸಮಾಚಾರಗಳನ್ನು ನನ್ನಿಂದ ತಾವು ತಿಳಿದದಾಗಿ ಆರಿಗೂ ಹೇಳಕೂಡದು

ಅಪ್ಪಾ! ನಾನು ಈ ದೇಶದವನಲ್ಲ, ಮೇಲೂ ಸನ್ಯಾಸಿ ಈವತ್ತು ಇಲ್ಲಿದ್ದರೆ ನಾಳೆ ಮತ್ತೊಂದು ಕಡೆ ಇರುವೆನು. ಈ ವಿಷಯಗಳನ್ನು ನಾನು ಆರಿಗೆ ಹೇಳಬೇಕಾಗಿಡ? ಧರ್ಮದೇವನು ನಾಯುವಾಗ ಶರಣಾಗತನಾಗಿ ಈ ಉಂಗುರವನ್ನು ನನ್ನಲ್ಲಿ ಕೊಟ್ಟು ಅದರ ವಿನಿಯೋಗವನ್ನು ಹೇಳಿದನಾದುದರಿಂದ ನಾನಿಲ್ಲಿಗೆ ಬಂದೆನು ಇಲ್ಲದಿದ್ದರೆ ನನ್ನ ತಪಸ್ಸಿನಲ್ಲಿಯೂ ಯಾತ್ರೆಯಲ್ಲಿಯೂ ಕಾಲವನ್ನು ಕಳೆಯುತ್ತಲಿರುತ್ತಿದ್ದೆನು.

ಬಳಿಕ ಕದರ್ಥಕನಿಗೆ ಧೈರ್ಯವುಂಟಾಗಿ, ನಮ್ಮ ವಾರಕರಿಗೆ ನಾವು ಮೊದಲೇ ತಿಳಿಸಿದ್ದಂತೆ ಸಂಗತಿಯನ್ನೆಲ್ಲಾ ಮೊದಲಿನಿಂದ ಕೊನೆಯ ವರೆಗೂ ಸ್ವಲ್ಪವೂ ತಪ್ಪದೆ ಹೇಳಿಬಿಟ್ಟನು. ಇದನ್ನೆಲ್ಲಾ ಕೇಳಿದ ಬಳಿಕ ದುರ್ಮತಿಯೂ ವಿಷಯಲಂಪಟನೂ ಸರ್ಕಾರಕ್ಕೆ ಹೆಸರಿಲ್ಲದ ಅರ್ಜಿಯನ್ನು ಬರೆದಾಗ ನೀನು ಏತಕ್ಕೆ ಅವರಿಗೆ ಬೇಡವೆಂದು ಹೇಳಲಿಲ್ಲ? ಎಂದು ಸನ್ಯಾಸಿಯು ಕೇಳಿದನು.

ಸ್ವಾಮೀ! ಅವರು ನನಗೆ ಮದ್ಯವನ್ನು ಕುಡಿಸಿದುದರಿಂದ ನಾನು ಮತ್ತನಾಗಿ ಬಿದ್ದಿದ್ದೆನು ಆದರೂ ಆ ಸ್ಥಿತಿಯಲ್ಲಿ ನಾನೆಷ್ಟು ಹೇಳಬಹುದಾಗಿದ್ದಿತೋ ಅಷ್ಟನ್ನು ಹೇಳಿದೆ. ವಿನೋದಕ್ಕಾಗಿ ಮಾಡಿದುದೇ ಹೊರತು ಮತ್ತೆ ಬೇರೆ ಅಲ್ಲವೆಂದು ಅವರು ನನ್ನನ್ನು ಸಮಾಧಾನಪಡಿಸಿದರು.

ಮಾರನೇ ದಿನ ಧರ್ಮದೇವನನ್ನು ಹಿಡಿಯುವಾಗ ನಿನಗೆ ಜ್ಞಾನ ಸರಿಯಾಗಿದ್ದಿರಬೇಕಲ್ಲವೇ? ಆಗ ಏತಕ್ಕೆ ಅವನಿಗೆ ಈ ವರ್ತಮಾನವನ್ನು ನೀನು ಹೇಳಲಿಲ್ಲ?

ನಾನು ಹೇಳಬೇಕೆಂದು ಸಮೀಪಕ್ಕೆ ಹೊರಟೆನು, ಆಗ ದುರ್ಮತಿಯು ಬಂದು

ಒಂದು ವೇಳೆ ಅವನು ಏಲಾದ್ವೀಪಕ್ಕೆ ಹೋಗಿದ್ದುದು ನಿಜವಾಗಿದ್ದರೆ, ನೀನು ಅವನಿಗೆ ಆವ ಸಹಾಯಮಾಡಿದರೂ ನಿನಗೆ ತೊಂದರೆ ಬರುವುದು ಎಂದು ಹೇಳಿ ನನ್ನನ್ನು ಹೆದರಿಸಿ ಬಿಟ್ಟನು ನನಗೆ ಗಾಬರಿಯಾಗಿ ಸುಮ್ಮನಿದ್ದುಬಿಟ್ಟೆನು.

ಧನಕೋಟಿಯು ಮುದುಕನ ಜೀವನಾರ್ಥವಾಗಿ ಹಣ ಕೊಟ್ಟುದು ನಿಜವೋ?

ನಿಜ ಭುಜಂಗಭೂಷಣನು ಸತ್ತಾಗ ಲಲಿತಾಂಗಿಯು ಅವನ ಸಾಲವನ್ನೆಲ್ಲಾ ತೀರಿಸಿ ಮಿಕ್ಕಿದ್ದುದನ್ನು ಅವನ ಅಪರಕಾರ್ಯಕ್ಕೆ ಉಪಯೋಗಿಸಿ ಹಣದ ಚೀಲವನ್ನು ಬಿಸುಟಿದ್ದಳು ನಾನು ಅದನ್ನು ತಗೆದು ಇಟ್ಟಿದ್ದೇನೆ ಅದೇ ಇದು ಎಂದು ತನ್ನ ಪೆಟ್ಟಿಗೆಯಲ್ಲಿದ್ದ ಒಂದು ಹಳೆಯ ಪಟ್ಟೆಚೀಲವನ್ನು ತಂದು ಸನ್ಯಾಸಿಯ ಮುಂದೆ ಇಟ್ಟನು.

ಈ ಚೀಲದ ತುಂಬ ವರಹಗಳನ್ನು ಕೊಡಬೇಕಾಗಿದ್ದರೆ ಧನಕೋಟಿಯು ತುಂಬ ಹಣಗಾರನಾಗಿಯೂ ಬಹು ಧರ್ಮಿಷ್ಟನಾಗಿಯೂ ಇರಬೇಕು

ಅಹುದು, ಅವನು ಧನವಂತನಾಗಿಯೇ ಇದ್ದನು; ಈಚಿಗೆ ನನ್ನಂತೆ ಅವನೂ ನಷ್ಟಪಟ್ಟು ದಿವಾಳಿಯಾಗುವುದರಲ್ಲಿದ್ದಾನೆ

ಅದು ಹೇಗೆ?

ಅವನ ಹಡಗುಗಳಲ್ಲಿ ಕೆಲವು ಮುಳುಗಿ ಹೋದುವು, ಅವನು ಹಣವಿಟ್ಟಿದ್ದ ಧನಾಗಾರಗಳು ಬರಿದಾಗಿ ಹೋದುವು ಧರ್ಮದೇವನು ನಡಿಸುತ್ತಲಿದ್ದ ಜಯಲಕ್ಷ್ಮಿಯೊಂದೇ ಈಗ ಅವನಿಗೆ ನಿಂತಿರುವುದು ಅದರಲ್ಲಿ ಬರುವ ಸರಕಿನ ಆಧಾರದ ಮೇಲೆ ಧನಕೋಟಿಯು ಕೆಲವು ಸಾಲಗಳನ್ನು ಮಾಡಿದ್ದಾನೆ. ಅದು ಇಷ್ಟು ದಿವಸಗಳಿಗೆ ಹಿಂತಿರುಗಿ ಬರಬೇಕಾಗಿದ್ದಿತು, ಆವ ಕಾರಣದಿಂದಲೋ ಇನ್ನೂ ಬರಲಿಲ್ಲ. ಒಂದು ವೇಳೆ ಅದು ಮುಳುಗಿಹೋಗಿದ್ದರೆ ಅವನು ಖಂಡಿತವಾಗಿಯೂ ದಿವಾಳಿಯಾಗುವನು

ಅವನಿಗೆ ಹೆಂಡಿರು ಮಕ್ಕಳುಂಟೋ?

ಅವನಿಗೆ ಒಬ್ಬ ಮಗನೂ ಒಬ್ಬ ಮಗಳೂ ಇರುವರು, ಅವರಿಬ್ಬರೂ ದೊಡ್ಡವರಾಗಿದ್ದಾರೆ. ಮಗಳಿಗೆ ಮದುವೆಮಾಡಬೇಕೆಂದಿದ್ದನು; ಅನೇಕ ನಷ್ಟಗಳು ಸಂಭವಿಸಿದ್ದುದರಿಂದ ಸದ್ಯಕ್ಕೆ ಮದುವೆಯು ನಿಂತುಹೋಯಿತು. ಮಗನು ಜೀವನಾರ್ಥವಾಗಿ ಸೈನ್ಯದಲ್ಲಿ ಸೇರಿಕೊಂಡನು. ಅವನ ಹೆಂಡಿತಿಯು ಚೆನ್ನಾಗಿ ಬದುಕಿ ಬಾಳಿದವರಿಗೆ

ಈ ಗತಿ ಒಂದಿತಲ್ಲಾ ಎಂದು ಸರ್ವದಾ ಅಳುತ್ತಲಿರುವಳು. ಈ ಹೆಂಡಿರು ಮಕ್ಕಳಿಗಾಗಿ ಧನಕೋಟಿಯು ಜೀವದೊಡನಿದ್ದಾನೆ, ಇಲ್ಲದಿದ್ದರೆ ಅವನು ಆಗಲೇ ಆತ್ಮಹತ್ಯವನ್ನು ಮಾಡಿಕೊಳ್ಳುತ್ತಲಿದ್ದನು

ಪಾಪ, ಬಹಳ ಕಷ್ಟ

ದೇವರು ಒಳ್ಳೆಯವರಿಗೆ ಅನುಕೂಲಪಡಿಸುವುದಿಲ್ಲವೆಂಬುದಕ್ಕೆ ಇದೊಂದು ದೃಷ್ಟಾಂತ ದುರ್ಮಾರ್ಗದಲ್ಲಿ ಪ್ರವೃತ್ತಿಸಿದ ದುರ್ಮತಿ ವಿಷಯಲಂಪಟರು ಧನವಂತ ರಾಗಿ ದೊಡ್ಡ ಮನುಷ್ಯರಂತೆ ಇರುವರು ಅವ ಕೆಟ್ಟಕೆಲಸಕ್ಕೂ ಹೋಗದ ಧನ ಕೋಟಿಯು, ಇದ್ದುಬದ್ದುದನ್ನೆಲ್ಲಾ ಕಳೆದುಕೊಂಡು ನನ್ನಂತೆ ದಿವಾಳಿಯಾಗುವುದ ರಲ್ಲಿದ್ದಾನೆ

ಹಾಗಾದರೆ ದುರ್ಮತಿ ವಿಷಯಲಂಪಟರಿಬ್ಬರೂ ಒಳ್ಳೇ ಸ್ಥಿತಿಯಲ್ಲಿರುವರೋ ?

ಅಹುದು.

ದುರ್ಮತಿ ಈಗೇನಾಗಿರುವನು ?

ಅವನ ಕೆಟ್ಟ ಚಾಳಿಯನ್ನು ತಿಳಿಯದೆ ಧನಕೋಟಿಯು ಅವನ ವಿಷಯವಾಗಿ ಅನ್ಯದೇಶದ ಒಬ್ಬ ದೊಡ್ಡ ಧನಾಗಾರಪತಿಗೆ ಒಂದು ಸಿಪಾರಸ್ಸು ಕಾಗದವನ್ನು ಕೊಟ್ಟನು ದುರ್ಮತಿಯು ಅಲ್ಲಿಗೆ ಹೋಗಿ ಹೇಗೋ ಅಷ್ಟು ಹಣವನ್ನು ಕೂಡಿಸಿ ಕೊಂಡು ಅವನ ಒಬ್ಬಳೇ ಮಗಳನ್ನು ಮದುವೆಯಾಗಿ ಅವನ ಆಸ್ತಿಯನ್ನೆಲ್ಲಾ ವಶ ಮಾಡಿಕೊಂಡು ಈಗ ಅಮರಪುರದಲ್ಲಿ ದೊಡ್ಡ ಧನಾಗಾರಪತಿಯಾಗಿ ಕುದುರೆ, ಬಂಡಿ, ಆಳು, ಕಾಳುಗಳನ್ನಿಟ್ಟುಕೊಂಡು ನೆಮ್ಮದಿಯಾಗಿರುತ್ತಲಿದ್ದಾನೆ

ನೆಮ್ಮದಿಯಾಗಿದಾನೆಂದು ನೀನು ಹೇಗೆ ಬಲ್ಲೆ ?

ನೆಮ್ಮದಿಯೋ ಇಲ್ಲವೋ ದೇವರೇ ಬಲ್ಲ. ಅನ್ಯಾಯಮಾಡಿದವರು ಬಹುಶಃ ನೆಮ್ಮದಿಯಾಗಿರಲಾರರು. ಅವರೆ ದುಡ್ಡಿರುವ ಹೆಮ್ಮೆಯಿಂದ ಅವರು ಅದನ್ನು ಲಕ್ಷ್ಯ ಮಾಡರು.

ಅದೇನೋ ನಿಜ ವಿಷಯಲಂಪಟನ ಸಮಾಚಾರವೇನು ?

ಅವನು ಚಕ್ರವರ್ತಿಯ ಸೈನ್ಯವನ್ನು ಸೇರಿ, ಸೇನಾಪತಿಗೆ ಮುಖ್ಯಸಹಾಯನಾ ಗಿದ್ದು ಚಕ್ರವರ್ತಿಯು ಸೋಲುವ ಸಂದರ್ಭಬಂದಾಗ ಹಗೆಗಳಿಗೆ ತನ್ನ ಸೇನಾಪತಿ

ಯನ್ನು ಮೋಸದಿಂದ ಹಿಡಿದು ಕೊಟ್ಟು ಈ ದಿನ ರಾಜನಿಂದ ಕೆಲವು ಧನವನ್ನೂ ಅಧಿಕಾರವನ್ನೂ ಸಂಪಾದಿಸಿದನು. ಅನಂತರ, ಸ್ವದೇಶವಾದ ಕಳಿಂಗದೇಶದ ದೊರೆಯು ಮೇಲೆ ಅಮರದೇಶದ ರಾಜನು ಯುದ್ಧಮಾಡಬೇಕಾಗಿ ಬಂದಾಗ ಆ ದೇಶದ ಜನಗಳ ಅಭಿಪ್ರಾಯವನ್ನು ತಿಳಿದು ಬರಲು ಅವನನ್ನು ಅಲ್ಲಿಗೆ ಕಳುಹಿಸಿದರು ಅವನು ಅಲ್ಲಿಗೆ ಹೋಗಿ ದುರ್ಮತಿಯನ್ನು ಕಂಡು ಅವನಲ್ಲಿ ಸ್ನೇಹಬೆಳಸಿ ಅವನ ಮೂಲಕ ಸ್ವದೇಶದ ಸಮಾಚಾರಗಳನ್ನೆಲ್ಲಾ ತಿಳಿದು, ಅಲ್ಲಿಂದ ಬಂದು ಅಮರದೇಶದವರಿಗೆ ಸಹಾಯವಾಗಿ ತನ್ನ ದೇಶದವರ ಮೇಲೆ ಯುದ್ಧವನ್ನು ಮಾಡಿ, ಅವರನ್ನು ಮೋಸದಿಂದ ಜಯಿಸಿ ಈ ದೇಶದಲ್ಲಿ ದೊಡ್ಡ ಕೆಲಸವನ್ನೂ ಸಂಬಳವನ್ನೂ ಸಂಪಾದಿಸಿದನ

ಅದೃಷ್ಟ. ಅದೃಷ್ಟ.

ಇಷ್ಟೇ ಅಲ್ಲ ಅವನ ಚರಿತ್ರವಿನ್ನೂ ಇದೆ ಯವನದೇಶದ ದೊರೆಯಾದ ಕ್ಷಿತೀಂದ್ರನು ತನ್ನ ಶ್ರೇಷ್ಠಾಧಿಪನ ಮೇಲೆ ಯುದ್ಧಮಾಡಿದಾಗ, ಅಮರದೇಶದ ರಾಜನ ಅಪ್ಪಣೆಯನ್ನು ಪಡೆದು ಆ ದೊರೆಯಲ್ಲಿ ಸೇರಿ ಅವನ ಅಭಿಮಾನವನ್ನು ಸಂಪಾದಿಸಿ ಕೊನೆಗೆ ಆವನ ಸೈನ್ಯಕ್ಕೆ ಅಧಿಪತಿಯಾದನು ದೊರೆಯು ಯುದ್ಧದಲ್ಲಿ ದೈವಾಧೀನನಾದಾಗ ತನಗೆ ವಿಶೇಷದ್ರವ್ಯವನ್ನು ಕೊಟ್ಟನೆಂದು ಹೇಳಿಕೊಂಡು ಅಮರಪುರದಲ್ಲಿ ಒಂದು ದೊಡ್ಡ ಮನೆಯನ್ನು ಕಟ್ಟಿಕೊಂಡು, ಅಮರದೇಶದ ದೊರೆಯು ಇವನ ಸಾಹಸಗಳಿಗೆ ಮೆಚ್ಚಿ ಮರ್ಯಾದಾರ್ಥವಾಗಿ ಕೊಟ್ಟ "ಶ್ರೀಮಂತ ರಾಜಸಿಂಹ" ಎಂಬ ಹೆಸರಿನಿಂದ ಮೆರೆಯುತ್ತಲಿರುವನು

ಲಲಿತಾಂಗಿಯು ಅದೃಶ್ಯಳಾದಳೆಂದು ಕೇಳಿದೆ, ಅದು ಹೇಗೆ?

ಅಹುದು. ಅವಳು ಸಂಜೆಯ ಸೂರ್ಯನಂತೆ ಅದೃಶ್ಯಳಾದಳು

ಹಾಗೆಂದರೆ ನನಗೆ ಗೊತ್ತಾಗಲಿಲ್ಲ

ಅಸ್ತಮಯಕಾಲದಲ್ಲಿ ಸೂರ್ಯನು ಅದೃಶ್ಯನಾಗಿ ಪುನಃ ಮಾರನೆಯ ದಿನ ತಳತಳಿಸುತ್ತ ಉದಯಿಸುವಂತೆ ಅವಳು ಕೆಲವು ಕಾಲ ಅದೃಶ್ಯಳಾಗಿದ್ದು ಈಗ ಹೆಚ್ಚಾದ ಕಾಂತಿಯಿಂದ ಕೂಡಿರುವಳು.

ಅದು ಹೇಗೆ?

ಧರ್ಮದೇವನನ್ನು ಸೆರೆ ಹಿಡಿದ ಮೇಲೆ ವಿಷಯಲಂಪಟನು ಆವಾಗಲೂ ಅವಳ

ಜತೆಯಲ್ಲಿಯೇ ಇರುತ್ತಿದ್ದನು. ಭುಜಂಗಭೂಷಣನಿರುವ ವರೆಗೂ ಅವಳು ಅವನ ಶುಶ್ರೂಷೆಯಲ್ಲೇ ಇರುತ್ತಿದ್ದಳು. ಅವನು ಒದುಕಿರುವ ವರೆಗೂ ವಿಷಯಲಂಪಟನು ಮದುವೆಯ ಪ್ರಸ್ತಾಪವನ್ನೇ ಮಾಡಲಿಲ್ಲ ಅವನು ಸತ್ತ ಮೇಲೆ, ವಿಷಯಲಂಪಟನು ಮದುವೆಯ ಪ್ರಸ್ತಾಪ ಮಾಡಲು, ಇನ್ನಾರುತಿಂಗಳೊಳಗಾಗಿ ಧರ್ಮದೇವನು ಬರದೆ ಇದ್ದರೆ ಆ ಮೇಲೆ ನೋಡೋಣ ಎಂದು ಅವಳು ಹೇಳಿದಳು

ಹಾಗಾದರೆ, ಧರ್ಮದೇವನಿಗಾಗಿ ಅವಳು ಹದಿನೆಂಟು ತಿಂಗಳು ಕಾದಿದ್ದ ಹಾಗಾಯಿತು ಎಂದು ಗಟ್ಟಿಯಾಗಿ ಹೇಳಿ, ಮನಸ್ಸಿನಲ್ಲಿ ಅಸ್ಥಿರಬುದ್ಧಿಯೇ, ನಿನ್ನ ಹೆಸರು ಹೆಂಗಸಲ್ಲವೇ ಎಂದುಕೊಂಡನು.

ಹದಿನೆಂಟು ತಿಂಗಳಾದ ಮೇಲೆ ವಿಷಯಲಂಪಟನು ಲಲಿತಾಂಗಿಗೆ ಇಷ್ಟವಿಲ್ಲದಿದ್ದರೂ ಅವಳನ್ನು ಮದುವೆ ಮಾಡಿಕೊಂಡನು. ಮದುವೆ ಮುಗಿದು ಅವಳು ಧಾರೆಯ ಮಂಟಪದಿಂದ ಬರುತ್ತಿರುವಾಗ ಮೂರ್ಛಿತಳಾಗಿ ಕೆಳಗೆ ಬಿದ್ದಳು

ಆಮೇಲೇನಾಯಿತು ?

ಕೆಲವು ಕಾಲಾನಂತರ ವಿಷಯಲಂಪಟನು ತನ್ನ ಕಳಿಂಗದೇಶದವರ ಮೇಲೆ ಯುದ್ಧಕ್ಕೆ ಹೋದಾಗ, ಮಗನಿಗೆ ವಿದ್ಯಾಭ್ಯಾಸಮಾಡಿಸಲೋಸುಗ ಹೆಂಡಿತಿಯನ್ನು ಅಮರದೇಶದಲ್ಲಿ ಬಿಟ್ಟು ಹೋದನು.

ಮಗನಿಗೇ ! ಎಂದು ಸನ್ಯಾಸಿಯು ಬೆಚ್ಚಿಬಿದ್ದನು

ಅಹುದು, ಮಗನಿಗೆ ವಿದ್ಯೆಯನ್ನು ಕಲಿಸಲು ಬಿಟ್ಟು ಹೋದನು.

ಧರ್ಮದೇವನು ಹೇಳಿದುದರಲ್ಲಿ ಏನೂ ಅರಿಯದ ಬೆಸ್ತರ ಹುಡುಗಿ ಎಂದು ನಾನು ತಿಳಿದಿದ್ದೆನು ; ಅವಳು ಮಗನಿಗೆ ಏನು ವಿದ್ಯವನ್ನು ಕಲಿಸಬಲ್ಲಳು ?

ಅವಳ ಸಮಾಚಾರ ಧರ್ಮದೇವನಿಗೆ ಚೆನ್ನಾಗಿ ಗೊತ್ತಿರಲಿಲ್ಲವೆಂದು ತೋರುತ್ತದೆ. ಅವಳು ರಾಜಮಹಿಷಿಯಾಗುವುದಕ್ಕೆ ಅರ್ಹಳಾಗಿದ್ದಳು. ವಿಷಯಲಂಪಟನಿಗೆ ದ್ರವ್ಯಾನುಕೂಲವೂ ಪದವಿಯೂ ಹೆಚ್ಚಾದ ಹಾಗೆಲ್ಲ ಅವಳೂ ಸ್ವಬುದ್ಧಿಯಿಂದ ಅನೇಕ ವಿದ್ಯೆಗಳನ್ನು ಕಲಿತು ಈಗ ತನ್ನ ಸಮಾನರಾರೂ ಇಲ್ಲವೆಂದೆನಿಸಿಕೊಂಡು ಇರುತ್ತಾಳೆ. ಇಷ್ಟಾದರೂ—

ಇಷ್ಟಾದರೂ ಏನು ?

ಅವಳಿಗೆ ಸುಖವಿಲ್ಲವೆಂದು ತೋರುತ್ತದೆ.

ಅದು ಹೇಗೆ?

ಒಂದಾನೊಂದು ವೇಳೆ ನಾನು ನಿರ್ಗತಿಕನಾಗಿ ಪೂರ್ವಸ್ನೇಹಿತರಲ್ಲಿ ಹೋಗಿ ಏನಾದರೂ ಸ್ವಲ್ಪ ಸಹಾಯವನ್ನು ಕೇಳೋಣವೆಂದು ದುರ್ಮತಿಯ ಬಳಿಗೆ ಹೋದಾಗ ಅವನು ನೋಡಲು ಅನುಕೂಲವಿಲ್ಲವೆಂದು ನನ್ನನ್ನು ಹಿಂದಕ್ಕೆ ಕಳುಹಿಸಿದನು. ಬಳಿಕ ವಿಷಯಲಂಪಟನ ಬಳಿಗೆ ಹೋದೆನು. ಅವನು ನನಗೆ ಕೊಟ್ಟು ಬರುವಂತೆ ಆಳಿನ ಕೈಯಲ್ಲಿ ಒಂದು ನೂರು ರೂಪಾಯಿಯನ್ನು ಕಳುಹಿಸಿದನು

ಹಾಗಾದರೆ ಅವರಿಬ್ಬರೂ ನಿನ್ನನ್ನು ನೋಡಲೇ ಇಲ್ಲವೇ?

ಇಲ್ಲ ಆದರೆ ಶ್ರೀಮತೀ ರಾಜಾಬಾಯಿ ಎಂದು ಹೆಸರಿಟ್ಟುಕೊಂಡಿರುವ ಲಲಿತಾಂಗಿಯು ಮಾತ್ರ ನನ್ನನ್ನು ನೋಡಿ ನಾನು ಬಾಗಿಲ ಸಮೀಪಕ್ಕೆ ಸರಿಯಾಗಿ ಬಂದಾಗ ಐವತ್ತು ವರಹಗಳನ್ನು ಒಂದು ಚೀಲದಲ್ಲಿ ಗಂಟುಕಟ್ಟಿ, ಅದನ್ನು ನನ್ನ ಕಾಲಿನ ಮುಂದೆ ಬೀಳುವಂತೆ ಮಹಡಿ ಕಿಟಿಕಿಯಿಂದ ಕೆಳಕ್ಕೆ ಬಿಸುಟಳು ಇದನ್ನಾರು ಬಿಸುಟರೆಂದು ನಾನು ತಲೆಯೆತ್ತಿ ನೋಡಲು ಅವಳ ವ್ಯಸನಾಕ್ರಾಂತವಾದ ಮುಖವು ಕಂಡಿತು. ಜನಗಳಿಗೆ ಅವಳು ಸುಖವಾಗಿರುವಂತೆ ತೋರಿದರೂ ಅವಳಿಗೆ ಸುಖವಿಲ್ಲವೆಂದು ನನಗೆ ತೋರುತ್ತದೆ

ನೀನು ಹೇಳುವುದನ್ನು ನೋಡಿದರೆ ಧರ್ಮದೇವನು ಇವರುಗಳ ವಿಷಯದಲ್ಲಿ ಬಲುಮಟ್ಟಿಗೆ ಮೋಸಹೋಗಿದ್ದನೆಂದು ತೋರುತ್ತದೆ ಅವನು ನ್ಯಾಯಾಧಿಪನಾಗಿದ್ದ ವಲ್ಲಭದೇವನನ್ನು ಬಲುಮಟ್ಟಿಗೆ ಕೊಂಡಾಡುತ್ತಿದ್ದನು. ಅವನು ಏನ ಮಾಡಿದನು?

ಆ ಸಮಾಚಾರ ನನಗೆ ತಿಳಿಯದು ಅವನು ಶಾಂತವೀರನೆಂಬ ಒಬ್ಬ ಶ್ರೀಮಂತನ ಮಗಳನ್ನು ಮದುವೆಯಾಗಿ ನೆಮ್ಮದಿಯಾಗಿದಾನೆಂದು ಕೇಳಿಬಲ್ಲೆ ಧರ್ಮದೇವನು ಸತ್ತು ಬದುಕಿಕೊಂಡನು. ಧನಕೋಟಿಯೂ ನಾನೂ ಜೀವವಿಟ್ಟುಕೊಂಡು ಸಂಕಟ ಪಡುತ್ತಲಿದೇವೆ. ಹೀಗಿರುವಲ್ಲಿ ಒಳ್ಳೆಯವರಿಗೆ ಕಾಲವೆಂದು ಹೇಳಬಹುದೇ? ತಾವೇ ಅಪ್ಪಣೆ ಕೊಡಿಸಬೇಕು

ಅಪ್ಪಾ! ನೀನು ಹಾಗೆ ಹೇಳುವುದು ತಪ್ಪು. ದೇವರು ಅವರವರ ಕರ್ಮಾನುಸಾರವಾಗಿ ಸಮಯಗಳನ್ನು ನೋಡಿ ಅವರವರಿಗೆ ಶಿಕ್ಷೆ ರಕ್ಷಣೆಗಳನ್ನು ಮಾಡುವನು.

ಇದಕ್ಕೆ ನಾನೇ ಸಾಕ್ಷಿ ಎಂದು ಹೇಳಿ ಇಗೋ ನೋಡು. ಈ ಉಂಗುರವು ನಿನ್ನದು, ಇದನ್ನಿಟ್ಟುಕೊಂಡು ಸುಖವಾಗಿರು ಎಂದು ಕದರ್ಥಕನು ಅದನ್ನು ಕಯ್ಯಲ್ಲಿ ಕೊಟ್ಟನು

ಇದು ನನ್ನೊಬ್ಬನಿಗೇಯೇ?

ಅಹುದು. ತನಗೆ ಆಪ್ತರಾಗಿದ್ದ ಐದುಮಂದಿಗಳಿಗೆ ಕೊಡೆಂದು ಧರ್ಮದೇವನು ಇದನ್ನು ನನ್ನಲ್ಲಿ ಕೊಟ್ಟನು. ಇರುವವರಲ್ಲಿ ನೀನೊಬ್ಬನೇ ಆಪ್ತನೆಂದು ಈಗ ತಿಳಿಯು ಬಂದುದರಿಂದ ಇದನ್ನು ನಿನಗೆ ಕೊಟ್ಟೆನು. ಇದಕ್ಕೆ ಬದಲಾಗಿ ಈ ಹಳೆಯ ಚೀಲ ವನ್ನು ನಾನು ತೆಗೆದುಕೊಳ್ಳಲೇ ಎಂದು ಧನಕೋಟಿಯು ಭುಜಂಗಭೂಷಣನಿಗೆ ಕೊಟ್ಟಿದ್ದ ಚೀಲಕ್ಕೆ ಕೈ ಹಾಕಿದನು.

ಆಗಬಹುದು. ಸ್ವಾಮೀ! ತಾವು ಸತ್ಯವಂತರಾದುದರಿಂದ ಧರ್ಮದೇವನು ಹೇಳಿ ದಂತೆ ಈ ಅಮೌಲ್ಯವಾದ ಉಂಗುರವನ್ನು ಸರಿಯಾಗಿ ವಿನಿಯೋಗಿಸಿದಿರಿ ಮತ್ತಾರಾ ದರೂ ಆಗಿದ್ದರೆ ತಾವೇ ಇಟ್ಟುಕೊಳ್ಳುತ್ತಲಿದ್ದರು.

ನೀನಾಗಿದ್ದರೆ ಹಾಗೆ ಮಾಡುತ್ತಲಿದ್ದೆ ಎಂದು ಮೆಲ್ಲಗೆ ಹೇಳಿ, ಸನ್ಯಾಸಿಯು ಕುದು ರೆಯನ್ನು ಏರಿ ಹೊರಟುಹೋದನು.

ಬಳಿಕ ಕದರ್ಥಕನು ಉಂಗುರವನ್ನು ಕಳಾಕಾಂತೆಗೆ ತೋರಿಸಿ ನಾನು ಯೋಚಿಸಿ ದ್ದಂತೆ ಈ ವಜ್ರದ ಉಂಗುರವನ್ನು ನಮಗೇ ಕೊಟ್ಟನು ಎಂದನು.

ಇದು ಕೃತ್ರಿಮವಜ್ರವಾಗಿದ್ದರೋ ಎಂದು ಅವಳು ಹೇಳಲು, ಅವನು ಬೆಪ್ಪಾ ಗಿದ್ದು, ನಮಗೆ ಮೋಸಮಾಡುವುದರಲ್ಲಿ ಆ ಸನ್ಯಾಸಿಗ ಏನು ಪ್ರಯೋಜನ ಎಂದನು. ಅದಕ್ಕವಳು ಪುಕಸಟ್ಟೆ ನಿನ್ನಿಂದ ಗುಟ್ಟು ತಿಳಿದುಕೊಳ್ಳುವುದೇ ಎಂದಳು

ಹಾಗಾದರೆ ಮನೆಯನ್ನು ನೋಡಿಕೊಂಡಿರು, ಸಮೀಪದಲ್ಲಿ ಆಗುತ್ತಿರುವ ಸಂತೆಗೆ ಹೋಗಿ ಇದನ್ನು ವರ್ತಕರಿಗೆ ತೋರಿಸಿ ಬೆಲೆಯನ್ನು ತಿಳಿದುಬರುವೆನು ಎಂದು ಹೇಳಿ ಬಟ್ಟೆಯನ್ನು ಹಾಕಿಕೊಂಡು ಸಂತೆಗೆ ಹೊರಟನು ಅವನು ಆಕಡೆ ಹೊರಟ ಕೂಡಲೆ ಕಳಾಕಾಂತೆಯು ಬೀದಿಯ ಬಾಗಿಲನ್ನು ಹಾಕಿ ಐವತ್ತುಸಾವಿರ ವರಹ, ಅದು ಒಳ್ಳೆಯ ವಜ್ರವಾಗಿದ್ದು ಇಷ್ಟು ಬೆಲೆ ಬಂದರೂ, ನೆಮ್ಮದಿಯಾಗಿ ಜೀವನ ಮಾಡಲು ಅನುಕೂಲವಾದ ಆಸ್ತಿಯಲ್ಲ. ಒಂದು ಲಕ್ಷವರಹಗಳ ಆಸ್ತಿಯಿದ್ದರೆ ಸಾಕು. ಅದಿಲ್ಲ ವಲ್ಲಾ ಎಂದು ಗೊಣಗುಟ್ಟುತ್ತ ಮಹಡಿಯನ್ನೇರಿ ಮಂಚದ ಮೇಲೆ ಮಲಗಿದಳು.

# ಇಪ್ಪತ್ತೊಂದನೆಯ ಅಧ್ಯಾಯ

## ಧನಕೋಟಿಯವ್ಯಾಪಾರ

ಮನೋರಂಜಿನಿಯಲ್ಲಿ ಕದರ್ಥಕನಿಗೂ ನಿರ್ಮಲಾನಂದನಿಗೂ ಸಂವಾದ ನಡೆದ ಮಾರನೇ ದಿನ ಬೆಳಿಗ್ಗೆ, ಸುಮಾರು ಮೂವತ್ತೈದು ವಯಸ್ಸುಳ್ಳ ಅಂಗದೇಶೀಯ ನೊಬ್ಬನು ಮಲಯಪಟ್ಟಣದ ನಗರಾಧ್ಯಕ್ಷನ ಬಳಿಗೆ ಹೋಗಿ, ಸ್ವಾಮೀ! ನಾನು ಇಂದ್ರಪ್ರಸ್ಥದ ಧನಾಗಾರಪತಿ ನಂದಕುಮಾರರ ಗುಮಾಸ್ತನು ; ನಮ್ಮ ಯಜಮಾನರಿಗೆ ಧನಕೋಟಿಯಿಂದ ಒಂದು ಲಕ್ಷ ವರಹಗಳು ಬರಬೇಕಾಗಿದೆ. ಅವನ ಸ್ಥಿತಿಯು ಈಚೆಗೆ ಸರಿಯಾಗಿಲ್ಲವೆಂದು ವರ್ತಮಾನವನ್ನು ಕೇಳಿ, ಅದು ನಿಜವೋ ಅಲ್ಲವೋ ಎಂಬುವುದನ್ನು ತಮ್ಮಿಂದ ತಿಳಿಯಲೋಸುಗ ಬಂದಿದ್ದೇನೆ, ದಯವಿಟ್ಟು ತಿಳಿಸಬೇಕು ಎಂದನು.

ನನ್ನನ್ನು ಅಧ್ಯಕ್ಷನನ್ನಾಗಿ ಭಾವಿಸಿ ನೀವು ಕೇಳುವುದಾದರೆ, ಧನಕೋಟಿಯ ಹಡಗುಗಳು ಮೂರು ನಾಲ್ಕು ಮುಳುಗಿ ಹೋದರೂ, ಅವನು ಹಣವಿಟ್ಟಿದ್ದ ಅನೇಕ ಧನಾಗಾರಗಳು ದಿವಾಳಿಯಾದರೂ, ತಾನು ಕೊಡತಕ್ಕ ಹಣಗಳನ್ನು ಮಾತ್ರ ಸಕಾಲ ದಲ್ಲಿ ಕೊಡುತ್ತಲಿದ್ದಾನೆ. ನಾನೂ ಹತ್ತು ಸಾವಿರ ವರಹಗಳನ್ನು ಅವನಲ್ಲಿ ಇಟ್ಟಿರುವೆನು; ಅದನ್ನು ವಾಪಸು ಕೊಡಲು ಇನ್ನೂ ಆರು ತಿಂಗಳ ವಾಯಿದೆ ಇದೆ. ಅವನಿಗೆ ಮಿಕ್ಕ ಸಾಲಗಳು ಎಷ್ಟು ಇವೆಯೋ, ಅವುಗಳನ್ನು ತೀರಿಸಲು ಅವನಿಗೆ ಶಕ್ತಿಯುಂಟೋ ಇಲ್ಲವೋ ನಾನು ಕಾಣೆ, ನನಗಿಂತ ಹೆಚ್ಚಾಗಿ ಅವನಲ್ಲಿ ಹಣವನ್ನು ಇಟ್ಟಿರುವ ಬಂದಿ ಶಾಲೆಗಳ ಮೇಲು ವಿಚಾರಕನಾದ ಭಾಸ್ಕರನನ್ನು ಕೇಳಿದರೆ ಎಲ್ಲವೂ ಗೊತ್ತಾಗುತ್ತದೆ ಎಂದನು.

ಒಡನೆಯೇ ಗುಮಾಸ್ತನು ಭಾಸ್ಕರನ ಮನೆಗೆ ಹೋಗಿ ತಾನು ಬಂದ ಸಮಾ ಚಾರವನ್ನು ತಿಳಿಸಲು, ಅವನು ಕೂಡಲೆ ಮರ್ಯಾದೆಯಾಗಿ ಇವನನ್ನು ಒಳಗೆ ಕರೆದು ಕೊಂಡು ಹೋಗಿ ಆಸನವನ್ನಿತ್ತು ಕುಳ್ಳಿರಿಸಿ, ಸ್ವಾಮೀ! ನನ್ನಿಂದ ತಮಗೇನಾಗಬೇಕು ಎಂದು ಕೇಳಿದನು. ಭಾಸ್ಕರನ ಮುಖವನ್ನು ನೋಡುತಲೆ ಗುಮಾಸ್ತನು ಸ್ವಲ್ಪ ಬೆಚ್ಚಿ ವಿಸ್ಮಯಗೊಂಡನು, ಆದರೆ ತನ್ನ ಮಗಳ ಮದುವೆಗಾಗಿ ಧನಕೋಟಿಯ ಬಳಿ ಇಟ್ಟಿದ್ದ

ಎರಡು ಲಕ್ಷ ವರಹಗಳು ಹೋಯಿತಲ್ಲಾ ಎಂಬ ವ್ಯಸನದಲ್ಲಿ ಮುಳುಗಿದ್ದ ಭಾಸ್ಕರನು ಅವನು ಬೆಚ್ಚಿದುದನ್ನು ನೋಡಲೇ ಇಲ್ಲ. ಒಂದು ವೇಳೆ ಅವನು ನೋಡಿದ್ದರೂ ಹಿಂದೆ ನಡೆದುದನ್ನು ನೆನಸಿಕೊಳ್ಳುವಷ್ಟು ಬುದ್ಧಿಯೂ ಇರಲಿಲ್ಲ.

ಸ್ವಾಮೀ ಭಾಸ್ಕರರೇ ! ಈ ಪಟ್ಟಣದಲ್ಲಿ ಧನಕೋಟಿಯ ವಿಷಯವಾಗಿ ಜನರು ಏನೇನೋ ಆಡಿಕೊಳ್ಳುತ್ತಿದ್ದಾರೆ ಎಂದು ತಾನು ಕೇಳಿದ್ದ ವರ್ತಮಾನಗಳನ್ನೆಲ್ಲಾ ಹೇಳಿ ಅದು ನಿಜವೋ ಎಂದುದಕೆ, ಭಾಸ್ಕರನು ಅಯ್ಯಾ ! ತಾವು ಕೇಳಿರುವುದೆಲ್ಲಾ ನಿಶ್ಚಯ ; ಅವನ ಬಳಿ ನನ್ನ ಮಗಳ ಮದುವೆಗಾಗಿ ನಾನೂ ಎರಡು ಲಕ್ಷ ವರಹಗಳನ್ನಿಟ್ಟಿರುವೆನು. ಇನ್ನು ಹದಿನೈದು ದಿವಸಗಳಲ್ಲಿ ಮದುವೆಯು ನಡೆಯುವಂತೆ ಗೊತ್ತಾಗಿದೆ ; ಇದನು ಧನಕೋಟಿಗೆ ತಿಳಿಸಿ ಹಣ ಬೇಕೆಂದು ಕೇಳಿದುದಕೆ ನನ್ನ ಹಡಗು ಜಯಲಕ್ಷ್ಮಿಯು ಬಂದರೆ ನಿನ್ನ ಹಣವನ್ನು ಕೊಡುತ್ತೇನೆ, ಬಾರದಿದ್ದರೆ ನನ್ನ ಯತ್ನವೇನಿದೆ ಎಂದು ಈಗ ತಾನೆ ಹೇಳಿ ಹೋದನು ಎಂದನು.

ಹಾಗಾದರೆ ತಮ್ಮ ಹಣವು ಹೋದಂತೆಯೇ ತಾನೇ "ಆಹಾ ! ಹಾಗೆಯೇ ಸರಿ."

ಒಂದು ವೇಳೆ ನಿಮ್ಮ ಹಣವನ್ನು ಆರಾದರೂ ಕೊಡುವುದಾದರೆ ಧನಕೋಟಿಯ ಮೇಲೆ ಆ ಹಣಕ್ಕೆ ಒಂದು ಹುಂಡಿಯನ್ನು ಬರೆದುಕೊಡುವಿರಾ ?

ಹಣವನ್ನು ಕೊಡುವರಾರು ? ಕೊಟ್ಟರೆ ಆ ಹಣವು ಅವರಿಗೆ ಒಹುಶಃ ಹಿಂತಿರುಗಿ ಬಾರದು. "ನಾನೇ ಕೊಡುತ್ತೇನೆ." ನೀವು ಕೊಡುತ್ತೀರಾ ? "ಹೂಂ" ಎಂದು ನಂದಕುಮಾರನ ಗುಮಾಸ್ತನು ಸುಮಾರು ನಾಲ್ಕೈದು ಲಕ್ಷ ವರಹಗಳ ನೋಟುಗಳನ್ನು ಚೀಲದಿಂದ ಹೊರಗೆ ತೆಗೆದನು.

ತಾವು ಹೆಚ್ಚು ವಟ್ಟವನ್ನು ಕೇಳಬಹುದು , ಅದೂ ನ್ಯಾಯವೇ.

ನಮ್ಮ ಯಜಮಾನರು ಹಣಕ್ಕೆ ವಟ್ಟ ಕೇಳುವರಲ್ಲ. ನಾವು ಕೇಳುವುದೇ ಬೇರೆ. "ಅದಾವುದು ?"

ನಾನು ಇಂದ್ರಪ್ರಸ್ಥನಗರದಲ್ಲಿ ಒಬ್ಬ ಆನಂದರಲ್ಲಿ ವಿದ್ಯಾಭ್ಯಾಸವನ್ನು ಮಾಡಿದ್ದೆನು , ಅವರು ಇದ್ದುದಿದ್ದಂತೆಯೇ ಅದೃಶ್ಯರಾದರು. ಹುಡುಕಿ ಹುಡುಕಿ ಬೇಸತ್ತು ಕೊನೆಗೆ ಜಾಲದುರ್ಗದಲ್ಲಿದ್ದಾರೆಂದು ತಿಳಿದು ನಿಮ್ಮಲ್ಲಿಗೆ ಬಂದೆನು. ನಿಮ್ಮಿಂದ ಅವರ ಸಮಾಚಾರವು ತಿಳಿಯಬೇಕಾಗಿದೆ,

ಅವರ ಹೆಸರೇನು? "ಯೋಗಾನಂದರು"

ಓಹೋ, ಅವನೇ! ಅವನನ್ನು ನಾನು ಚೆನ್ನಾಗಿ ಬಲ್ಲೆ, ಅವನು ಸ್ವಲ್ಪ ಹುಚ್ಚ ನಲ್ಲವೇ? "ಹಾಗೆಂದು ಜನರು ಹೇಳುತ್ತಲಿದ್ದರು."

ಖಂಡಿತವಾಗಿಯೂ ಅವನಿಗೆ ಸ್ವಲ್ಪ ಹುಚ್ಚಿದ್ದಿತು. "ಆವ ಹುಚ್ಚು?"

ತನಗೆ ಒಂದು ದೊಡ್ಡ ನಿಕ್ಷೇಪವಿರುವುದು ಗೊತ್ತಿರುವುದೆಂತಲೂ, ಸರ್ಕಾರದವರು ಬಿಡುಗಡೆ ಮಾಡಿಕೊಟ್ಟರೆ ವಿಶೇಷ ದ್ರವ್ಯವನ್ನು ಕೊಡುವೆನೆಂತಲೂ ಹೇಳುತ್ತಲಿದ್ದನು.

ಇದು ವಿನಾ ಬೇರಾವುದಾದರೂ ಹುಚ್ಚು ಉಂಟೋ? "ಇಲ್ಲ."

ಹಾಗಾದರೆ ಅವರು ಏಕವಿಷಯೋನ್ಮಾದಗ್ರಸ್ತರಾಗಿದ್ದರೆಂದು ತೋರುತ್ತಲಿದೆ. "ಅಹುದು."

ಈಗಲೂ ಹಾಗೆಯೇ ಇದಾರೆಯೋ?

ಅಯ್ಯೋ ಪಾಪ! ಅವನು ಸತ್ತುಹೋದನು.

ಹಾ! ಸತ್ತುಹೋದರೇ? "ಆವಾಗ? ಏನಾಗಿದ್ದಿತು?"

ಅವನು ಸತ್ತು ಆರು ತಿಂಗಳಾದುವು, ಅವನಿಗೇನಾಗಿದ್ದಿತೋ ಗೊತ್ತಿಲ್ಲ.

ತಮ್ಮ ಸ್ವಾಧೀನದಲ್ಲಿ ಎಷ್ಟೋ ಬಂದಿಶಾಲೆಗಳಿರುವುವು; ಒಂದೊಂದು ಬಂದಿ ಶಾಲೆಯಲ್ಲಿಯೂ ಎಷ್ಟೋ ಬಂದಿಯವರಿರುವರು. ಅವರು ಸತ್ತ ಕಾಲವನ್ನು ಸರಿಯಾಗಿ ಹೇಳುವುದನ್ನು ನೋಡಿದರೆ ತಮಗೆ ಜ್ಞಾಪಕಶಕ್ತಿಯು ಚೆನ್ನಾಗಿರುವಂತೆ ತೋರುತ್ತ ಲಿದೆ ಎಂದು ಗುಮಾಸ್ತನು ನಕ್ಕನು.

ಎಲ್ಲವೂ ನೆನಪಿಲ್ಲ, ಇದು ಮಾತ್ರ ಜ್ಞಾಪಕವಿರಲು ಒಂದು ಕಾರಣವುಂಟು. ಅದೇನು?

ಆನಂದನಿದ್ದ ಅಂಧಕೂಪಕ್ಕೂ ರಾಜದ್ರೋಹಿಯೊಬ್ಬನಿದ್ದ ಅಂಧಕೂಪಕ್ಕೂ ಮಧ್ಯೆ ಸುಮಾರು ನಲವತ್ತೈವತ್ತು ಅಡಿಗಳ ಮಂದವಾದ ಗೋಡೆಯಿದ್ದಿತು. ಈ ರಾಜದ್ರೋಹಿಯು ಬಲು ಘಾತುಕನು "ಹಾಗೆಯೇ?"

ಅಹುದು. ಅವನನ್ನು ನೋಡಬೇಕೆಂದು ನಾನೊಂದು ಸಾರಿ ಅವನಿದ್ದ ಕೂಪಕ್ಕೆ ಹೋಗುವಾಗ ಜಾಲದುರ್ಗದ ಕಾರಾಗೃಹದ ಅಧಿಕಾರಿಯು ಇವನು ಘಾತುಕನು, ಸಂಗಡ ಕೆಲವು ಸಿಪಾಯಿಗಳನ್ನು ಕರೆದುಕೊಂಡು ಹೋಗುವುದು ಒಳ್ಳೆಯದು ಎಂದು

ಹೇಳಿದನು. ನಾನು ಆ ಕೂಪಕ್ಕೆ ಹೋದ ಒಡನೆಯೇ ಅವನು ಒಂದೇ ಹಾರು ಹಾರಿ ನನ್ನ ಸಮೀಪಕ್ಕೆ ಬಂದು, ಸುತ್ತಲಿದ್ದ ಸಿಪಾಯಿಗಳನ್ನು ನೋಡಿ ಹಾಗೆಯೇ ನಿಂತನು ; ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಲಿದ್ದಿತೋ ! ಅವನು ಹಾರಿ ನನ್ನ ಬಳಿಗೆ ಬಂದಾಗ ಅವನಿಗೆ ಇದ್ದ ಮುಖಭಾವವು ಇನ್ನೂ ನನಗೆ ಜ್ಞಾಪಕವಿದೆ

ಅದನ್ನು ಕೇಳಿ ಅಂಗದೇಶೀಯನು ಸ್ವಲ್ಪ ನಕ್ಕು ಅವನ ಹೆಸರೇನು ? ಎಂದು ಕೇಳಿದನು. " ಧರ್ಮದೇವ " ಆಮೇಲೆ ?

ಆ ಘಾತುಕನು ಹೇಗೆಯೋ ಕೆಲವು ಆಯುಧಗಳನ್ನು ಸಂಪಾದಿಸಿಕೊಂಡು ತನ್ನ ಕೂಪದಿಂದ ಯೋಗಾನಂದನ ಕೂಪಕ್ಕೆ ಬಂದಾಳು ಓಡಾಡುವಂತೆ ಸುರಂಗವನ್ನು ಹಾಕಿ, ಆಗಾಗ ಸನ್ಯಾಸಿಯ ಜತೆಯಲ್ಲಿ ಸೇರಿ ಮಾತನಾಡುತಲಿದ್ದಂತೆ ತೋರುತ್ತದೆ.

ಅದರಿಂದೇನು ಅಪಾಯ ?

ಇಬ್ಬರು ಬಂದಿಗಳು ಸೇರಿದರೆ ಅವರು ಅವಾಗಲೂ ತಪ್ಪಿಸಿಕೊಂಡು ಹೋಗುವ ಯೋಚನೆಯನ್ನೇ ಮಾಡುವರು. ಅದೇ ಅಪಾಯ ದೈವವಶಾತ್ ಅಷ್ಟರಲ್ಲಿ ಆನಂದನು ಸತ್ತುಹೋದನು.

ಅದರಿಂದ ಆ ಘಾತುಕನು ಓಡಿಹೋಗಲು ಮಾಡಿದ್ದ ಯೋಚನೆಯು ಮುರಿದು ಹೋಯಿತಲ್ಲವೇ ?

ಸತ್ತವನಿಗೆ ಮಾತ್ರ ಹಾಗಾಯಿತು. ಜಾಲದುರ್ಗದ ಬಂಧನಾಲಯದಲ್ಲಿ ಸತ್ತವರನ್ನು ಗೋಣೀಚೀಲದಲ್ಲಿ ಹಾಕಿ ಹೊಲಿದು ಸಮುದ್ರದಲ್ಲಿ ಬಿಸುಡುವ ಪದ್ಧತಿ, ಅದನ್ನು ತಿಳಿದು ಆ ಘಾತುಕನು ಗೋಣೀಚೀಲದಲ್ಲಿದ್ದ ಆನಂದನ ಹೆಣವನ್ನು ತನ್ನ ಕೂಪಕ್ಕೆ ಸಾಗಿಸಿ ಆ ಚೀಲದಲ್ಲಿ ತಾನು ಮಲಗಿಕೊಂಡು ಒಳಗಡೆಯಿಂದ ಅದರ ಬಾಯಿಯನ್ನು ಹೊಲಿದು, ಸಮುದ್ರದಲ್ಲಿ ಬೀಳುವುದನ್ನು ನಿರೀಕ್ಷಿಸುತ್ತಲಿದ್ದನು.

ಹಾಗಾದರೆ ಅವನು ಮಹಾ ಸಾಹಸಿಯೂ ಧೈರ್ಯಶಾಲಿಯೂ ಆಗಿರಬೇಕು ಎಂದು ತೋರುತ್ತಲಿದೆ.

ಅವನು ಘಾತುಕನೆಂದು ಮೊದಲೇ ಹೇಳಲಿಲ್ಲವೆ ? ಆದರೆ ಅವನ ಯೋಚನೆಯು ಅವನಿಗೇ ಮೃತ್ಯುವಾಯಿತು.

ಅದು ಹೇಗೆ ? " ನಿಮಗೆ ಗೊತ್ತಾಗಲಿಲ್ಲವೋ ? " ಇಲ್ಲ.

ಹೆಣದ ಚೀಲಕ್ಕೆ ಆವಾಗಲೂ ಒಂದು ಭಾರವಾದ ಕಬ್ಬಿಣದ ಗುಂಡನ್ನು ಕಟ್ಟಿಯೇ ಸಮುದ್ರದಲ್ಲಿ ಎಸೆಯುವ ಪದ್ಧತಿ ; ಅದು ಅವನಿಗೆ ಗೊತ್ತಿರಲಿಲ್ಲವೆಂದು ತೋರುತ್ತಲಿದೆ.

ಆಮೇಲೆ ?

ಅವನು ಮಲಗಿದ್ದ ಚೀಲಕ್ಕೂ ಪದ್ಧತಿಯ ಪ್ರಕಾರ ಭಾರವಾದ ಒಂದು ಗುಂಡನ್ನು ಕಟ್ಟಿ ಸಮುದ್ರದಲ್ಲಿ ಬಿಸುಟರು.

ನಿಶ್ಚಯವಾಗಿ ?

ನಿಶ್ಚಯವಾಗಿ ಮೇಲಿನಿಂದ ನೀರಿನಲ್ಲಿ ಬೀಳುವಾಗ ಅವನಿಗೆ ಎಷ್ಟು ವಿಸ್ಮಯ ವ್ಯಾಕುಲವುಂಟಾಯಿತೋ ಕಾಣೆ, ನನಗೆ ಆಗ ಅವನ ಮುಖವನ್ನು ನೋಡಲು ಆಸೆ ಇದ್ದಿತು.

ಅದು ಹೇಗೆ ಸಾಧ್ಯ ?

ಚಿಂತೆಯಿಲ್ಲ. ಅದನ್ನು ನಾನು ಮನಸಾ ಊಹಿಸಬಲ್ಲೆನು. ಆ ಹುಚ್ಚನು ಸತ್ತ ದಿನವೇ ಈ ಸಂಗತಿಯು ನಡೆದುದರಿಂದ ನನಗೆ ಚೆನ್ನಾಗಿ ಆ ದಿನವು ಜ್ಞಾಪಕವಿದೆ.

ಹಾಗಾದರೆ ಆ ಘಾತುಕನು ಸತ್ತುಹೋಗಿರಬೇಕು.

ನಾಯದೆ ಇನ್ನೇನು ಆದಾನು ?

ಹಾಗಾದರೆ ಆ ಹುಚ್ಚನಿಗೂ ಘಾತುಕನಿಗೂ ಒಂದೇ ಸಲ ಬಿಡುಗಡೆಯಾಯಿತು ಎಂದು ಅಂಗದೇಶೀಯನು ನಕ್ಕನು.

ಅಹುದು, ಅಹುದು ಎಂದು ಭಾಸ್ಕರನೂ ನಕ್ಕನು.

ಅದು ಹೋಗಲಿ. ಆ ಆನಂದನ ವಿಚಾರವಾಗಿ ನಿಮ್ಮ ಪುಸ್ತಕದಲ್ಲಿ ಏನನ್ನು ಬರೆದಿರುವಿರೋ ಅದನ್ನು ನೋಡಬೇಕಲ್ಲಾ ?

ಓಹೋ ! ಈ ಕಥೆಯಲ್ಲಿ ಅದು ಮರೆತೇಹೋಯಿತು. ಅದನ್ನು ನೀವು ಅಗತ್ಯ ನೋಡಬೇಕೋ ?

ತಾವು ದಯವಿಟ್ಟು ತೋರಿಸಿದರೆ.

ಹಾಗಾದರೆ ಇಲ್ಲಿ ಬನ್ನಿ ಎಂದು ಭಾಸ್ಕರನು ಅವನನ್ನು ಒಂದು ಕೊಟ್ಟಡಿಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿ, ಅವನ ಮುಂದಿದ್ದ ಮೇಜಿನ ಮೇಲೆ ಬೇಕಾದ ಪುಸ್ತಕಗಳನ್ನು ತಂದಿಟ್ಟು, ತಾನು ಒಂದು ವೃತ್ತಾಂತಪತ್ರಿಕೆಯನ್ನು ಕೆಯ್ಯಲ್ಲಿ ಹಿಡಿದು

ಓದುತ್ತ ಸ್ವಲ್ಪ ದೂರದಲ್ಲಿ ಮತ್ತೊಂದು ಕುರ್ಚಿಯಲ್ಲಿ ಕುಳಿತನು. ನಂದಕುಮಾರನ ಗುಮಾಸ್ತನಿಗೆ ಯೋಗಾನಂದನ ವಿಷಯವಾಗಿ ತಿಳಿಯಬೇಕಾದ ಸಂಗತಿಯು ಸುಲಭ ವಾಗಿ ಸಿಕ್ಕಿದರೂ, ಧರ್ಮದೇವನ ವಿಷಯವಾಗಿ ಭಾಸ್ಕರನು ಹೇಳಿದ ಕಥೆಯಲ್ಲಿ ಕುತೂಹಲವುಂಟಾಗಿ ಅದನ್ನು ಬರೆದಿರುವ ಪತ್ರವನ್ನು ತೆಗೆದು ಓದುತ್ತಿದ್ದನು. ಅದ ರಲ್ಲಿ ದುರ್ಮತಿಯು ಬರೆದಿದ್ದ ಹೆಸರಿಲ್ಲದ ಅರ್ಜಿಯೂ, ಧನಕೋಟಿಯು ಧರ್ಮದೇವನ ವಿಷಯವಾಗಿ ಬರೆದುಕೊಂಡಿದ್ದ ಮನವಿಯೂ, ಅದರ ಮೇಲೆ ವಲ್ಲಭದೇವನು ಬರೆ ದಿದ್ದ ಟಿಪ್ಪಣಿಯೂ, ಕೊನೆಯಲ್ಲಿ ಭಾಸ್ಕರನು ಮೇಲೆ ಒರೆದಿರುವುದನ್ನು ನೋಡಿದರೆ ಆವ ಸಹಾಯವನ್ನೂ ಮಾಡಲಾಗದು ಎಂದು ಬರೆದಿದ್ದುದೂ ಎಲ್ಲವೂ ಕ್ರಮವಾಗಿ ದ್ದುವು. ಅವುಗಳನ್ನೆಲ್ಲಾ ಚೆನ್ನಾಗಿ ಓದಿನೋಡಲು ಧನಕೋಟಿಯು ಮಾಡಿದ ಸಹಾಯ, ವಲ್ಲಭದೇವನ ಕೃತ್ರಿಮಸಂಧಾನ ಇವೆಲ್ಲ ಅವನಿಗೆ ಚೆನ್ನಾಗಿ ಮಂದಟ್ಟಾ ದುವು. ಇವುಗಳಲ್ಲಿ ದುರ್ಮತಿಯು ಬರೆದಿದ್ದ ಹೆಸರಿಲ್ಲದ ಅರ್ಜಿಯನ್ನು ಮಾತ್ರ ಕಿತ್ತು ಜೇಬಿನಲ್ಲಿ ಹಾಕಿಕೊಂಡು, ಪುಸ್ತಕವನ್ನು ದಬ್ಬೆಂದು ಮುಚ್ಚಿದನು. ಭಾಸ್ಕರನಿಗೆ ಇದಾವುದೂ ತಿಳಿಯಲಿಲ್ಲ; ವೃತ್ತಾಂತಪತ್ರಿಕೆಯನ್ನು ಓದುತ್ತಿದ್ದುದರಿಂದ ನೋಡ ಲಿಲ್ಲವೋ, ಅಥವಾ ಅವನು ತನಗೆ ಕೊಡುತ್ತೇನೆಂದು ಹೇಳಿದ್ದ ಎರಡುಲಕ್ಷ ವರಹಗಳಿ ಗಿಂತ ಅವನು ಕಿತ್ತು ತೆಗೆದುಕೊಂಡ ಕಾಗದವು ದೊಡ್ಡದಲ್ಲವೆಂದು ಉದಾಸೀನಭಾವ ದಿಂದ ಸುಮ್ಮನಿದ್ದನೋ ನಾವು ಕಾಣೆವು.

ಆಗ ಗುಮಾಸ್ತನು ಪುಸ್ತಕವನ್ನು ಮುಚ್ಚಿ ಎದ್ದು ನನಗೆ ಬೇಕಾದುದು ಸಿಕ್ಕಿತು; ಇಗೋ ನಿಮ್ಮ ಹಣವನ್ನು ತೆಗೆದುಕೊಳ್ಳಿರಿ. ಈ ಹಣಕ್ಕೆ ಧನಕೋಟಿಯ ಮೇಲೆ ಒಂದು ಹುಂಡಿಯನ್ನು ಬರೆದುಕೊಟ್ಟರೆ ಸಾಕು, ಎಂದನು.

ಭಾಸ್ಕರನು ಹಣವನ್ನು ತೆಗೆದಿಟ್ಟುಕೊಂಡು, ಹುಂಡಿಯನ್ನು ಬರೆದುಕೊಟ್ಟು ಗುಮಾಸ್ತನನ್ನು ಸಾಗಕಳುಹಿಸಿದ ಮೇಲೆ, ತನ್ನ ಕೊಟ್ಟಡಿಗೆ ಬಂದು ಇಂತಹ ಮುಟ್ಠಾಳ ಗುಮಾಸ್ತನಿಲ್ಲದಿದ್ದರೆ ನನ್ನ ಗತಿಯೇನಾಗುತಲಿದ್ದಿತು? ಈ ಎರಡು ಲಕ್ಷ ವರಹಗಳಲ್ಲಿ ಒಂದುಕಾಸು ಕೂಡ ಇವನಿಗೆ ಬಾರದು ಎಂದು ಹೇಳಿಕೊಂಡನು.

ಭಾಸ್ಕರನು ಧನಕೋಟಿಯ ಮೇಲೆ ಹುಂಡಿಯ್ನು ಬರೆದುಕೊಟ್ಟಾಗ ಅವನ ಸ್ಥಿತಿ

ಯು ಹೇಗಿದ್ದಿತೆಂದು ತಿಳಿಯಲು ನಮ್ಮ ಪಾಠಕರು ಕುತೂಹಲವುಳ್ಳವರಾಗಿರಬಹುದು; ಆದುದರಿಂದ ನಾವು ಅದನ್ನು ಅವರಿಗೆ ಸಂಕ್ಷೇಪವಾಗಿ ತಿಳಿಸುವೆವು.

ಪ್ರಾರಂಭದಲ್ಲಿ ಧನಕೋಟಿಯು ವ್ಯಾಪಾರವು ಒಳ್ಳೆಯ ಸ್ಥಿತಿಯಲ್ಲಿದ್ದಿತು; ಆಗ ಅವನ ಮಳಿಗೆಗಳು ಆವಾಗಲೂ ಸರಕುಗಳಿಂದ ತುಂಬಿದ್ದುವು; ಅನೇಕರು ಅವನ ಬಳಿಗೆ ಬರುತ್ತ ಹೋಗುತ್ತಲಿದ್ದರು; ಹತ್ತಿರ ನೂರಾರು ಜನ ಗುಮಾಸ್ತರುಗಳು ಒಂದು ನಿಮಿಷವಾದರೂ ವ್ಯವಧಾನವಿಲ್ಲದೆ ಓಡಾಡುತ್ತಲಿದ್ದರು. ಈಗಲೋ ಮಳಿಗೆಗಳೆಲ್ಲವೂ ಮುಚ್ಚಿ ಹೋಗಿರುವುವು, ಜನಗಳ ಓಡಾಟವೂ ನಿಂತುಹೋಯಿತು; ಒಬ್ಬ ಒಕ್ಕಣ್ಣನಲ್ಲದೆ (ಆದಕ್ಕಾಗಿಯೇ ಎಲ್ಲರೂ ಅವನನ್ನು ಶುಕ್ರಾಚಾರಿಯೆಂದು ಕರೆಯುತ್ತಲಿದ್ದರು) ಬೇರಾರೂ ಗುಮಾಸ್ತರು ಇರಲಿಲ್ಲ ಈ ಗುಮಾಸ್ತನು ಮಾತ್ರ ಧನಕೋಟಿಯಲ್ಲಿ ಪೂರ್ಣವಾದ ಭಕ್ತಿಯಿಂದ ಬಡತನದಲ್ಲಿಯೂ ಅವನನ್ನು ಬಿಟ್ಟುಹೋಗದೆ ಇದ್ದನು.

ಧನಕೋಟಿಯು ಹೀನಸ್ಥಿತಿಗೆ ಬಂದ ಹಾಗೆಲ್ಲಾ ಅವನ ಯೋಚನೆಗಳು ಹೆಚ್ಚುತ್ತಲಿದ್ದುವು ತಾನು ಕೊಡಬೇಕಾಗಿದ್ದ ಚಿಲ್ಲರೆ ಸಾಲಗಳನ್ನು ತೀರಿಸಲು, ಹಣವಿಲ್ಲದೆ ಹೆಂಡತಿ ಮಕ್ಕಳ ಮೇಲೆ ಹಾಕಿದ್ದ ಒಡವೆಗಳನ್ನು ಮಾರಿ ತೀರಿಸಬೇಕೆಂದು ಯೋಚಿಸಿ, ಇಲ್ಲಿ ಮಾಡಿದರೆ ತನ್ನ ಸ್ಥಿತಿಯು ಎಲ್ಲರಿಗೂ ತಿಳಿದು ಸಾಲಗಾರರೆಲ್ಲರೂ ಒಂದೇ ಸಲ ಮೇಲೆ ಬೀಳುವರೆಂಬ ಭೀತಿಯಿಂದ, ದೂರದೇಶಕ್ಕೆ ಹೋಗಿ ಅವುಗಳನ್ನು ಮಾರಿ ಬಂದ ಹಣದಿಂದಲೂ, ಅವನಿಗೆ ಬರಬೇಕಾಗಿದ್ದು ಆಗಾಗ ಬರುತ್ತಲಿದ್ದ ಅಲ್ಪಸ್ವಲ್ಪ ಹಣಗಳಿಂದಲೂ, ಚಿಲ್ಲರೆ ಸಾಲಗಳನ್ನು ತೀರಿಸುತ್ತಲಿದ್ದನು. ದೊಡ್ಡದೊಡ್ಡ ಸಾಲಗಳನ್ನು ತೀರಿಸಲು ಜಯಲಕ್ಷ್ಮಿಯು ಬರುವುದನ್ನೇ ಕಾಯುತ್ತಲಿದ್ದನು. ದೈವಾಧೀನದಿಂದ ಅಂತಹ ಸಾಲಗಳಿಗೆ ವರಾತುಗಳು ಬಂದಿರಲಿಲ್ಲ.

ಹೀಗಿರುವಾಗ ನಂದಕುಮಾರನ ಗುಮಾಸ್ತನು ಧನಕೋಟಿಯನ್ನು ನೋಡುವುದಕ್ಕೆ ಬಂದನು ಇವನಾವನೋ ಹೊಸ ಸಾಲಗಾರನಿರಬಹುದೆಂದು ಯೋಚಿಸಿ ಧನಕೋಟಿಯ ಮಗಳನ್ನು ಮದುವೆಯಾಗಬೇಕೆಂಬ ಉದ್ದೇಶದಿಂದ ಅವನ ಮನೆಯಲ್ಲಿಯೇ ಇರುತಲಿದ್ದ ಮನೋಮೋಹನನು ಇವನನ್ನು ನೋಡುವುದರಿಂದ ಧನಕೋಟಿಗೆ ಉಂಟಾಗುವ ಸಂಕಟವನ್ನು ತಪ್ಪಿಸಲು ತಾನೇ ಅವನನ್ನು ವಿಚಾರಿಸಿ ಕಳುಹಿಸಬೇಕೆಂದು ಪ್ರಯತ್ನಪಟ್ಟನು, ಆ ಗುಮಾಸ್ತನು "ನಾನು ಯಜಮಾನನ ಸಂಗಡ

ಮಾತನಾಡಲು ಬಂದಿದ್ದೇನೆ, ನಿಮ್ಮಲ್ಲಿ ನನಗೆ ಏನೂ ಕೆಲಸವಿಲ್ಲ" ಎಂದು ಹೇಳಲು, ಮನೋಮೋಹನನು ನಿಟ್ಟುಸಿರನ್ನು ಬಿಟ್ಟು ಶುಕ್ರಾಚಾರಿಯನ್ನು ಕರೆದು ಶ್ರೀಮಂತ ನಂದಕುಮಾರರ ಗುಮಾಸ್ತರನ್ನು ಯಜಮಾನರ ಬಳಿಗೆ ಕರೆದುಕೊಂಡು ಹೋಗು ಎಂದನು.

ಅವರಿಬ್ಬರೂ ಉಪ್ಪರಿಗೆಯ ಮೆಟ್ಟಲುಗಳನ್ನು ಏರಿ ಹೋಗುತ್ತಲಿರುವಾಗ, ಅರ್ಧ ದಾರಿಯಲ್ಲಿ ನಿಂತಿದ್ದ ಹದಿನೆಂಟು ವಯಸ್ಸಿನ ಒಬ್ಬ ಯುವತಿಯನ್ನು ನೋಡಿ ಶುಕ್ರಾಚಾರಿಯು ಅಮ್ಮಾ, ರತ್ನಾಂಬೆ! ಯಜಮಾನರು ಮೇಲಿರುವರೋ ಎಂದು ಕೇಳಿದುದಕ್ಕೆ, ಅವಳು ಇರಬೇಕು ಎಂದಳು.

ಯಜಮಾನರನ್ನು ನೋಡಬೇಕೆಂದು ಈ ದೊಡ್ಡಮನುಷ್ಯರು ಬಂದಿದ್ದಾರೆ, ಅದನ್ನು ಅವರಿಗೆ ತಿಳಿಸಿರಿ ಎಂದು ಶುಕ್ರಾಚಾರಿಯು ಹೇಳಲು, ಅಂಗದೇಶೀಯನು ಅಮ್ಮಾ ಯಜಮಾನರಿಗೆ ನಾನಿಂಥವನೆಂದು ತಿಳಿಯದು; ಧನಾಗಾರಾಧ್ಯಕ್ಷರಾದ ಶ್ರೀಮಂತ ನಂದಕುಮಾರರ ಗುಮಾಸ್ತನು ಬಂದಿದ್ದಾನೆಂದು ತಿಳಿಸಿರಿ ಎಂದು ಹೇಳಿದನು ಆಕೆಯು ಇವನಾವನೋ ದೊಡ್ಡ ಸಾಲಗಾರನೆಂದು ಗಾಬರಿಬಿದ್ದು ಆವ ಮಾತನ್ನೂ ಆಡದ ಮಹಡಿಯಿಂದ ಇಳಿದು ಮನೋಮೋಹನನ ಬಳಿಗೆ ಓಡಿಹೋದಳು ಶುಕ್ರಾಚಾರಿಯು ಅಂಗದೇಶೀಯನನ್ನು ಧನಕೋಟಿಯ ಕೊಟ್ಟಡಿಗೆ ಕರೆದುಕೊಂಡುಹೋಗಿ ಅವನಿಂಥವನೆಂದು ಯಜಮಾನನಿಗೆ ಹೇಳಿ ಹೊರಟು ಹೋದನು

ಆಗ ಧನಕೋಟಿಯು ಲೆಕ್ಕದ ಪುಸ್ತಕಗಳನ್ನು ನೋಡುತ್ತಲಿದ್ದನು. ಗುಮಾಸ್ತನು ಬಂದೊಡನೆಯೇ ಪುಸ್ತಕವನ್ನು ಮುಚ್ಚಿ ಎದ್ದು ಅವನಿಗೆ ಮರ್ಯಾದೆಯನ್ನು ಮಾಡಿ, ಆಸನವನ್ನು ಕೊಟ್ಟು ಕುಳ್ಳಿರಿಸಿ, ತಾನೊಂದು ಕುರ್ಚಿಯಲ್ಲಿ ಕುಳಿತುಕೊಂಡನು.

ಈ ಹದಿನಾಲ್ಕು ವರ್ಷಗಳಲ್ಲಿ ಧನಕೋಟಿಯು ಮುಖದಲ್ಲಿ ಅನೇಕ ವ್ಯತ್ಯಾಸಗಳು ತೋರುತ್ತಲಿದ್ದುವು. ಆಗ ಅವನಿಗೆ ಮೂವತ್ತಾರು ವಯಸ್ಸು. ಈಗ ಐವತ್ತು ವಯಸ್ಸು, ಆಗ ಅವನ ಮುಖವು ಅರಳಿದ ಬಂಧೂಕದ ಪುಷ ದಂತೆ ಸಂತೋಷದಿಂದ ಕೆಚ್ಚನೆ ತೋರುತ್ತಲಿದ್ದಿತು, ಈಗ ಬಾಡಿಹೋಗಿ ಮನಸ್ಸಿನಲ್ಲಿದ್ದ ಚಿಂತೆಯನ್ನು ಸೂಚಿಸುತ್ತಲಿದ್ದಿತು ಅತಿ ಕೌತುಕದಿಂದ ಗುಮಾಸ್ತನು ನೋಡುತ್ತಿರಲು, ಧನಕೋಟಿಯು ಅಯ್ಯಾ! ತಾವೇನು ಇಷ್ಟುದೂರ ಬಿಜಯಮಾಡಿಸಿದುದು ಎಂದನು.

ಶ್ರೀಮಂತನಂದಕುಮಾರರು ಅಮರದೇಶದಲ್ಲಿ ಈ ತಿಂಗಳು ಸುಮಾರು ಮೂರು ಲಕ್ಷ ವರಹಗಳನ್ನು ಸಲ್ಲಿಸಬೇಕಾಗಿರುವುದರಿಂದ, ಹುಂಡಿಗಳನ್ನು ಜತೆಮಾಡಿ ನನ್ನಲ್ಲಿ ಕೊಟ್ಟಿದ್ದಾರೆ. ಈ ಹಣಗಳನ್ನು ನಿಮ್ಮಿಂದ ಪಡೆದು ಕೊಡತಕ್ಕವರಿಗೆಲ್ಲಾ ಸಕಾಲದಲ್ಲಿ ಕೊಡಹೇಳಿದ್ದಾರೆ ನೀವು ಗಡುವಿಗೆ ಸರಿಯಾಗಿ ಕೊಡದಿರಲಾರಿರಿ.

ಯಾವ ಯಾವ ಹುಂಡಿಗಳು ?

ಇಗೋ ಮೊದಲನೆಯದು ಬಂದಿಶಾಲೆಗಳ ಮೇಲ್ವಿಚಾರಕನಾದ ಭಾಸ್ಕರನ ಎರಡು ಲಕ್ಷ ವರಹಗಳ ಹುಂಡಿ ಎಂದು ಅದನ್ನು ಅವನ ಕಯ್ಯಲ್ಲಿ ಕೊಟ್ಟನು.

ಇದು ನಾನು ಕೊಡತಕ್ಕ ಹಣವೇ. ಇನ್ನಾವುದಾದರೂ ಉಂಟೋ ?

ಹೂಂ, ಇನ್ನೂ ಎಂಭತ್ತೇಳು ಸಾವಿರದ ಐದುನೂರು ವರಹಗಳಿಗೆ ಹುಂಡಿಗಳುಂಟು ಎಂದು ಅವುಗಳನ್ನೂ ಧನಕೋಟಿಯ ಕೈಗೆ ಕೊಟ್ಟನು. ಎರಡು ಲಕ್ಷವೂ ಎಂಭತ್ತೇಳು ಸಾವಿರದ ಐದುನೂರು ವರಹಗಳು ! ಎಂದು ಹೇಳಿ ಧನಕೋಟಿಯು ನಿಟ್ಟುಸಿರನ್ನು ಬಿಟ್ಟನು.

ಆಗ ಗುಮಾಸ್ತನು ಸ್ವಾಮೀ, ನಾನು ಕೇಳಿದ ಸಮಾಚಾರಗಳನ್ನು ನಿರ್ವಂಚನೆಯಾಗಿ ತಮಗೆ ತಿಳಿಸುವೆನು, ಕ್ಷಮಿಸಬೇಕು ಸಾಲಗಳನ್ನು ತೀರಿಸುವುದಕ್ಕೆ ಈಗ ತಮಗೆ ಶಕ್ತಿಸಾಲದೆಂದು ಊರೆಲ್ಲಾ ಹೇಳಿಕೊಳ್ಳುತ್ತಾರೆ. ಇದು ನಿಜವೋ ಎಂದನು.

ಈ ಕ್ರೂರವಾದ ಮಾತನ್ನು ಕೇಳಿ ಧನಕೋಟಿಯು ಸಂಕಟದಿಂದ ಅಪ್ಪಾ, ನಾನು ಕೊಡತಕ್ಕ ಹಣಗಳನ್ನು ಒಂದು ನಿಮಿಷವೂ ಸಾವಕಾಶವಿಲ್ಲದಂತೆ ಕೊಡುತಲಿದ್ದೇನೆ ಎಂದನು

ನಾನು ಅದನ್ನು ಬಲ್ಲೆನು , ಆದುದರಿಂದಲೇ ಈ ಹಣಗಳು ಖಂಡಿತವಾಗಿಯೂ ಸಕಾಲಕ್ಕೆ ಸಿಕ್ಕುವುವೆಂದು ತಮ್ಮಲ್ಲಿಗೆ ಬಂದೆನು.

ನಿರ್ವಂಚನೆಯಾಗಿ ಮಾಡಿದ ಪ್ರಶ್ನೆಗೆ ಖಂಡಿತವಾದ ಉತ್ತರವನ್ನೇ ಕೊಡಬೇಕು ; ನನ್ನ ಜಯಲಕ್ಷ್ಮಿಯು ಚೀನಾದೇಶದಿಂದ ಹೊರಟ ವರ್ತಮಾನ ಬಂದಿದೆ , ಅದು ಕೂಡಲೇ ಬರಬಹುದು. ಆಮೇಲೆ ಈ ಸಾಲವನ್ನೆಲ್ಲಾ ಸಲ್ಲಿಸಿಬಿಡುತ್ತೇನೆ.

" ಇಲ್ಲವಾದರೆ ? "　　" ಇಲ್ಲವಾದರೆ———. "

" ಏನು ? "

ಇಷ್ಟು ಕಠಿನವಾಗಿ ಕೇಳಿದ ಗುಮಾಸ್ತನು ಧನಕೋಟಿಯ ಭಾವವನ್ನು ನೋಡಿ ಕಣ್ಣಿನಲ್ಲಿ ನೀರ ತುಂಬಿಕೊಂಡನು. ಆದರೆ ಅವನು ಮುಖವನ್ನು ಒರೆಸಿಕೊಳ್ಳುವಸಂತೆ ಅದನ್ನೂ ಒರೆಸಿಕೊಂಡು, “ ಈ ಆಪತ್ಕಾಲದಲ್ಲಿ ತಮಗೆ ಆವ ಸಹಾಯಕನೂ ಇಲ್ಲವೋ ? ”

ಅಪ್ಪಾ ! ಹಣವಿರುವ ವರೆಗೇ ಸ್ನೇಹಿತರೂ ಬಂಧುಬಳಗಗಳೂ, ಅದು ಹೋದ ಮೇಲೆ ಯಾರೂ ಇಲ್ಲ.

ಹಾಗಾದರೆ ನಿಮ್ಮ ಹಡಗು ಬಂದರೆ ಹಣ , ಇಲ್ಲವಾದರೆ ಇಲ್ಲ ತಾನೇ ?

“ ಹೂಂ ”

ನಾನಿಲ್ಲಿಗೆ ಬರುವಾಗ ರೇವಿನಲ್ಲಿ ಒಂದು ಹಡಗಿದ್ದಿತು, ಅದು ತಮ್ಮದೋ ?

ಅದು ನನ್ನದಲ್ಲ, ಅದರ ಹೆಸರು ಗೋಲಕೊಂಡ ; ನನ್ನದು ಜಯಲಕ್ಷ್ಮಿ.

ಈ ವೇಳೆಗೆ ಸರಿಯಾಗಿ ಧನಕೋಟಿಯ ಮನೆಯ ಮುಂದೆ ವಿಪರೀತ ಗಲಭೆ ಯಾಯಿತು. ಅದೇನೆಂದು ನೋಡಲೋಸುಗ ಧನಕೋಟಿಯು ಎದ್ದು ಬಾಗಿಲನ್ನು ತೆರೆಯಲು ಅವನ ಮಗಳು ರತ್ನಾಂಬೆಯು ಅಳುತ್ತಾ ಬಂದು “ ಅಪ್ಪಾ ! ನಮ್ಮ ಜಯ ಲಕ್ಷ್ಮಿಯು ಮುಳುಗಿಹೋಯಿತಂತೆ ” ಎಂದಳು.

ಅಮ್ಮಾ ! ನಾವಿಕರೋ ?

ಅವರೆಲ್ಲರೂ ಸೌಖ್ಯವಾಗಿ ಬಂದು ಊರನ್ನು ಸೇರಿದರು.

ನನ್ನ ಪಾಪದಿಂದ ಹಡಗು ಹೋದರೂ ಚಿಂತೆಯಿಲ್ಲ ; ದೇವರ ದಯೆಯಿಂದ ಅವರೆಲ್ಲರೂ ಬದುಕಿಬಂದರಲ್ಲ, ಅಷ್ಟೇ ಸಾಕು ಎಂದು ದೇವರಿಗೆ ವಂದನೆಮಾಡಿ ದನು. ಅಷ್ಟರಲ್ಲಿಯೇ ಅವನ ಹೆಂಡತಿಯು ಅಳುತ್ತ ಬಂದಳು ; ಮನೋಮೋಹ ನನೂ ಅವಳ ಹಿಂದೆ ತಲೆಯನ್ನು ಬಗ್ಗಿಸಿಕೊಂಡು ಬಂದನು. ಅವರ ಹಿಂದೆ ಜಯ ಲಕ್ಷ್ಮಿಯ ನಾವಿಕರೆಲ್ಲರೂ ಬಂದು ಬಾಗಿಲಿನಲ್ಲಿ ನಿಂತರು. ಅವರನ್ನು ನೋಡಿ ನಂದ ಕುಮಾರನ ಗುಮಾಸ್ತನು ಸ್ವಲ್ಪ ಬೆಚ್ಚಿ ತಾನು ಕುಳಿತಿದ್ದ ಕುರ್ಚಿಯನ್ನು ಬಿಟ್ಟು ಮತ್ತೊಂದು ಕುರ್ಚಿಯಲ್ಲಿ ಕುಳಿತುಕೊಂಡನು.

ಧನಕೋಟಿಯು ನಾವಿಕರನ್ನು ನೋಡಿ, ಏನು ಸಮಾಚಾರ ಎಂದು ಕೇಳಲು, ದಾಶನೆಂಬ ಮುಖ್ಯನಾವಿಕನು ಯಜಮಾನನಿಗೆ ಅಡ್ಡಬಿದ್ದು, ಮಹಾಸ್ವಾಮೀ !

ಇನ್ನೇನು ನಾಲ್ಕು ದಿವಸಗಳಲ್ಲಿ ಊರನ್ನು ಸೇರಬಹುದೆಂದು ಇದ್ದೆವು. ಆಗ ಬಿರು ಗಾಳಿಯೆದ್ದು ಸಮುದ್ರವು ಉಲ್ಲೋಲಕಲ್ಲೋಲವಾಯಿತು. ಗುಡುಗು ಸಿಡಿಲು ಮಳೆ ವಿಪರೀತವಾಯಿತು. ಗಾಳಿಯು ಜಯಲಕ್ಷ್ಮಿಯನ್ನು ಒಂದು ಬಂಡೆಗೆ ತಾಟಿಸಿತು. ಅದು ಬಿರುಕುಬಿಟ್ಟಿತು ಅದರಿಂದ ಒಳಗೆ ನೀರು ನುಗ್ಗಿ ನಾವು ಹೊರಗೆ ಬರುವುದೇ ಪ್ರಯಾಸವಾಯಿತು. ಅಷ್ಟರಲ್ಲಿಯೇ ದೈವಾನುಗ್ರಹದಿಂದ ಗೋಲಕೊಂಡವೆಂಬ ಹಡಗು ಅದೇ ದಾರಿಯಲ್ಲಿ ಬರಲು, ಅದರಲ್ಲಿ ನಾವು ಹತ್ತಿಕೊಂಡು ಒಂದೆವು. ಜಯ ಲಕ್ಷ್ಮಿಯೂ ಸರಕುಗಳೂ ಅನ್ಯಾಯವಾಗಿ ಸಮುದ್ರದ ಪಾಲಾದುವು ಎಂದನು.

ಅದನ್ನು ಕೇಳಿ ಧನಕೋಟಿಯು ಎಲೋ, ದಾಶ! ಹಡಗೂ ಸರಕುಗಳೂ ಹೋದರೆ ಅವುಗಳನ್ನು ಪುನಃ ಸಂಪಾದಿಸಬಹುದು; ಮನುಷ್ಯರು ಹೋದರೆ ಪುನಃ ಬರಲಾರರು ಇಷ್ಟರಮಟ್ಟಿಗೆ ದೇವರು ನಿಮ್ಮನ್ನು ಕಾಪಿಟ್ಟುದಕ್ಕಾಗಿ ಅವನನ್ನು ಎಷ್ಟು ಕೊಂಡಾಡಿದರೂ ತೀರದು ಎಂದು ಹೇಳಿ ಶುಕ್ರಾಚಾರಿಯನ್ನು ಕರೆದು ಇವ ರಿಗೆ ಕೊಡಬೇಕಾದ ಸಂಬಳಗಳನ್ನು ಸಲ್ಲಿಸಿಬಿಡು, ಬೇರೆ ಎಲ್ಲಿಯಾದರೂ ಇವರು ಚಾಕರಿಗೆ ಸೇರಿಕೊಳ್ಳಲಿ ಎಂದನು.

ದಾಶನು ನಮ್ಮ ಮೇಲೆ ಮಹಾಸ್ವಾಮಿಯವರಿಗೆ ಕೋಪವೇನೋ ಎನ್ನಲು, ಧನ ಕೋಟಿಯು ಅಪ್ಪಾ! ನನಗೆ ಕೋಪವಿಲ್ಲ; ದೈವಗತಿಗೆ ನೀವೇನ ಮಾಡುವಿರಿ? ನನ್ನಲ್ಲಿ ಯಾವ ಹಡಗೂ ಇಲ್ಲವಾದುದರಿಂದ ನಾನು ಹಾಗೆ ಹೇಳಿದೆ ಎಂದನು.

ಈಗ ಹಡಗಿಲ್ಲದಿದ್ದರೆ ತಾವು ಬೇರೆ ಹಡಗನ್ನು ಕಟ್ಟುವ ವರೆಗೆ ಕಾದಿರುವೆವು.

ಅಪ್ಪಾ! ಕಟ್ಟಲು ಹಣವಿಲ್ಲ; ಒಳ್ಳೆಯ ಕಾಲ ಬಂದಾಗ ನೋಡೋಣ ಎಂದು ಹೇಳಿ, ಮನೋಮೋಹನನಿಗೆ ಸಂಜ್ಞೆಮಾಡಲು ಅವನು ಅವರನ್ನು ಕರೆದುಕೊಂಡು ಹೋದನು.

ಆಗ ಧನಕೋಟಿಯು ಹೆಂಡಿತಿಯನ್ನೂ ಮಗಳನ್ನೂ ಹೊರಕ್ಕೆ ಕಳುಹಿಸಿ, ನಂದ ಕುಮಾರನ ಗುಮಾಸ್ತನ ಕಡೆ ತಿರುಗಿ ಅಯ್ಯಾ! ತಾವು ಎಲ್ಲವನ್ನೂ ಕೇಳುತ್ತಲಿದ್ದಿ ರಷ್ಟೆ ಎಂದನು.

ಇದು ಬಹು ಅನ್ಯಾಯ; ಈ ಹಣಗಳನ್ನು ಕೊಡಲು ತಮಗೆ ವ್ಯವಧಾನ ಬೇಕಾಗಿದ್ದರೆ ನಾನು ಕೊಡುವೆನು.

ನಿಮ್ಮ ಯಜಮಾನರ ಅಪ್ಪಣೆಯಿಲ್ಲದೆ ವ್ಯವಧಾನವನ್ನು ಕೊಡುವುದಕ್ಕೆ ಆಗುತ್ತದೆಯೇ?

ನಮ್ಮ ಯಜಮಾನರು ನನಗೆ ಸರ್ವಸ್ವಾತಂತ್ರ್ಯವನ್ನೂ ಕೊಟ್ಟಿರುವರು.

ವ್ಯವಧಾನವನ್ನು ಕೊಟ್ಟರೆ ಹೇಗಾದರೂ ಪ್ರಯತ್ನಮಾಡಿ ಸಾಲವನ್ನು ತೀರಿಸಿ ಮಾನವನ್ನು ಉಳಿಸಿಕೊಳ್ಳುವೆನು.

ಎಷ್ಟು ತಿಂಗಳು ಬೇಕು?

ಎರಡು ತಿಂಗಳಾದರೆ ಸಾಕು

ಮೂರು ತಿಂಗಳು ತೆಗೆದುಕೊಳ್ಳೋಣವಾಗಲಿ. ಇಂದು ಭಾದ್ರಪದಶುದ್ಧ ಪಂಚಮಿ, ಈಗ ಹನ್ನೊಂದು ಘಂಟೆ, ನಾಳೆಯು ಮಾರ್ಗಶಿರಶುದ್ಧ ಪಂಚಮಿಯ ದಿನ ಬೆಳಿಗ್ಗೆ ಹನ್ನೊಂದು ಘಂಟೆಗೆ ಸರಿಯಾಗಿ ಬರುವೆನು; ಆವೇಳೆಗೆ ತಾವು ಹಣವನ್ನು ಸಿದ್ಧಪಡಿಸಿ ಕೊಂಡಿರಬಹುದು ಎಂದನು.

ಆ ದಿನ ಖಂಡಿತವಾಗಿಯೂ ತಮಗೆ ಹಣವನ್ನು ಕೊಡುತ್ತೇನೆ; ಇಲ್ಲವಾದರೆ ಪ್ರಾಣವನ್ನು ಬಿಡುತ್ತೇನೆ ಎಂದು ಹೇಳಿದ ಧನಕೋಟಿಯ ಮಾತಿನ ಉತ್ತರಾರ್ಧವು ಗುಮಾಸ್ತನಿಗೆ ಕೇಳಿಸಿತೋ ಇಲ್ಲವೋ ತಿಳಿಯದು; ಅವನೇನೋ ಕೇಳದವನಂತೆ ಹೊರಟನು. ಅವನು ಮೆಟ್ಟಿಲುಗಳನ್ನು ಇಳಿದು ಕೆಳಕ್ಕೆ ಬರುತ್ತಲಿರುವಾಗ ಅಲ್ಲಿ ನಿಂತಿದ್ದ ರತ್ನಾಂಬೆಯು ಎರಡು ಕೈಗಳನ್ನೂ ಜೋಡಿಸಿಕೊಂಡು ಸ್ವಾಮೀ, ಎಂದು ಏನನ್ನೋ ಹೇಳಲು ಪ್ರಾರಂಭಿಸಿದಳು, ಮಾತೇ ಹೊರಡಲಿಲ್ಲ ನಂದಕುಮಾರನ ಗುಮಾಸ್ತನು ಅವಳ ಇಂಗಿತವನ್ನು ತಿಳಿದಂತೆ ನಟಿಸಿ, ಅಮ್ಮಾ! ಒಂದಾನೊಂದು ದಿನ ನಾವಿಕ ಸೈಂಧವನೆಂಬವನಿಂದ ಒಂದು ಲೇಖನವು ನಿನ್ನ ಹೆಸರಿಗೆ ಬರುವುದು, ಅದರಲ್ಲಿ ಹೇಳುವಂತೆ ಲೇಶವೂ ತಪ್ಪದೆ, ಸಾವಕಾಶಮಾಡದೆ, ನಿರ್ಭಯಳಾಗಿ ನೀನು ನಡೆದುಕೊಂಡರೆ ದೇವರು ನಿನ್ನ ತಂದೆಗೆ ಒಳ್ಳೆಯದನ್ನು ಮಾಡುವನು ಎಂದನು.

ಹಾಗೆಯೇ ಆಗಲಿ “ಆರೀತಿ ನಡೆಯುತ್ತೇನೆಂದು ಪ್ರಮಾಣಮಾಡಿ ಕೊಡು” ಆರೀತಿ ಪ್ರಮಾಣಮಾಡಿಕೊಟ್ಟ ಒಳಿಕ, ಅದು ಸರಿ; ಈಗ ನಾನು ಹೋಗಿ ಬರುವೆನು. ಈಗಿರುವಂತೆಯೇ ಸನ್ಮಾರ್ಗದಲ್ಲಿ ಮುಂದೆಯೂ ಇದ್ದರೆ ನೀನು

ವರಿಸಿರುವ ಮನೋವಮೋಹನನೊಂದಿಗೆ ಸುಖವಾಗಿ ಬಾಳುವೆ ಎಂದು ಹೊರಟು ಹೋದನು.

ತನ್ನ ಪ್ರಿಯನ ಹೆಸರನ್ನು ಗುಮಾಸ್ತನು ಹೇಳಿದುದನ್ನು ಕೇಳಿ ರತ್ನಾಂಬೆಯು ಪರಮಾಶ್ಚರ್ಯಪಟ್ಟು, ನಾಚಿಕೆಯಿಂದ ಅಲ್ಲಿ ನಿಲ್ಲದೆ ಮನೆಯ ಒಳಕ್ಕೆ ಹೋದಳು ಮಹಡಿಯಿಂದ ಇಳಿದು ಹೊರಗೆ ಬಂದಾಗ ಅಂಗದೇಶೀಯನು ನಾವಿಕದಾಶನನ್ನು ನೋಡಿ ಅಪ್ಪಾ ದಾಶ! ನಿನ್ನ ಸಂಗಡ ನಾನು ಕೆಲವು ಮಾತುಗಳನ್ನಾಡಬೇಕಾಗಿದೆ, ಬಾ ಎಂದು ಅವನನ್ನು ಕರೆದುಕೊಂಡು ಹೋದನು

---

## ಇಪ್ಪತ್ತೈದನೆಯ ಅಧ್ಯಾಯ

### ಮಾರ್ಗಶಿರ ಶುದ್ಧ ಪಂಚಮಿ.

ನಂದಕುಮಾರನ ಗುಮಾಸ್ತನು ತನಗೆ ತೋರಿಸಿದ ದಾಕ್ಷಿಣ್ಯಕ್ಕಾಗಿ ಧನಕೋಟಿಯು ಆಶ್ಚರ್ಯಪಟ್ಟು, 'ಹೀಗಾದುದು ನನಗೆ ಅನುಕೂಲವೋ ಪ್ರತಿಕೂಲವೋ! ಹೇಗಾದರೂ ಆಗಲಿ, ವ್ಯವಧಾನಕೊಟ್ಟುದಕ್ಕಾಗಿ ಇವನಿಗೆ ನಾನು ಕೃತಜ್ಞನಾಗಿರಬೇಕು. ನನ್ನ ಸಾಲಗಳಲ್ಲಿ ಇವನಿಗೆ ಕೊಡಬೇಕಾದುದೇ ದೊಡ್ಡದು, ಇದನ್ನು ತೀರಿಸುವುದಕ್ಕೆ ಮೂರು ತಿಂಗಳ ಕಾಲವಿದೆ, ಅಷ್ಟರಲ್ಲಿ ಇತರಕಡೆ ಸಾಲಮಾಡಿ ಇದನ್ನು ತೀರಿಸಿ, ನನಗೆ ಬರುತ್ತಲಿರುವ ಹಣಗಳಿಂದ ಮಿಕ್ಕ ಸಾಲಗಳನ್ನು ತೀರಿಸಿಬಿಡುವೆನು" ಎಂದು ಸಂತೋಷವಾಗಿದ್ದನು

ಭಾದ್ರಪದಮಾಸದಲ್ಲಿಯೇ ಧನಕೋಟಿಯು ದಿವಾಳಿಯಾಗುವನೆಂದು ತಿಳಿದಿದ್ದವರೆಲ್ಲರೂ ಆ ತಿಂಗಳು ತಮಗೆ ಬರತಕ್ಕ ಹಣಗಳನ್ನು ಗಡುವಿಗೆ ಸರಿಯಾಗಿ ಅವನು ಕೊಟ್ಟುದರಿಂದ ಆಶ್ಚರ್ಯಪಟ್ಟು, ಹೇಗೂ ಆಶ್ವಯುಜದಲ್ಲಿ ಅವನ ಪರಿಣಾಮವು ಪ್ರಕಟವಾಗುವುದು ಎಂದು ನಿಶ್ಚಯಿಸಿದರು ಆಶ್ವಯುಜವೂ ಕಳೆಯಿತು. ಖಂಡಿತವಾಗಿಯೂ ಇನ್ನೊಂದು ತಿಂಗಳಲ್ಲಿ ಅವನ ಸಂಗತಿಯು ಗೊತ್ತಾಗುವುದೆಂದಿದ್ದರು. ಆ ತಿಂಗಳೂ ಆಯಿತು. ಈಮಧ್ಯೆ ಧನಕೋಟಿಯು ಕೈಸಾಲಗಳನ್ನು ತೆಗೆಯಲು ಪ್ರಯತ್ನಪಟ್ಟನು; ಅವನಿಗೆ ಆಪ್ತರಾದವರೇ ಅವನನ್ನು ನಂಬದೆ ಹೋದರು.

ತನ್ನ ಬಳಿ ಕೆಲಸಮಾಡುತ್ತಲಿದ್ದು, ತನ್ನಿಂದ ಮುಂದಕ್ಕೆ ಬಂದು ಈಗ ಅಮರ ಪುರದಲ್ಲಿ ದೊಡ್ಡ ಧನಗಾರಾಧ್ಯಕ್ಷನಾಗಿರುವ ದುರ್ಮತಿಯನ್ನು ಕೇಳಿದರೆ ತನಗೆ ಬೇಕಾದಷ್ಟು ಸಾಲವನ್ನು ಕೊಡದೆ ಇರನು; ಕೊಡದಿದ್ದರೂ ಸಾಕ್ಸಹಾಯವನ್ನಾದರೂ ಮಾಡದೆ ಇರನು. ಅಷ್ಟುಮಟ್ಟಿಗೆ ಅವನು ಮಾಡಿದರೆ ಈಗ ಬಂದಿರುವ ವಿಪತ್ತನ್ನು ನಿವಾರಣಮಾಡಿಕೊಂಡು ಮುಂದೆ ಚೇತರಿಸಿಕೊಳ್ಳಬಹುದು ಎಂದು ಧನಕೋಟಿಯು ಯೋಚಿಸಿ, ಅವನ ಬಳಿಗೆ ಹೋಗಲು ತನಗೆ ಇಷ್ಟವಿಲ್ಲದಿದ್ದರೂ, ಇತರಕಡೆ ಎಲ್ಲಿಯೂ ಸಾಲ ದೊರೆಯದೆ ಇದ್ದುದರಿಂದ ಯತ್ನವಿಲ್ಲದೆ ಕಾರ್ತೀಕಮಾಸದ ಕೊನೆಯಲ್ಲಿ ಅಮರ ಪುರಕ್ಕೆ ಹೋಗಿದ್ದು ಮಾರ್ಗಶಿರಶುದ್ಧತದಿಗೆಯ ದಿನ ಅಲ್ಲಿಂದ ಹಿಂತಿರುಗಿ ಬಂದನು.

ದುರ್ಮತಿಯು ತನ್ನನ್ನು ನೋಡದೆಯೂ ಪುರಸ್ಕರಿಸದೆಯೂ ಅವ ಸಾಹಾಯ್ಯವನ್ನೂ ಮಾಡದೆಯೂ ಹೋದುದನ್ನು ಧನಕೋಟಿಯು ಆರಿಗೂ ತಿಳಿಸದಿದ್ದರೂ, ಹೆಂಡಿತಿಯೂ ಮಗಳೂ ಅವನ ಮುಖಭಾವದಿಂದ ಅದನ್ನು ತಿಳಿದುಕೊಂಡರು. ಇನ್ನು ಏನು ಗತಿಯೆಂದು ಅವರಿಬ್ಬರೂ ಮನೋಮೋಹನನ ಸಂಗಡ ಆಲೋಚಿಸಿ, ಸೈನ್ಯದಲ್ಲಿ ಸೇರಿ ಸಮೀಪದ ಒಂದು ದುರ್ಗದಲ್ಲಿ ಪಾಳೆಯವಿದ್ದ ಮಗ ಜಯವೀರನನ್ನು ಕರೆಸಿಕೊಳ್ಳುವುದು ಒಳ್ಳೆಯದೆಂದು ತಿಳಿದು, ರತ್ನಾಂಬೆಯು ಅವನಿಗೆ ಒಂದು ಕಾಗದವನ್ನು ಬರೆದಳು.

ಧನಕೋಟಿಯು ಸಾಧಾರಣವಾಗಿ ತನ್ನ ಕೊಟ್ಟಡಿಯಲ್ಲಿಯೇ ಇರುತ್ತಿದ್ದನು. ಊಟಮಾಡುವಾಗ ಆಗಲಿ ಮಾತುಕಥೆಗಳನ್ನಾಡುವಾಗ ಆಗಲಿ ಅವನು ತನ್ನ ಕ್ಲೇಶವನ್ನು ಆರಿಗೂ ಎಳ್ಳಷ್ಟಾದರೂ ತೋರ್ಪಡಿಸದೆ ಶಾಂತವಾಗಿರುವಂತಿದ್ದನು. ಅದನ್ನು ನೋಡಿ ಒಳಗೆ ಕುದಿಯುತ್ತಲಿರುವ ಜ್ವಾಲಾಮುಖಿಯೆಂದು ಹೆದರಿ ಹೆಂಡಿತಿಯೂ ಮಗಳೂ ಆದಿನ ರಾತ್ರಿಯೆಲ್ಲಾ ಅವನ ಕೊಟ್ಟಡಿಯ ಬಾಗಿಲ ಬೀಗದಕೈ ಸಂದಿನಲ್ಲಿ ಆಗಾಗ ಇಣಿಕಿನೋಡುತ್ತಲಿದ್ದರು. ಅಪ್ಪಾಜಿಯವರು ಏನನ್ನೋ ಬರೆಯುತ್ತಲಿದ್ದಾರೆಂದು ತಾಯಿಗೆ ಮಗಳು ತಿಳಿಸಲು, ಅವಳು ಇಣಿಕಿನೋಡಿ ಛಾಪಾಕಾಗದ ಬರೆಯುತ್ತಿರುವುದನ್ನು ಕಂಡು, ಓಹೋ! ಮರಣಶಾಸನವನ್ನು ಬರೆಯುತ್ತಲಿದಾರೆ ಎಂದು ಊಹಿಸಿದಳಲ್ಲದೆ ಅದೇನೆಂಬುದನ್ನು ಕೇಳಿ ತಿಳಿಯಲು ಧೈರ್ಯವಿರಲಿಲ್ಲ. ಚೌತಿಯ ದಿನ ರಾತ್ರಿಯೆಲ್ಲಾ ಧನಕೋಟಿಯು ಮಲಗದೆ, ತನ್ನ ಕೊಟ್ಟಡಿಯಲ್ಲಿ ಶತಪಥಮಾಡುತ್ತ

ಲಿದ್ದು, ಅರುಣೋದಯಸಮಯದಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡನು. ಬೆಳಗಾದ ಮೇಲೆ ಎಂದಿನಂತೆ ಎದ್ದು ಕೆಳಗಿಳಿದು ಬಂದಾಗ, ರಾತ್ರಿ ಅವನು ನಿದ್ದೆಮಾಡದೆ ಇದ್ದುದೂ, ಅವನಿಗಿದ್ದ ಪ್ರಬಲತರವಾದ ಚಿಂತೆಯೂ ಅವನ ಮುಖದಲ್ಲಿ ಕಾಣಬರುತ್ತ ಲಿದ್ದುವು.

ಧನಕೋಟಿಯು ಎಂದೂ ಇಲ್ಲದ ಅಭಿಮಾನದಿಂದ ಮಗಳನ್ನು ನೋಡಿ ಅಮ್ಮಾ! ನೀನು ನಿಜವಾಗಿಯೂ ರತ್ನವೇ ಸರಿ, ನೀನು ಸುಖವಾಗಿ ನಿನ್ನ ತಾಯಿಯ ಸಂಗಡ ಬಾಳು ಎಂದು ಹರಸಿ ಹೊರಟನು.

ಆಗ ರತ್ನಾಂಬೆಯು ಅಪ್ಪಾ! ಇದೇನು ಎಂದೂ ಆಡದ ಮಾತನ್ನು ಈ ದಿನ ಆಡುವೆ ಎಂದು ಕೇಳಲು, ಮಗು! ನಿನ್ನ ನಲ್ಮೆಗಾಗಿ ಹೇಳಿದೆ ಎಂದು ತನ್ನ ಕೊಟ್ಟ ಡಿಗೆ ಹೋಗಿ ಬಾಗಿಲನ್ನು ಮುಚ್ಚಿಕೊಂಡನು ತಾಯಿಯು ಕಂಬನಿಯನ್ನು ಸುರಿ ಸುತ್ತ ತನ್ನ ಕಿರುಮನೆಗೆ ಹೋದಳು. ತಂದೆಯ ಅಭಿಪ್ರಾಯವು ತಿಳಿಯದೆ ರತ್ನಾಂ ಬೆಯು ಸ್ತಂಭೀಭೂತಳಾಗಿ ನಿಂತಿದ್ದಳು. ಯಾರೋ ಹಿಂದುಗಡೆಯಿಂದ ಬರುವುದನ್ನು ಕಂಡು ತನ್ನ ಅಣ್ಣನು ಬಂದಿರಬಹುದೆಂದು ಊಹಿಸಿ ಅಣ್ಣಯ್ಯಾ ಬಂದೆಯೋ, ಎಂದಳು ಕೂಡಲೆ ತಾಯಿಯೂ ಓಡಿಬಂದಳು.

ಜಯವೀರನು ತಾಯಿಯನ್ನು ನೋಡಿ ಅಮ್ಮಾ! ಅಪ್ಪಾಜಿಯವರು ಸ್ವಸ್ಥವಾಗಿ ದಾರೆಯೋ? ರತ್ನ ಬರೆದ ಕಾಗದದಿಂದ ನನಗೆ ಬಲು ಗಾಬರಿಯಾಗಿ ಓಡಿಬಂದೆನು. ಸಮಾಚಾರವೇನು ಎಂದು ಕೇಳಲು, ಅಪ್ಪಾ! ನಿನ್ನ ತಂದೆಯವರು ಸ್ವಸ್ಥವಾಗಿದಾರೆ. ಆದರೆ ಅನೇಕ ನಷ್ಟಗಳು ಸಂಭವಿಸಿ ಬಹು ಚಿಂತೆಪಡುತ್ತಲಿದಾರೆ ನಮಗೆ ಆವ ಸಮಾಚಾರವೂ ತಿಳಿಯದು, ಪ್ರಬಲವಾದ ದುರ್ದಶೆಯೇನೋ ಪ್ರಾಪ್ತವಾಗಿರುವಂತಿದೆ. ಅವರನ್ನೇ ಕೇಳಿದರೆ ಎಲ್ಲವೂ ತಿಳಿಯುವುದು. ರತ್ನಾಂಬೆ! ಅಣ್ಣ ಬಂದಿರುವನೆಂದು ನಿನ್ನ ಅಪ್ಪಾಜಿಯವರಿಗೆ ತಿಳಿಸು ಎಂದಳು.

ಅವಳು ಮಹಡಿಯ ಬಾಗಿಲ ಬಳಿಗೆ ಹೋಗುವುದರೊಳಗಾಗಿಯೇ ಅಲ್ಲಿ ಆವ ನೋ ಒಬ್ಬನು ಕಯ್ಯಲ್ಲಿ ಒಂದು ಕಾಗದವನ್ನು ಹಿಡಿದುಕೊಂಡು ರತ್ನಾಂಬೆಯೆಂಬವರು ತಾವೇಯೋ ಎಂದು ವಿಚಾರಿಸಿದನು ಅವಳು “ಅಹುದು, ಏಕೆ?” ಎಂದು ಕೇಳಲು

ಆ ಕಾಗದವನ್ನು ಅವಳ ಕೈಯಲ್ಲಿ ಕೊಟ್ಟು ಇದನ್ನು ಓದಿ ನೋಡಿ ಎಂದನು. ಆ ಕಾಗದದಲ್ಲಿ ಈರೀತಿ ಬರೆದಿದ್ದಿತು.

ತಾಯಿ! ಕಾಳಿಕಾದೇವಾಲಯದ ಬೀದಿಯಲ್ಲಿರುವ ನಾಲ್ಕು ಮಹಡಿಯ ಮನೆಗೆ ಈಕ್ಷಣ ನೀನು ಒಬ್ಬಳೇ ಹೋಗಿ ನಾಲ್ಕನೇ ಮಹಡಿಯ ಕೊಟ್ಟಡಿಯ ಬೀಗದ ಕೈಯನ್ನು ಕಾವಲುಗಾರನಿಂದ ತೆಗೆದುಕೊಂಡು, ಉತ್ತರಪಾರ್ಶ್ವದ ಮೂಲೆಯ ಹಲಗೆಯ ಮೇಲೆ ಇಟ್ಟಿರುವ ಪೆಟ್ಟಿಯ ಚೀಲವನ್ನು ತಂದು ಒಡನೆಯೇ ನಿನ್ನ ತಂದೆಯ ಕೈಯಲ್ಲಿ ಕೊಡು ಹನ್ನೊಂದು ಗಂಟೆಯೊಳಗಾಗಿ ಆ ಚೀಲವು ಅವನ ಕೈಸೇರದಿದ್ದರೆ ಅನಾಹುತಗಳು ಸಂಭವಿಸುವುವು. ನಾನು ಹೇಳಿದಂತೆ ನೀನು ಮಾಡುವುದಾಗಿ ಅಂಗೀಕಾರಮಾಡಿ ಪ್ರತಿಜ್ಞೆಮಾಡಿಕೊಟ್ಟಿದ್ದುದನ್ನು ಜ್ಞಾಪಿಸಿಕೊಂಡು ಲೇಶವೂ ಸಾವಕಾಶವಿಲ್ಲದೆ ಈ ಕೆಲಸವನ್ನು ನೀನೇ ಮಾಡಬೇಕೆಂದು ಕೋರುವ,

ನಾವಿಕ ಸೈಂಧವ.

ಅದನ್ನು ಓದಿ ನೋಡಿದ ಕೂಡಲೆ ತಂದೆಗೆ ಹೇಗೋ ಅನುಕೂಲವುಂಟಾಗುವುದೆಂಬ ಸಂತೋಷವು ಅವಳಿಗೆ ಉಂಟಾಗಿ, ಸಮಾಚಾರವನ್ನು ಚೆನ್ನಾಗಿ ತಿಳಿಯಬೇಕೆಂದು ಕಾಗದ ತಂದವನನ್ನು ನೋಡಿದಳು, ಅವನು ಆವಾಗಲೇ ಹೊರಟುಹೋಗಿದ್ದನು. ಕಾಗದವನ್ನು ಪುನಃ ಓದಿದಳು, ಆಗ ಮೊದಲು ನೋಡದೆ ಇದ್ದ ಈ ಅನುಲೇಖನವು ಕಣ್ಣಿಗೆ ಬಿದ್ದಿತು. ಅದೇನೆಂದರೆ

ನಾನು ಮೇಲೆ ಬರದಿರುವಂತೆ ಈ ಕೆಲಸವನ್ನು ನೀನೊಬ್ಬಳೇ ಹೋಗಿ ಮಾಡಬೇಕು. ಜತೆಯಲ್ಲಿ ಆರನ್ನಾದರೂ ಕರೆದುಕೊಂಡು ಹೋದರೂ, ನಿನಗೆ ಬದಲಾಗಿ ಬೇರೆ ಯಾರನ್ನಾದರೂ ಕಳುಹಿಸಿದರೂ, ಕಾವಲುಗಾರನು ಆ ಮಹಡಿಯ ಬೀಗದ ಕೈಯನ್ನು ಕೊಡನು

ಅದನ್ನು ಓದುತ್ತಲೆ ಅವಳ ಸಂತೋಷವು ಸ್ವಲ್ಪ ಕಡಿಮೆಯಾಗಿ, ಈ ಸೈಂಧವನಾರೋ ಗೊತ್ತಿಲ್ಲ, ಇವನು ಹೇಳುವಂತೆ ನಾನೊಬ್ಬಳೇ ಹೋಗುವುದು ಅನುಚಿತ, ಏನಮಾಡಲಿ ಎಂದು ಸ್ವಲ್ಪ ಯೋಚಿಸಿ, ಮನೋಮೋಹನನ ಬಳಿಗೆ ಓಡಿಹೋಗಿ, ಅವನ ಕೈಯಲ್ಲಿ ಆಕಾಗದವನ್ನುಕೊಟ್ಟು, ತಾನು ಮಾಡಿದ್ದ ವಾಗ್ದಾನವನ್ನೂ ತಿಳಿಸಿದಳು. ಅವನು ಅದನ್ನು ಓದಿನೋಡಿ ನೀನೇ ಹೋಗಿ ಬರಬೇಕು ಎಂದನು.

ಒಬ್ಬಳೇ ಹೋಗುವುದು ಉಚಿತವೋ ?

ನಾನೂ ಜತೆಯಲ್ಲಿ ಬರುವೆನು

ನೀವು ಬಂದರೆ ಕೇಡವಾಗದು ಎಂದು ಆ ಕಾಗದದಲ್ಲಿ ಬರೆದು ಇದೆಯಲ್ಲಾ ?

ನಾನು ನಿನ್ನ ಕೂಡ ಬಂದರೂ ಆ ಮನೆಯ ಸಮೀಪದಲ್ಲಿ ಒಂದು ಕಡೆ ಮರೆಯಾಗಿ ನಿಂತಿರುವೆನು ಧೈರ್ಯವಾಗಿ ಹೋಗು

ರತ್ನಾಂಬೆಯು ಆದರೂ ಅನುಮಾನಿಸಿದಳು ಆಗ ಮನೋಮೋಹನನು ಅವಳನ್ನು ನೋಡಿ ಇಗೋ, ಇಂದು ಮಾರ್ಗಶಿರಶುದ್ಧಪಂಚಮಿ , ಈಗ ಹತ್ತು ಗಂಟೆ ; ಇನ್ನೊಂದು ಗಂಟೆಯಲ್ಲಿ ನಿನ್ನ ತಂದೆಯು ಸುಮಾರು ಮೂರು ಲಕ್ಷ ವರಹಗಳನ್ನು ಜತೆ ಮಾಡಿ ಕೊಡಬೇಕು ಈಗ ಅವನಲ್ಲಿ ಒಂದು ಕಾಸೂ ಇಲ್ಲ ಇನ್ನೊಂದು ಗಂಟೆಯಲ್ಲಿ ಅವನಿಗೆ ಯಾರೂ ಸಾಹಾಯ್ಯಮಾಡದಿದ್ದರೆ ಅವನ ಮಾನವು ಹೋಗುವುದಲ್ಲದೆ ಪ್ರಾಣವೂ ಹೋಗಬಹುದು ಈ ನಾವಿಕಸೈಂಧವನು ಸಂದಕುಮಾರನ ಗುಮಾಸ್ತನೇ ಹೊರತು ಮತ್ತಾರೂ ಅಲ್ಲ ಅವನ ಇಂಗಿತವನ್ನು ನಾನು ಸುಮಾರಾಗಿ ಬಲ್ಲೆ. ಈ ಕಾಗದವನ್ನು ನೋಡಿದರೆ ಈ ಸೈಂಧವನನ್ನು ದೇವರೇ ನಿನ್ನ ತಂದೆಯ ಸಾಹಾಯ್ಯಕ್ಕಾಗಿ ಕಳುಹಿಸಿರುವಂತೆ ತೋರುತ್ತಲಿದೆ ನಿನಗೆ ಆರಿಂದಲೂ ಅವತೊಂದರೆಯೂ ಬಾರದಂತೆ ನಾನು ನೋಡಿಕೊಳ್ಳುವೆನು ಎಂದನು. ಹಾಗಾದರೆ ಸರಿ ಎಂದು ಹೇಳಿ ರತ್ನಾಂಬೆಯು ಮನೋಮೋಹನನ ಜತೆಯಲ್ಲಿ ಕಾಳಿಯ ಗುಡಿಯ ಬೀದಿಗೆ ಹೊರಟಳು.

ಅವರತ್ತ ಹೋಗುತಲೇ ಇತ್ತ ಜಯವೀರನು ತಾಯಿಯಿಂದ ಕೆಲವು ಸಮಾಚಾರಗಳನ್ನು ತಿಳಿದು, ತಂದೆಯನ್ನು ನೋಡಲು ಹೊರಟನು. ಕೊಟ್ಟಡಿ ಬಾಗಿಲನ್ನು ತೆರೆದು ಒಳಕ್ಕೆ ತಲೆ ಹಾಕುತ್ತಲೇ, ಧನಕೋಟಿಯು ತನ್ನ ಕೈಯಲ್ಲಿದ್ದುದನ್ನು ಮರೆಮಾಡಿಕೊಂಡನು. ಅದನ್ನು ಕಂಡು ಜಯವೀರನು ಅಪ್ಪಾ, ಇದೇನು ! ಪಿಸ್ತೂಲುಗಳನ್ನು ಕಯ್ಯಲ್ಲಿ ಏಕೆ ಇಟ್ಟುಕೊಂಡಿದ್ದೀಯೆ ಎಂದನು

ನೀನು ಬಂದರೆ ಈ ಅವಸ್ಥೆಯು ಉಂಟಾಗುವುದೆಂದು ತಿಳಿದೇ ನಾನು ನಿನಗೆ ಅವುದನ್ನೂ ಬರಯಲಿಲ್ಲ.

ಅಪ್ಪಾ ! ಈ ಪಿಸ್ತೂಲುಗಳಿಂದೇನು ಕೆಲಸ ?

ಹಾಗಾದರೆ ಕೇಳು ಎಂದು ಧನಕೋಟಿಯು ಪಿಸ್ತೂಲುಗಳನ್ನು ಮೇಜಿನ ಮೇಲೆ

ಇಟ್ಟು, ಕೊಟ್ಟಡಿಯ ಬಾಗಿಲನ್ನು ಹಾಕಿ, ಮಗೂ ಈ ಪಿಸ್ತೂಲುಗಳು ನನ್ನ ಮಾನವನ್ನು ಕಾಪಿಡುವುವು. ಇಗೋ, ಈ ಕಾಗದವನ್ನು ಓದು, ಎಂದು ಸಾಲದ ಪಟ್ಟಿಯನ್ನು ಅವನಲ್ಲಿ ಕೊಟ್ಟನು. ಇವನ್ನು ತೀರಿಸಲು ನನ್ನಲ್ಲಿ ಒಂದು ಕಾಸೂ ಇಲ್ಲ, ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲವಾದುವು; ಮಾನಹೋಗುವುದಕ್ಕಿಂತ ಪ್ರಾಣಹೋಗುವುದೇ ಮೇಲು ಎಂದನು

ಅಪ್ಪಾಜೀ! ನೀವು ಹೇಳುವುದೇನೋ ಸರಿ, ಆದರೆ ಪ್ರಾಣವಿದ್ದರೆ ಎಂದಾದರೂ ಒಂದು ದಿನ ಸಾಲವನ್ನು ತೀರಿಸಬಹುದಲ್ಲವೇ?

ಮಗೂ! ನಾವಕಾಶವಿದ್ದರೆ ನೀನು ಹೇಳುವುದೇನೋ ಸರಿ ನಂದಕುಮಾರನ ಗುಮಾಸ್ತನು ತಾನಾಗಿಯೇ ಮೂರು ತಿಂಗಳ ಗಡುವು ಕೊಟ್ಟನು, ಪುನಃ ಅವನನ್ನು ಕೇಳುವುದು ಸರಿಯಲ್ಲ. ಈ ದಿನ ಹನ್ನೊಂದು ಗಂಟೆಗೆ ಸರಿಯಾಗಿ ಬರುವನು, ಅಷ್ಟರೊಳಗಾಗಿ ಮೂರು ಲಕ್ಷ ವರಹಗಳನ್ನು ನಾನು ಹೇಗೆ ತಾನೇ ಜತೆಮಾಡಲಾಪೆನು? ನೀನಾದರೆ ಏನ ಮಾಡುತ್ತಲಿದ್ದೆ?

ಹಾಗಾದರೆ ಸರಿ, ನಿಮಗೊಂದು, ನನಗೊಂದು ಎಂದು ಮೇಜಿನ ಮೇಲಿಟ್ಟಿದ್ದ ಪಿಸ್ತೂಲುಗಳಲ್ಲಿ ಒಂದನ್ನು ತೆಗೆದುಕೊಂಡನು

ಆಗ ಧನಕೋಟಿಯು ಮಗನ ಕಯ್ಯನ್ನು ಹಿಡಿದು ನಿನ್ನ ತಾಯಿ ತಂಗಿಯರ ಗತಿ ಏನಾಗಬೇಕು ಎನ್ನಲು, ಜಯವೀರನು ದಿಕ್ಕುತೋಚದೆ ಅಪ್ಪಾಜೀ! ನೀವು ಸತ್ತು ನಾನಿದ್ದು ತಾನೇ ಏನು ಪ್ರಯೋಜನ ಎಂದನು

ಮಗೂ! ನೀನು ಸಣ್ಣವನಾದರೂ ವಿವೇಕಿ ದೇವರು ನಿನಗೆ ಒಳ್ಳೆಯ ಬುದ್ಧಿಯನ್ನು ಕೊಟ್ಟಿದ್ದಾನೆ. ಚೆನ್ನಾಗಿ ಬದುಕು

ತಮ್ಮ ಆಶೀರ್ವಾದದಿಂದ ಹಾಗೆಯೇ ಆಗಲಿ, ಆದರೆ ನೀವಿಲ್ಲದೆ ನಾನಿರಲಾರೆನು.

ವಂಶಪಾರಂಪರ್ಯವಾಗಿ ಸತ್ಯಸಂಧರಾದ ನಮ್ಮ ಹಿರಿಯರು ಕಷ್ಟಪಟ್ಟು ವೃದ್ಧಿ ಮಾಡಿದ್ದ ಈ ವ್ಯಾಪಾರವು ನನ್ನ ದುರದೃಷ್ಟದಿಂದ ಇಂದಿಗೆ ತೀರಿಹೋದಂತೆ ಇದ್ದರೂ ಮುಂದೆ ದೈವಾನುಗ್ರಹದಿಂದ ಸರಿಹೋಗಬಹುದು. ನೀನು ಸಾಯಲೇಕೆ?

ಅಪ್ಪಾಜೀ! ನೀವು ಬದುಕಿದ್ದರೆ ನಾವಿಬ್ಬರೂ ಹಗಲೂ ಇರುಳೂ ದುಡಿದು ಸ್ವಲ್ಪ

ಕಾಲದಲ್ಲಿಯೇ ನಮ್ಮ ಸ್ಥಿತಿಯನ್ನು ಸರಿಮಾಡಿಕೊಳ್ಳಬಹುದು. ನಿಮ್ಮ ಅನುಭವವಿಲ್ಲದೆ ನಾನೊಬ್ಬನೇ ಏನ ಮಾಡಬಲ್ಲನು?

ನಾನು ಬದುಕಿದ್ದರೆ "ಹಿರಿಯರು ಸಂಪಾದಿಸಿದ್ದ ಆಸ್ತಿಯನ್ನೆಲ್ಲಾ ಹಾಳುಮಾಡಿ ಸಾಲವನ್ನೂ ತೀರಿಸದೆ ನಾಚಿಕೆಯಿಲ್ಲದೆ ಒದುಕಿದ್ದಾನೆ ನೋಡಿರಿ" ಎಂದು ಎಲ್ಲರೂ ಹಿಯ್ಯಾಳಿಸುವರು ನೀನೂ ತಲೆಯೆತ್ತುವ್ರದಕ್ಕಾಗುವ್ರದಿಲ್ಲ

ಜಯವೀರನು ಅಳುತ್ತ ಅಪ್ಪಾಜೀ, ನಿಮ್ಮ ಚಿತ್ತ ಎಂದನು

ನಂದಕುಮಾರನ ಗುಮಾಸ್ತನು ಆವ ಕಾರಣದಿಂದಲೋ ತನಗೆ ಬರಬೇಕಾದ ಸಾಲವನ್ನು ತೀರಿಸಲು ಮೂರು ತಿಂಗಳ ವ್ಯವಧಾನವನ್ನು ಕೊಟ್ಟನು, ಇಲ್ಲದಿದ್ದರೆ ಈ ವೇಳೆಗೆ ನಾನು ಸತ್ತು ಮೂರು ತಿಂಗಳಾಗಿರಬೇಕು. ದೇವರು ನಿನಗೆ ಅನುಕೂಲ ಮಾಡಿ ಕೊಟ್ಟಾಗ ಅವನ ಸಾಲವನ್ನು ಮೊದಲು ತೀರಿಸಿ ಮಿಕ್ಕ ಕೆಲಸವನ್ನು ಮಾಡು. ನೀನು ಸನ್ಮಾರ್ಗದಲ್ಲಿದ್ದರೆ ದೇವರು ಕೈಬಿಡನು, ನಿನ್ನ ತಾಯಿಯು ಒಳ್ಳೆಯವಳು, ತಂಗಿಯು ಏನೂ ತಿಳಿಯದವಳು, ಅವರನ್ನು ಜಾಗರೂಕತೆಯಿಂದ ನೋಡಿಕೋ. ಇನ್ನು ನೀನು ಹೋಗಿ ಶುಕ್ರಾಚಾರಿಯನ್ನು ಕಳುಹಿಸು ಎಂದು ಮಗನಿಗೆ ಆಶೀರ್ವಾದ ವನ್ನು ಮಾಡಿ ಶುಕ್ರಾಚಾರಿಯ ಆಗಮನವನ್ನು ನಿರೀಕ್ಷಿಸುತ್ತಲಿದ್ದನು.

ಶುಕ್ರಾಚಾರಿಯು ಬಂದು, ಏನಪ್ಪಣೆ ಎಂದು ಕೇಳಲು, ಇಲ್ಲಿಯೇ ಹೊರಗೆ ಇದ್ದು ಕೊಂಡು ನಂದಕುಮಾರನ ಗುಮಾಸ್ತನು ಬಂದ ಒಡನೆಯೇ ನನಗೆ ವರ್ತಮಾನ ಕೊಡು ಎಂದು ಧನಕೋಟಿಯು ಬಾಗಿಲನ್ನು ಮುಚ್ಚಿ ಮೇಜಿನ ಮೇಲೆ ಇದ್ದ ಎರಡು ಪಿಸ್ತೂಲುಗಳನ್ನೂ ಹತ್ತಿರ ಇಟ್ಟುಕೊಂಡು, ಗಡಿಯಾರವನ್ನು ನೋಡಿ ಯೋ ಚನೆ ಮಾಡುತ್ತ ಕುಳಿತುಕೊಂಡನು. ಹನ್ನೊಂದು ಗಂಟೆಗೆ ಐದು ನಿಮಿಷಗಳಿದ್ದುವು; ಪಿಸ್ತೂಲುಗಳಿಗೆ ಮದ್ದು ಗುಂಡು ಸರಿಯಾಗಿದೆಯೆಂದು ತೃಪ್ತಿಮಾಡಿಕೊಂಡು, ಒಂದನ್ನು ಕಯ್ಯಲ್ಲಿ ತೆಗೆದುಕೊಂಡನು. ಆಗ ಮಗಳ ನೆನಪು ಬಂದಿತು, ಕಯ್ಯಲ್ಲಿದ್ದ ಮೃತ್ಯು ರೂಪವಾದ ಆಯುಧವನ್ನು ಮೇಜಿನ ಮೇಲೆ ಇಟ್ಟು, ಮಗಳ ವಿಷಯವಾಗಿ ನಾಲ್ಕು ಮಾತುಗಳನ್ನು ಒಂದು ಕಾಗದದಲ್ಲಿ ಬರೆದಿಟ್ಟು, ಪುನಃ ಆ ಆಯುಧವನ್ನು ತೆಗೆದುಕೊಂಡು ಅದರ ಕುದುರೆಯನ್ನು ಹಿಂದಕ್ಕೆ ಎಳೆದು ಕೊಟ್ಟಡಿಯಲ್ಲಿ ಕಟ್ಟಿದ್ದ ದೇವರ ಪಟಗ

ಳನ್ನೂ, ತನ್ನ ಹೆಂಡಿತಿಮಕ್ಕಳ ಪಟಗಳನ್ನೂ ನೋಡಿ, ಕಣ್ಣಿನಿಂದ ನೀರನ್ನು ಧಾರೆಧಾರೆಯಾಗಿ ಸುರಿಸುತ್ತ ಗಡಿಯಾರವನ್ನೇ ನೋಡುತ್ತಲಿದ್ದನು.

ಇನ್ನೇನು ಹನ್ನೊಂದು ಗಂಟೆಯು ಹೊಡೆಯುವ ಸಮಯ. ತನ್ನ ಬಾಯಿಯಲ್ಲಿ ಪಿಸ್ತೂಲಿನ ಬಾಯಿಯನ್ನಿಟ್ಟುಕೊಂಡನು ನಂದಕುಮಾರನ ಗುಮಾಸ್ತನ ಹಜ್ಜೆಯ ಶಬ್ದವನ್ನೇ ನಿರೀಕ್ಷಿಸುತಲಿದ್ದನು. ಆಗ ಕೊಟ್ಟಡಿಯ ಬಾಗಿಲು ತೆರದಂತಾಯಿತು ಶುಕ್ರಾಚಾರಿಯು ಬಂದನೆಂಬ ಭ್ರಮೆಯಿಂದ ಧನಕೋಟಿಯು ಮತ್ತೊಂದು ಸಲ ದೇವರ ಪಟವನ್ನು ನೋಡಿ, ಪಿಸ್ತೂಲನ್ನು ಹಾರಿಸುವುದಕ್ಕೆ ಹೋದನು ಆಗ ಬದುಕಿದೆವಪ್ಪಾ, ಬದುಕಿದೆವು! ಎಂಬ ರತ್ನಾಂಬೆಯ ಕೂಗು ಕೇಳಿಸಿತು ಇದೇನು ಬದುಕಿದೆವು ಎಂದು ರತ್ನಾಂಬೆಯು ಹೇಳುವಳೆಂದು ಹಿಂತಿರುಗುವಷ್ಟರಲ್ಲಿಯೇ, ಅಪ್ಪಾ ! ಒದುಕಿದೆವು. ದೇವರು ನಮ್ಮ ಕಷ್ಟವನ್ನು ನಿವಾರಣೆ ಮಾಡಿದನು ಎಂದು ಹಿಗ್ಗಿ ಮಾತನಾಡಲಾರದೆಹೋದಳು

ಅಮ್ಮಾ ! ಅದು ಹೇಗೆ ?

ಇಗೋ ನೋಡು, ಎಂದು ತಾನು ತಂದಿದ್ದ ಪೆಟ್ಟಿಗೆಯ ಚೀಲವನ್ನು ನೀಡಿದಳು. ಅದನ್ನು ನೋಡಿ ಇದು ನಮ್ಮ ಚೀಲದಂತೆ ತೋರುತ್ತಲಿದೆ, ಇದೆಲ್ಲಿದ್ದಿತು ಎನ್ನಲು ತಾನು ತಂದಿದ್ದ ಸ್ಥಳವನ್ನು ಅವಳು ತಿಳಿಸಿದಳು.

ನೀನು ಏತಕ್ಕೆ ಇದನ್ನು ತಂದೆ ಎನ್ನಲು, ನಾವಿಕಸೈಂಧವನು ತನಗೆ ಒರೆದಿದ ಕಾಗದವನ್ನು ಕೊಟ್ಟಳು, ಅವನು ಅದನ್ನು ಓದಿ ನೋಡಿ ನೀನೊಬ್ಬಳೇ ಹೋಗಿದ್ದೆಯೋ ಎಂದು ಕೇಳಲು, ಇಲ್ಲ, ತಮಗೆ ಆಳಿಯಂದಿರಾಗುವವರೂ ಜತೆಯಲ್ಲಿ ಬಂದಿದ್ದರು ಎಂದಳು.

ಧನಕೋಟಿಯು ಚೀಲವನ್ನು ಬಿಚ್ಚಿ ನೋಡುತ್ತಲೆ, ಅದರಲ್ಲಿ ನಂದಕುಮಾರನ ಗುಮಾಸ್ತನು ಮೂರು ತಿಂಗಳ ಹಿಂದೆ ತಂದು ಈಗ ನಾಲತೀರಿದಂತೆ ಒರೆದಿದ್ದ ಹುಂಡಿಗಳೂ, ಸುಮಾರು ದಪ್ಪ ಅವರೆಯಕಾಳಿನಷ್ಟು ಗಾತ್ರವುಳ್ಳ ಶ್ರೇಷ್ಠವಾದ ನಾಲ್ಕು ವಜ್ರದ ಹರಳುಗಳೂ ಇದ್ದುವು. ಇದಲ್ಲದೆ ಚೀಲದ ಮೇಲೆ ಮತ್ತೊಂದು ದೊಡ್ಡ ವಜ್ರವೂ ಇದ್ದಿತು. ಮೇಲೆ ಕಟ್ಟಿರುವ ವಜ್ರವು ರತ್ನಾಂಬೆಯ ಸ್ತ್ರೀಧನಕ್ಕಾಗಿಯೂ, ಮಿಕ್ಕ

ನಾಲ್ಕು ವಜ್ರಗಳು ಧನಕೋಟಿಯವರ ವ್ಯಾಪಾರದ ಬಂಡವಾಳಕ್ಕಾಗಿಯೂ ಎಂದು ಬರೆದಿದ್ದ ಒಂದು ಚೀಟಿಯೂ ಇದ್ದಿತು

ಅಮ್ಮಾ! ಇದು ಅವನೋ ಒಬ್ಬ ಮಹೋಪಕಾರಿಯ ಕೆಲಸ; ನಮ್ಮನ್ನು ಬಿಟ್ಟು ಹೋಗಿದ್ದ ದೈವಕೃಪೆಯು ಬಂದು ನಮ್ಮ ಕೈಸೇರಿತು ಎಂದು ಹೇಳಿ, ದೇವರ ಮಹಿಮೆಯನ್ನು ಕೊಂಡಾಡುತ್ತಲಿದ್ದನು. ಆಗ ಮನೋಮೋಹನನು ಓಡಿಬಂದು ನಮ್ಮ ಜಯಲಕ್ಷ್ಮಿಯು ರೇವಿಗೆ ಬಂದಿತಂತೆ ಎಂದನು.

ಏನು! ಏನು! ಜಯಲಕ್ಷ್ಮಿಯೆ! ಮುಳುಗಿ ಹೋಯಿತಲ್ಲವೆ! ಪುನಃ ಬರುವು ದೆಂದರೇನು? ಎಂದು ಧನಕೋಟಿಯು ಆಶ್ಚರ್ಯಪಡಲು, ಸ್ವಾಮೀ! ಅದೇ ಒಂದು ನಿಂತಿದೆಯಂತೆ. ಊರೆಲ್ಲಾ ಹೇಳುತ್ತಾರೆ ಎಂದನು.

ಅಸಾಧ್ಯ, ಅಸಾಧ್ಯ! ಎಂದು ಧನಕೋಟಿಯು ತಲೆಯನ್ನು ಅಲ್ಲಾಡಿಸಲು ರತ್ನಾಂಬೆಯು ತಂದೆಯನ್ನು ನೋಡಿ, ಅಪ್ಪಾಜೀ! ಈ ಚೀಲವೂ ಇದರಲ್ಲಿರುವ ವಸ್ತು ಗಳೂ ಹೇಗೆ ಸಿಕ್ಕಿದುವು! ಹಾಗೆಯೇ ಜಯಲಕ್ಷ್ಮಿಯೂ ಏಕೆ ಬಂದಿರಕೂಡದು! ಎಂದು ಕೇಳಿದಳು ಅದಕ್ಕವನು ಇದೇನೋ ಆಶ್ಚರ್ಯವಾಗಿದೆ, ರೇವಿಗೆ ಹೋಗಿ ನೋಡೋಣ ಬನ್ನಿ ಎಂದು ಎಲ್ಲರೂ ರೇವಿಗೆ ಹೋದರು.

ರೇವನ್ನು ಸೇರುತಲೆ, ದೊಡ್ಡ ದೊಡ್ಡ ಅಕ್ಷರಗಳಲ್ಲಿ ಸಾಹುಕಾರ ಧನಕೋಟಿಯ ಜಯಲಕ್ಷ್ಮಿ ಎಂದು ಬರೆದಿದ್ದ ಹಡಗು ನಿಂತಿದ್ದಿತು, ಅದರ ಆಕಾರವನ್ನೂ ಬಣ್ಣವನ್ನೂ ನೋಡಿ ಅದು ತನ್ನ ಹಡಗೇನೋ ಹೌದು, ಮುಳುಗಿಹೋದುದು ಪುನಃ ಹೇಗ ಬಂದಿತು ಎಂದು ಯೋಚಿಸುತ್ತಿದ್ದನು ಆಗ ದಾಸ ಮುಂತಾದ ನಾವಿಕರೆಲ್ಲರೂ ಧನ ಕೋಟಿಯನ್ನು ಕಂಡು ಹಡಗಿನಿಂದಲೇ ಜಯಘೋಷವನ್ನು ಮಾಡಿದರು ಧನ ಕೋಟಿಯು ಅನುಮಾನವು ತೊಲಗಿತು ಆನಂದಭರಿತನಾಗಿ ಜಯಲಕ್ಷ್ಮಿಯನ್ನು ನೋಡುತ್ತಾ ಹಾಗೆಯೇ ನಿಂತಿದ್ದನು

ಈ ಆಶ್ಚರ್ಯವನ್ನು ನೋಡುವುದಕ್ಕೆ ಊರಿನವರೆಲ್ಲರೂ ಬಂದು ರೇವಿನಲ್ಲಿ ನೆರೆದಿ ದ್ದರು ಸೇರಿದ್ದ ಜನ ಳ ಮಧ್ಯೆ ವಿಶೇಷ ನರೆ ಗಡ್ಡ ಮೀಸೆಗಳಿದ್ದು ಮುಖವನ್ನು ರುಮಾಲಿನಿಂದ ಅರ್ಧ ಮುಚ್ಚಿಕೊಂಡಿದ್ದ ನೊಬ್ಬನು "ದಯಾನಿಧಿಯೇ! ನೀನು ಹಿಂದೆ ಮಾಡಿರುವ ಮತ್ತು ಮುಂದೆ ಮಾಡುತ್ತಿರುವ ಸತ್ಕಾರ್ಯಗಳಿಂದ ಭಗವಂತನು ಸುಪ್ರೀತ

ನಾಗಲಿ, ನಿನ್ನ ಸತ್ಕಾರ್ಯಗಳು ಗೂಢವಾಗಿದ್ದಂತೆಯೇ ನನ್ನ ಕೃತಜ್ಞತಾರೂಪವಾದ ಈ ಅಲ್ಪ ಕಾರ್ಯವೂ ಗೂಢವಾಗಿಯೇ ಇರಲಿ" ಎಂದು ಹೇಳಿ, ಯಾಗಪ್ಪ! ಯಾಗಪ್ಪ! ಎಂದು ಮೂರುಸಾರಿ ಕೂಗಲು, ಬಂದು ನಿಂತ ದೋಣಿಯಲ್ಲಿ ಕುಳಿತು ಅವ್ರದೇ ಹಡಗನ್ನು ಸೇರಿದನು.

ಧನಕೋಟಿಯು ಸಂತೋಷದಿಂದ ಕೂಡಿದವನಾಗಿ, ತನ್ನನ್ನು ವಿಚಾರಿಸಲು ಬಂದವರ ಸಂಗಡ ಯಥೋಚಿತವಾಗಿ ಮಾತನಾಡುತ್ತಲಿರುವುದನ್ನೂ, ತನಗೆ ಈ ಉಪಕಾರಮಾಡಿದ ವಸ್ತುವು ದೇವಲೋಕದಲ್ಲಿರುವುದೆಂದು ಭಾವಿಸಿ ಅಂತರಿಕ್ಷವನ್ನು ನೋಡಿ ಕೈಮುಗಿಯುತ್ತಲಿರುವುದನ್ನೂ, ಹಡಗಿನಲ್ಲಿ ಪ್ರಯಾಣ ಮಾಡುತ್ತಲಿದ್ದ ಅಜ್ಞಾತ ನಾವಿಕನು ನೋಡಿ ಹಿಗ್ಗುತ್ತ "ಲೋಕದಲ್ಲಿ ಇಂತಹ ಒಳ್ಳೆಯ ವಸ್ತುಗಳು ಬಹುವಿರಳ. ಈಗ ನಾನು ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಿದುದಾಯಿತು. ಇನ್ನು ಅಪಕಾರ ಮಾಡಿದವರಿಗೆ ಪ್ರತಿಕ್ರಿಯೆಯನ್ನು ಮಾಡಹೋಗುವೆನು" ಎಂದುಕೊಂಡು ಹೋದನು.

ಇಷ್ಟರಲ್ಲಿಯೇ ನಾವಿಕದಾಶನು ಹಡಗಿನಿಂದಿಳಿದು ದೋಣಿಯಲ್ಲಿ ಹೊರಟು ದಡವನ್ನು ಸೇರಿ, ಧನಕೋಟಿಯ ಬಳಿಗೆ ಬಂದು ಮಹಾಸ್ವಾಮೀ! ಹಡಗು ಸುಖವಾಗಿ ಬಂದಿತು, ಸಾಮಾನುಗಳೆಲ್ಲವೂ ಸರಿಯಾಗಿವೆ ಎಂದನು ಮುಳುಗಿಹೋಗಿದ್ದ ಹಡಗೂ ಸಾಮಾನುಗಳೂ ಹೇಗೆ ಸರಿಯಾಗಿ ಪುನಃ ಬಂದುವು ಎಂದು ಧನಕೋಟಿಯು ಕೇಳಲು ದಾಶನು ಅಂತರಿಕ್ಷವನ್ನು ತೋರಿಸಿದನು

---

# ಇಪ್ಪತ್ತಮೂರನೆಯ ಅಧ್ಯಾಯ

## ನಾವಿಕ ಸೈಂಧವ.

ಈ ಸಂಗತಿಗಳೆಲ್ಲಾ ನಡೆದ ಸುಮಾರು ಏಳೆಂಟು ವರ್ಷಗಳಾದ ಮೇಲೆ ದೇಶಾಟನವನ್ನು ಮಾಡುತ್ತಲಿದ್ದ ವೀರಸಿಂಹ ಉದಯಸಿಂಹರೆಂಬ ಅಮರಪುರದ ಶ್ರೀಮಂತರ ಮಕ್ಕಳಿಬ್ಬರು ಉತ್ತರದೇಶದ ಒಂದು ರೇವುಪಟ್ಟಣದಲ್ಲಿ ಹಠಾತ್ತಾಗಿ ಸಂಧಿಸಿದರು ಇಬ್ಬರೂ ಹುಟ್ಟಿದಂದಿನಿಂದಲೂ ಗೆಳೆಯರು. ಅಲ್ಲಲ್ಲಿ ನೋಡಿದ ವಿಶೇಷಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡ ಬಳಿಕ ಇಂದ್ರಪ್ರಸ್ಥದಲ್ಲಿ ನಡೆಯುವ ಲೋಕಪ್ರಸಿದ್ಧವಾದ

ಉತ್ಸವವನ್ನು ನೋಡಲು ಒಟ್ಟಿಗೆ ಹೋಗುವುದಕ್ಕೆ ಒಪ್ಪಿದರು. ಇಂದ್ರಪ್ರಸ್ಥವು ಬಹು ವಿಸ್ತಾರವಾದ ಪಟ್ಟಣ, ಮೇಲೂ ಪುಣ್ಯಕ್ಷೇತ್ರ ; ಇಂತಹ ಸ್ಥಳವನ್ನು ನೋಡಬೇಕಾ ಕಾದರೆ ಅಲ್ಲಿಯ ಮಾಹಾತ್ಮ್ಯಗಳನ್ನೆಲ್ಲಾ ಚೆನ್ನಾಗಿ ತಿಳಿದವರ ಸಾಹಾಯ್ಯವಿರಬೇಕು ವೀರಸಿಂಹನು ಆ ಪಟ್ಟಣದಲ್ಲಿಯೇ ಮೂರುನಾಲ್ಕು ವರ್ಷಗಳಿದ್ದುದರಿಂದ ಯಾರ ಸಾಹಾಯ್ಯವೂ ಅವರಿಗೆ ಬೇಕಾಗಲಿಲ್ಲ

ಇಂದ್ರಪ್ರಸ್ಥದಲ್ಲಿ ಉತ್ಸವಕಾಲದಲ್ಲಿ ಅನುಕೂಲವಾದ ಬಿಡಾರವು ದೊರೆಯು ವುದು ಕಷ್ಟವಾದುದರಿಂದ ತನ್ನ ಪರಿಚಯಸ್ಥನಾದ ಪಶುಪತಿಯೆಂಬ ಒಬ್ಬ ದೊಡ್ಡ ಭೋಜನಶಾಲಾದಿಕಾರಿಗೆ ವೀರಸಿಂಹನು ಒಡನೆಯೇ ಒಂದು ಕಾಗದವನ್ನು ಬರೆದು, ದಿನ ಒಂದಕ್ಕೆ ಒಂದೊಂದು ಕೊಟ್ಟಡಿಗೆ ಒಂದೊಂದು ವರಹದಂತೆ ಎರಡು ಕೊಟ್ಟಡಿಗ ಳನ್ನು ಬಾಡಿಗೆಗೆ ಗೊತ್ತುಮಾಡಿಕೊಂಡನು. ಉತ್ಸವಾರಂಭಕ್ಕೆ ಇನ್ನೂ ಐದುದಿವಸ ಗಳಿದ್ದವು ; ಈ ಮಧ್ಯೆ ಉದಯಸಿಂಹನು "ನಾನು ಇಲ್ಲಿಗೆ ಸಮೀಪದಲ್ಲಿರುವ ಒಂದೆರಡು ಊರುಗಳನ್ನು ನೋಡಿಕೊಂಡು ಇಂದ್ರಪ್ರಸ್ಥಕ್ಕೆ ಹೋಗುವೆನು ; ನೀನು ಲಕ್ಷದ್ವೀಪ ಗಳಲ್ಲಿ ಬೇಟೆಯಾಡಿಕೊಂಡು ಸಕಾಲದಲ್ಲಿ ನನ್ನನ್ನು ಸೇರುವನಾಗು" ಎಂದು ವೀರಸಿಂಹ ನೊಡನೆ ಹೇಳಿ ಇಬ್ಬರೂ ಅಲ್ಲಲ್ಲಿಗೆ ಪ್ರಯಾಣಮಾಡಿದರು.

ಆ ದಿನ ಸಾಯಂಕಾಲ ವೀರಸಿಂಹನು ರೇವಿನಲ್ಲಿದ್ದ ದೊಡ್ಡದೋಣಿಗಳಲ್ಲಿ ಪ್ರಶಸ್ತ ವಾದುದೊಂದನ್ನು ಹತ್ತಿ, ಲಕ್ಷದ್ವೀಪಗಳಲ್ಲಿ ಮುಖ್ಯವಾದ ಶ್ವೇತದ್ವೀಪಕ್ಕೆ ಬಿಡು ಎಂದು ದೋಣಿಯವನಿಗೆ ಹೇಳಲು, ದೋಣಿಯು ಗರುಡವೇಗದಿಂದ ಹೊರಟು ಮರುದಿನ ಸೂರ್ಯೋದಯಕ್ಕೆ ಸರಿಯಾಗಿ ಶ್ವೇತದ್ವೀಪವನ್ನು ಸೇರಿತು. ವೀರಸಿಂಹನಿಗೆ ಅಲ್ಲಿ ಅನು ಕೂಲವಾದ ಬೇಟೆಯಾವುದೂ ಸಿಕ್ಕದೆ ಅಸಮಾಧಾನವಾದುದನ್ನು ನೋಡಿ, ದೋ ಣಿಯ ಯಜಮಾನನಾದ ಗುಹನೆಂಬುವನು, ಸ್ವಾಮೀ ! ಇಲ್ಲಿಗೆ ಇಪ್ಪತ್ತು ಮೈಲಿಗಳ ದೂರದಲ್ಲಿ ಪ್ರತ್ಯೇಕವಾದ ಒಂದು ದ್ವೀಪವಿರುವುದು , ಅಲ್ಲಿ ಕಾಡುಮೃಗಗಳು ವಿಶೇಷವಾಗಿ ಇಲ್ಲವಾದರೂ ಕಾಡುಮೇಕೆ ಕುರಿಗಳು ಹೇರಳವಾಗಿ ಬೇಟೆಗೆ ಬಹು ಅನುಕೂಲವಾಗಿರುವುದು ಎಂದನು

ಆ ದ್ವೀಪದ ಹೆಸರೇನು ? ಮಲಯದ್ವೀಪ.

ಅದರಲ್ಲಿ ಬೇಟೆಯಾಡಲು ನನಗೆ ಅಪ್ಪಣೆಯಿಲ್ಲವಲ್ಲಾ..

ಅಲ್ಲಿ ಜನಗಳೇ ಇಲ್ಲ; ಯಾರ ಅಪ್ಪಣೆ ಬೇಕು?

ಅಲ್ಲಿ ಜನಗಳೇ ಇಲ್ಲವೇ?

ಅದು ಬರಿಯ ಕಲ್ಲು ಬಂಡೆಗಳಿಂದ ತುಂಬಿ, ನಿವಾಸಕ್ಕೆ ಅನುಕೂಲವಿಲ್ಲ ವಾಗಿ ಜನಗಳೇ ಇಲ್ಲ

ಅದು ಬರಿಯ ಬಂಡೆಗಳಿಂದ ತುಂಬಿದ್ದ ಅಲ್ಲಿನ ಮೇಕೆ ಕುರಿಗಳಿಗೆ ಏಂದಿಗಳೇ ಆಹಾರವೋ?

ಬಂಡೆಗಳ ಸಂದಿನಲ್ಲಿ ಹುಟ್ಟುವ ಗಿಡ ಕೆಗಳನ್ನೂ, ಗಿಡಗಳಲ್ಲಿರುವ ಸೊಪ್ಪುಗ ಳನ್ನೂ ತಿನ್ನುವುವು.

ಒಂದು ವೇಳೆ ರಾತ್ರಿ ನಾನು ಅಲ್ಲಿ ನಿಂತರೆ ಮಲಗಲು ಅನುಕೂಲವಾದ ಸ್ಥಳ ವುಂಟೋ?

ಅದರಲ್ಲಿ ಗಿಡದ ಪೊದರುಗಳು ಇರುವುವು, ಅಲ್ಲಿ ಬೇಕಾದರೆ ಮಲಗಬಹುದು, ಇಲ್ಲದಿದ್ದರೆ ನಮ್ಮ ದೋಣಿಯು ಇದ್ದೇ ಇದೆ

ಹಾಗಾದರೆ ಆ ದ್ವೀಪಕ್ಕೆ ಹೋಗೋಣ ಎಂದು ವೀರಸಿಂಹನು ಹೇಳುತಲೆ ದೋಣಿಯಲ್ಲಿದ್ದ ನಾವಿಕರೆಲ್ಲರೂ ಒಬ್ಬರ ಮುಖವನ್ನು ಒಬ್ಬರು ನೋಡಿ ಗುಸಗುಸ ಎಂದು ಮಾತನಾಡತೊಡಗಿದರು, ಇದನ್ನು ಕಂಡ ವೀರಸಿಂಹನು ಏಕೆ ಅನುಮಾನ? ಎನ್ನಲು, ಗುಹನು ಮಹಾಸ್ವಾಮೀ! ವಸ್ತ್ರವೂ ಇಲ್ಲ, ಅಲ್ಲಿ ತೆರಿಗೆಯನ್ನು ಕೊಡದೆ ವ್ಯಾಪಾರಮಾಡುವ ಕಳ್ಳವ್ಯಾಪಾರಿಗಳೂ ಮತ್ತು ಕಡಲುಗಳ್ಳರೂ ಅಡಿಗಡಿಗೆ ಬಂದು ಇಳಿಯುವುದುಂಟು. ಅದನ್ನು ತಮಗೆ ತಿಳಿಸಬೇಕಾದ್ದೋ ಬೇಡವೋ ಎಂದು ಯೋಚಿ ಸಿದೆವು ಎಂದನು.

ಅವರು ನಮ್ಮನ್ನೇನ ಮಾಡಾರು?

ಕಳ್ಳವ್ಯಾಪಾರಿಗಳು ಒಬ್ಬರ ತಂಟೆಗೂ ಹೋಗರು ಕಡಲುಗಳ್ಳರ ಸಹವಾಸ ಕೆಟ್ಟದು, ಅವರೂ ದೊಡ್ಡ ದೊಡ್ಡ ಹಡಗುಗಳ ಮತ್ತು ಹಣಗಾರರ ಮೇಲೆ ಬೀಳು ವರೇ ಹೊರತು ನಮ್ಮಂಥವರ ಗೋಜಿಗೆ ಬಾರರು

ಹಾಗಾದರೆ ಆ ದ್ವೀಪಕ್ಕೆ ಹೋಗೋಣ, ನಡೆ ಎಂದು ವೀರಸಿಂಹನು ಹೇಳಲು, ಒಡನೆಯೇ ದೋಣಿಯು ಮಲಯದ್ವೀಪಕ್ಕೆ ಹೊರಟಿತು. ಸ್ವಲ್ಪದೂರ ಹೋದ ಬಳಿಕ

ಕಡಲುಗಳ್ಳರ ಸಮಾಚಾರವನ್ನೇ ಈಚೆಗೆ ನಾನು ಕೇಳಿರಲಿಲ್ಲ, ಅವರೆಲ್ಲರೂ ಧ್ವಂಸ ವಾಗಿ ಹೋದರೆಂದು ತಿಳಿದಿದ್ದೆನು ಎಂದು ಯೋಚನೆಮಾಡುತ್ತ, ವೀರಸಿಂಹನು ಗುಹ ನನ್ನು ಕರೆದು ಅಮರದೇಶದ ರಾಜನು ಸುತ್ತುಮುತ್ತು ಇರುವ ರಾಜರ ಸಾಹಾಯ್ಯದಿಂದ ಈ ಕಡಲುಗಳ್ಳರನ್ನು ನಿರ್ಮೂಲಮಾಡಿದ್ದನಲ್ಲ ಪುನಃ ಅವರು ಹೇಗುಂಟಾದರು ಎಂದು ಕೇಳಿದನು

ಮಹಾಸ್ವಾಮೀ! ಇಂದ್ರಪ್ರಸ್ಥದ ದೊರೆಯು ಆ ಪಟ್ಟಣದ ಸುತ್ತುಮುತ್ತಲೂ ಇರುವ ಕಳ್ಳರ ಗುಂಪನ್ನು ಹೇಗೆ ನಿರ್ಮೂಲಮಾಡಿದನೋ, ಹಾಗೆಯೇ ಅಮರದೇಶದ ರಾಜನು ಈ ಕಡಲುಗಳ್ಳರನ್ನೂ ನಿರ್ಮೂಲಮಾಡಿದನು ; ಇಂದ್ರಪ್ರಸ್ಥದ ಹೆಬ್ಬಾಗಿಲು ಗಳಲ್ಲಿ ಈಗಲೂ ಪ್ರತಿದಿನವೂ ಕಳ್ಳತನವು ಹೇಗೆ ನಡೆಯುತ್ತಲಿದೆಯೋ ಹಾಗೆಯೇ ಈ ಕಡಲಿನಲ್ಲಿಯೂ ಆಗಾಗ ಕಳ್ಳತನವು ನಡೆಯುತ್ತಲೇ ಇದೆ. ಕೆಲವು ಹಡಗುಗಳು ಊರನ್ನು ಸೇರದೆ ಹೋದಕಡೆ ಗೊತ್ತಿಲ್ಲದೆ ಹೋಗುವುದನ್ನೂ, ಸಾಧಾರಣವಾಗಿ ಅಂತಹ ಹಡಗುಗಳು ಬಂಡೆಗಳಿಗೆ ತಗುಲಿಯೋ ಸುಂಟುರುಗಾಳಿಗೆ ಸಿಕ್ಕಿಯೋ ಹೋದು ವೆಂಬ ವರ್ತಮಾನವನ್ನೂ, ಆಗಾಗ ತಾವು ಕೇಳುತ್ತಲಿರಬಹುದು. ಈ ಬಂಡೆಗಳು ಅಥವಾ ಸುಂಟುರುಗಾಳಿಯು ಎಂಟು ಹತ್ತು ಮಂದಿ ಬಲಿಷ್ಠರಿರುವ ವೇಗವಾದ ದೋ ಣಿಗಳಲ್ಲದೆ ಮತ್ತಾವುವೂ ಅಲ್ಲ ; ಇಂತಹ ದೋಣಿಗಳು ಕತ್ತಲೆಯಾದ ದಿನಗಳಲ್ಲಿ ಹಡಗುಗಳು ಬರುವ ದಾರಿಯಲ್ಲಿ ನಿರ್ಜನವಾದ ದ್ವೀಪಗಳ ಪಕ್ಕದಲ್ಲಿದ್ದುಕೊಂಡು ಬಂದ ಹಡಗುಗಳ ಮೇಲೆ ಏಕಾಏಕಿ ಬಿದ್ದು ಕೊಳ್ಳೆ ಹೊಡೆಯುವುವು.

ಹಾಗಾದರೆ ಹಣವನ್ನು ಸೂರೆಗೊಟ್ಟ ಜನರು ಸರ್ಕಾರಕ್ಕೆ ಏತಕ್ಕೆ ಈ ಸಂಗತಿ ಯನ್ನು ತಿಳಿಸಬಾರದು ?

ಏತಕ್ಕೆ? ಏತಕ್ಕೆ? ಎಂದು ಗುಹನು ನಕ್ಕು ಇವರು ಹಡಗಿನಲ್ಲಿರುವ ಜನರ ಕೈಕಾಲುಗಳನ್ನು ಕಟ್ಟಿ ಪ್ರತಿಯೊಬ್ಬನಿಗೂ ಒಂದು ಕಬ್ಬಿಣದ ಗುಂಡನ್ನು ಕಟ್ಟಿ, ಬೆಲೆ ಯುಳ್ಳ ಪದಾರ್ಥಗಳನ್ನೆಲ್ಲಾ ತಮ್ಮ ದೋಣಿಗೆ ಸಾಗಿಸಿ, ಹಡಗಿನ ತಳದಲ್ಲಿ ಒಂದು ದೊಡ್ಡ ರಂಧ್ರವನ್ನು ಮಾಡಿ ಬಿಟ್ಟು ಹೊರಟು ಹೋಗುವರು. ಸ್ವಲ್ಪ ಹೊತ್ತಿನಲ್ಲಿಯೇ ಹಡಗು ಈ ಕಡೆ ಆ ಕಡೆ ಓಲಾಡುತ್ತ, ಹತ್ತು ನಿಮಿಷಗಳಲ್ಲಿ ಒಂದು ದೊಡ್ಡ ಗುಂಡು ಹಾರಿದಂತೆ ಸದ್ದಾಗುವುದು ; ಆ ಮೇಲೆ ಹಡಗಿರುವ ಸ್ಥಳವು ದೇವರಿಗೇ ಗೊತ್ತಾಗ

ಬೇಕಲ್ಲದೆ ಮನುಷ್ಯರಿಗೆ ಬೇರೆ ಗೊತ್ತಾಗದು. ಸೂರೆಗೊಟ್ಟವರು ಸರ್ಕಾರಕ್ಕೆ ಸಂಗತಿಯನ್ನು ತಿಳಿಸುವುದಿಲ್ಲವೆಂಬುದಕ್ಕೆ ಇದೇ ಕಾರಣ. ಗೊತ್ತಾಯಿತೋ ?

ತನಗೆ ಈ ವರ್ತಮಾನ ಮೊದಲೇ ತಿಳಿದಿದ್ದರೆ ವೀರಸಿಂಹನು ಮಲಯದ್ವೀಪಕ್ಕೆ ಹೊರಡುತ್ತಲೇ ಇರಲಿಲ್ಲ ; ಹೊರಟ ಮೇಲೆ ಹಿಂದಿರುಗುವುದು ಹೇಡಿತನವೆಂದು ತಿಳಿದು ಗುಹನನ್ನು ಕುರಿತು ಈ ಪ್ರಾಂತ್ಯಗಳಲ್ಲಿ ಬೇಕಾದಷ್ಟು ಸುತ್ತಿದ್ದೇನೆ, ಇಂತಹ ಕಳ್ಳರ ಸುದ್ದಿಯನ್ನೇ ನಾನು ಕೇಳಿ ಇಲ್ಲ; ಒಂದು ವೇಳೆ ಅವರು ನಮ್ಮ ಮೇಲೆ ಬಿದ್ದರೂ ನಾವು ಭಯಪಡಕೆಲಸವಿಲ್ಲ ಎಂದು ತಾನು ತಂದಿದ್ದ ಮೂರು ಕೋವಿಗಳಿಗೂ ಗುಂಡನ್ನೂ ಮದ್ದನ್ನೂ ತುಂಬಿ ಸಿದ್ಧಮಾಡಿ ಪಕ್ಕದಲ್ಲಿಟ್ಟುಕೊಂಡನು.

ಮೂರನೆಯ ದಿನ ದೋಣಿಯು ಮಲಯದ್ವೀಪವನ್ನು ಸೇರುವುದರೊಳಗಾಗಿ ಕತ್ತಲಾಯಿತು ; ಆ ದ್ವೀಪವು ಕತ್ತಲೆಯಲ್ಲಿ ಒಂದು ದೊಡ್ಡ ಭೂತವು ನಿಂತಿರುವಂತೆ ತೋರುತ್ತಿದ್ದಿತು. ದೋಣಿಯು ಇನ್ನೂ ಸ್ವಲ್ಪ ಸಮೀಪಕ್ಕೆ ಹೋಗುತಲೆ ಅದರಲ್ಲಿ ಒಂದು ಕಡೆ ಬೆಂಕಿಯು ಹೊತ್ತಿಸಿದ್ದಂತೆ ಕಾಣಿಸಿತು. ಇದೇನು ಬೆಂಕಿ ಎಂದು ವೀರಸಿಂಹನು ಕೇಳಲು, ಗುಹನು ಉಷ್ ! ಆರೋ ಅಲ್ಲಿ ಬಂದು ಇಳಿದಿರಬೇಕು ಎಂದನು.

ಆಗ ವೀರಸಿಂಹನು ತನ್ನ ಧ್ವನಿಯನ್ನು ತಗ್ಗಿಸಿ ಇದು ನಿರ್ಜನವಾದುದೆಂದು ನೀನು ಹೇಳಿರಲಿಲ್ಲವೇ ? ಎಂದನು.

ಅಹುದು ಮಹಾಸ್ವಾಮೀ ! ಆದರೆ ಕಳ್ಳವ್ಯಾಪಾರಿಗಳೂ, ಕಡಲುಗಳ್ಳರೂ ಆಗಾಗ ಬಂದು ಇಲ್ಲಿ ಇಳಿಯುವುದುಂಟು ಎಂದು ಆಗಲೇ ತಮಗೆ ನಾನು ತಿಳಿಸಿರಲಿಲ್ಲವೇ ?

ಇಲ್ಲಿರುವವರು ಕಳ್ಳರಾಗಿದ್ದರೆ ತಾವಿರುವ ಸ್ಥಳ ಎಲ್ಲರಿಗೂ ತಿಳಿಯುವಂತೆ ಬೆಂಕಿ ಹಾಕಿಕೊಂಡು ಇರುವರೇ ?

ಅವರಾರೋ ಈಗ ತಿಳಿದು ಬರುವೆನು ಎಂದು ಗುಹನು ಹೇಳಿದುದಕ್ಕೆ ವೀರಸಿಂಹನು ಅದು ಹೇಗೆ ಎಂದು ಕೇಳಲು, ಹೀಗೆ ಎಂದು ಬೆಂಕಿಯಿದ್ದ ಕಡೆ ಬಿಟ್ಟು ಮರೆಯಾಗಿರುವ ಮತ್ತೊಂದು ಕಡೆಯಲ್ಲಿ ದೋಣಿಯನ್ನು ನಿಲ್ಲಿಸಿ, ಸದ್ದಿಲ್ಲದಂತೆ ಲಂಗರನ್ನು ಇಳಿಯಬಿಟ್ಟು, ಮೆಯ್ಯ ಮೇಲಿನ ಬಟ್ಟೆಗಳನ್ನು ತೆಗೆದು, ದೋಣಿಯಲ್ಲಿಟ್ಟು, ನೀರಿನಲ್ಲಿ ಮೆಲ್ಲಗೆ ಇಳಿದನು, ಅವನೆತ್ತ ಹೋದನೆಂಬುದು ಕತ್ತಲಲ್ಲಿ ಕಾಣಿಸಲಿಲ್ಲ ;

ಆದರೆ ಒಂದು ಬಿಳಿಯ ಗೆರೆ ಮಾತ್ರ ದೋಣಿಯಿಂದ ದಡಕ್ಕೆ ನೀರಿನಲ್ಲಿ ಹಬ್ಬುವಂತೆ ತೋರಿ ಕೊನೆಗೆ ಆ ಗೆರೆಯೂ ಕಾಣಿಸಲಿಲ್ಲ ಸುಮಾರು ಅರ್ಧ ಗಂಟೆಯ ಮೇಲೆ ಪುನಃ ದಡದಿಂದ ಆ ಬಿಳಿಯ ಗೆರೆಯು ಕಾಣಿಸಿಕೊಂಡು ದೋಣಿಯ ವರೆಗೆ ಬಂದ ಕೂಡಲೆ ಗುಹನು ದೋಣಿಯನ್ನು ಹತ್ತಿ ಬಂದು, ಮಹಾಸ್ವಾಮೀ ! ಅಲ್ಲಿ ಆರು ಮಂದಿ ಇರುತ್ತಾರೆ, ಅವರಲ್ಲಿ ಇಬ್ಬರು ಕಡಲುಗಳ್ಳರು, ಮಿಕ್ಕವರು ಕಳ್ಳವ್ಯಾಪಾರಿಗಳು ಎಂದನು.

ಕಳ್ಳವ್ಯಾಪಾರಿಗಳ ಸಂಗಡ ಕಳ್ಳರಿಗೇನು ಕೆಲಸ ?

ಸ್ವಾಮೀ ! ನಾವು ಒಬ್ಬರಿಗೊಬ್ಬರು ಸಹಾಯಮಾಡದಿದ್ದರೆ ಬದುಕುವುದು ಹೇಗೆ ? ಅನೇಕಾವೃತ್ತಿ ಪೋಲೀಸಿನವರು ಕಳ್ಳರನ್ನು ಅಟ್ಟಿಸಿಕೊಂಡು ಬಂದಾಗ, ಅವರು ನಮ್ಮಂಥವರಾರನ್ನಾದರೂ ಕಂಡರೆ, ಕಾಪಿಡಿ ಎಂದು ಸಂಕೇತದಲ್ಲಿ ಬೇಡುವರು ; ಆಗ ಅವರಿಗೆ ನಾವು ಸಹಾಯ ಮಾಡಿದರೆ, ಅವರು ನಮಗೆ ಅನೇಕ ವೇಳೆ ಉಪಕಾರ ಮಾಡುವರು

ಅವರು ನಿಮಗೆ ಮಾಡುವ ಉಪಕಾರವಾವುದು ?

ನಮ್ಮ ಸರಕುಗಳನ್ನು ಇಳಿಸಲು ಸರ್ಕಾರದವರ ತೊಂದರೆಯಿಲ್ಲದೆ ಏಕಾಂತ ವಾಗಿಯೂ ಅನುಕೂಲವಾಗಿಯೂ ಇರುವ ಸ್ಥಳಗಳನ್ನು ತೋರಿಸುವುದು.

ಹಾಗಾದರೆ ನೀನೊಬ್ಬ ಕಳ್ಳವ್ಯಾಪಾರಿಯೆಂದು ತೋರುತ್ತದೆ.

ಮಹಾಸ್ವಾಮೀ, ಹೇಗಾದರೂ ಜೀವನ ನಡೆಯಬೇಕಲ್ಲಾ.

ನೀನು ಕಳ್ಳವ್ಯಾಪಾರಿಯಾಗಿದ್ದರೆ ನಿನಗೆ ಅವರೆಲ್ಲರೂ ತಿಳಿದಿರಬೇಕು.

ನಾನವರನ್ನು ಬಲ್ಲೆ. “ ಹಾಗಾದರೆ ನಾವಿಲ್ಲಿಳಿದರೆ ಭಯವೇನು ? ”

ಸ್ವಾಮೀ, ಕಳ್ಳವ್ಯಾಪಾರಿಗಳು ಕಳ್ಳರಲ್ಲ.

ಆ ಇಬ್ಬರು ಕಳ್ಳರೋ ?

ನ್ಯಾಯವಾಗಿ ನೋಡಿದರೆ ಅವರೂ ಕಳ್ಳರಲ್ಲ ; ಅವರು ತಮ್ಮ ದೇಶದಲ್ಲಿ ತಮ್ಮ ಹಗೆಗಳನ್ನು ಕೊಂದು ಅಲ್ಲಿಯ ಸರ್ಕಾರದವರ ಬಾಧೆಯಿಂದ ತಪ್ಪಿಸಿಕೊಂಡು ಇಲ್ಲಿ ಬಂದು ಸೇರಿರುವರು.

ಅವರು ಆರು ಮಂದಿಗೆ ನಾವಾರು ಮಂದಿ ಇರುವೆವು; ಅವರೇನಾದರೂ

ನಮ್ಮನ್ನು ತಂಟೆಮಾಡಿದರೆ ನಾನು ಅವರನ್ನು ಒಲಿಹಾಕಿ ಬಿಡುವೆನು ಎಂದು ತನ್ನ ಕೋವಿಗಳನ್ನು ಗುಹನಿಗೆ ತೋರಿಸಿದನು ಗುಹನು ಸ್ವಲ್ಪ ನಕ್ಕು ಹಾಗಾದರೆ ಇಲ್ಲಿ ಇಳಿಯೋಣವೋ ಎಂದುದಕೆ, ವೀರಸಿಂಹನು ಹೂಂ ಎಂದನು.

ಗುಹನ ಕಥೆಗಳನ್ನು ಸಂಪೂರ್ಣವಾಗಿ ನಂಬದಿದ್ದರೂ ವೀರಸಿಂಹನಿಗೆ ಮನಸ್ಸಿನಲ್ಲಿ ಸ್ವಲ್ಪ ಭಯವುಂಟಾಯಿತು ದೋಣಿಯವರೂ ಆ ಕಳ್ಳವ್ಯಾಪಾರಿಗಳೂ ಒಂದಾದರೆ ತನ್ನನ್ನು ಏನ ಬೇಕಾದರೂ ಮಾಡಬಹುದು, ಆದ ದರಿಂದ ಅವರ ಚರ್ಯೆಗಳನ್ನು ಬಹು ಜಾಗರೂಕತೆಯಿಂದ ನೋಡುತ್ತಲಿರಬೇಕು ಎಂದು ಯೋಚಿಸಿ, ವೀರಸಿಂಹನು ದೋಣಿಯವರ ಮೇಲೆ ಕಣ್ಣಿಟ್ಟು, ಕಯ್ಯಲ್ಲಿ ಕೋವಿಗಳನ್ನು ಹಿಡಿದು ಎದ್ದನು. ಇಷ್ಟರಲ್ಲಿ ದೋಣಿಯು ಪುನಃ ಬೆಂಕಿಯಿದ್ದ ಕಡೆಗೆ ಒರಲು, ಗುಹನು ನಾವಿಕರ ಹಾಡು ಒಂದನ್ನು ಗಟ್ಟಿಯಾಗಿ ಹಾಡಿದನು. ಆಗ ಬೆಂಕಿ ಕಾಯುತ್ತಲಿದ್ದವರು ನಮಗೆ ತಿಳಿದವರಾರೋ ಬರುತ್ತಾರೆ ಎಂದು ಸುಮ್ಮನಿದ್ದರು. ದೋಣಿಯು ಸ್ವಲ್ಪ ಮುಂದಕ್ಕೆ ಹೋಗಿ ಅಲ್ಲಿದ್ದ ಒಂದು ಕೊಲ್ಲಿಯನ್ನು ಪ್ರವೇಶಿಸಿತು; ಜನಗಳು ಇಳಿಯುವುದಕ್ಕೆ ಹೋಗಲು ಅಲ್ಲಿದ್ದ ಕಾವಲುಗಾರನೊಬ್ಬನು, ಯಾರದು ಎಂದು ಕೇಳಿ ತನ್ನ ಭುಜದ ಮೇಲಿದ್ದ ತುಪಾಕಿಯನ್ನು ಅವರಿಗೆ ಗುರಿಕಟ್ಟಿ ಹಿಡಿದನು; ಅದನ್ನು ನೋಡಿ ವೀರಸಿಂಹನು ತನ್ನ ಕೋವಿಯನ್ನು ಕಾವಲುಗಾರನ ಮೇಲೆ ಹಾರಿಸಲು ಸಿದ್ಧನಾದನು.

ಆಗ ಗುಹನು ಮಹಾಸ್ವಾಮೀ, ಸ್ವಲ್ಪ ನಿಧಾನಿಸಬೇಕು ಎಂದು ಹೇಳಿ, ಕಾವಲುಗಾರನ ಸಂಗಡ ಕೆಲವು ಸಂಕೇತವಾದ ಮಾತನ್ನಾಡಲು, ಅವನೂ ಅದೇ ಸಂಕೇತ ಭಾಷೆಯಲ್ಲಿ ಪ್ರತ್ಯುತ್ತರವನ್ನಿತ್ತಬಳಿಕ, ಮಹಾಸ್ವಾಮೀ! ನೀವು ಇಳಿಯುವುದಕ್ಕೆ ಮೊದಲು ನಿಮ್ಮ ಹೆಸರನ್ನು ಹೇಳಬೇಕು, ಹಾಗೆ ಮಾಡಲು ಇಷ್ಟವಿಲ್ಲವೋ ಎಂದು ಕೇಳಿದನು.

ಹೆಸರನ್ನು ಹೇಳಲು ನನಗೆ ಇಷ್ಟವಿಲ್ಲ ಎಂದು ವೀರಸಿಂಹನು ಹೇಳಲು, ಗುಹನು ಅದನ್ನು ಆ ಕಾವಲುಗಾರನಿಗೆ ತಿಳಿಸುತಲೆ ಅವನು ಬೆಂಕಿಯ ಮುಂದೆ ಕುಳಿತಿದ್ದವರಲ್ಲಿ ಒಬ್ಬನನ್ನು ಕರೆದು ಏನನ್ನೋ ಹೇಳಿ ಕಳಹಿಸಿದನು. ಸ್ವಲ್ಪ ಹೊತ್ತಿನ ಮೇಲೆ ಅವನು ಹಿಂದಿರುಗಿ ಬಂದು ತಾನು ಹೋಗಿದ್ದ ಕೆಲಸದ ಫಲಿತಾಂಶವನ್ನು ತಿಳಿ

ಸಿದ ಕೂಡಲೆ, ಕಾವಲುಗಾರನು ತುಪಾಕಿಯನ್ನು ಪುನಃ ಎತ್ತಿ ಭುಜದ ಮೇಲಿಟ್ಟು ಕೊಂಡು, ದೋಣಿಯಲ್ಲಿದ್ದವರನ್ನು ನೋಡಿ ಬಿಜಯಮಾಡಿಸಬಹುದು ಎಂದನು

ಎಲ್ಲರೂ ದೋಣಿಯಿಂದ ಇಳಿದು ಬಂದರು. ಬರುತ್ತ ವೀರಸಿಂಹನು ಬೆಂಕಿಯ ಬಳಿ ಕೆಲವರು ರೊಟ್ಟಿ ಸುಡುತ್ತಲಿದ್ದುದನ್ನು ನೋಡಿ, ಗುಹನೊಡನೆ ನನಗೆ ಹಸಿವು ಆಗುವುದರಿಂದ ಅವರನ್ನು ಕೇಳಿ, ಸ್ವಲ್ಪ ರೊಟ್ಟಿಯನ್ನು ತೆಗೆದುಕೊಂಡು ಬಾ ಎಂದನು. ಗುಹನು ಅವರನ್ನು ಕೇಳುತ್ತಿದ್ದಾಗ ಅವನೋ ಒಬ್ಬನು ಬಂದು ಅವನ ಕೂಡ ಮಾತನಾಡಿ ಹೋಗಲು, ಗುಹನು ವೀರಸಿಂಹನ ಬಳಿಗೆ ಬಂದು ಮಹಾಸ್ವಾಮೀ, ಅಮರ ದೇಶದಿಂದ ನೀವು ಬಂದಿರುವಿರಿ ಎಂದು ತಿಳಿದು ಇವರ ಯಜಮಾನರು ನಿಮ್ಮನ್ನು ಅವರ ಮನೆಗೇ ಊಟಕ್ಕೆ ಕರೆದುಕೊಂಡು ಬರುವಂತೆ ಹೇಳಿ ಕಳುಹಿಸಿದ್ದಾರೆ ಎಂದನು.

ಇದನ್ನು ಕೇಳಿ ವೀರಸಿಂಹನು ಓಹೋ, ಇವರಿಗೆ ಯಜಮಾನನೂ ಒಬ್ಬನು ಉಂಟೋ ಎನ್ನಲು, ಗುಹನು ಸ್ವಾಮೀ, ಯಜಮಾನರಿಲ್ಲದಿದ್ದರೆ ಅವ ಕೆಲಸ ತಾನೇ ವಿವೇಕವಾಗಿ ನಡೆದೀತು ಎಂದನು.

ಅವನ ಮನೆಯೆಲ್ಲಿದೆ?

ಅವರು ಇಲ್ಲಿಗೆ ಆಗಾಗ ಬರುತ್ತಾ ಇರುವುದರಿಂದ ಇಲ್ಲಿರುವ ಗುಹೆಯೊಂದನ್ನು ತಮ್ಮ ವಾಸಕ್ಕೆ ಅನುಕೂಲವಾಗಿರುವಂತೆ ಮಾಡಿಕೊಂಡಿರುವರು.

ನೀನು ಅವನನ್ನು ಬಲ್ಲೆಯೆಂದು ತೋರುತ್ತದೆ.

ಅವರನ್ನು ನಾನು ನೋಡಿಲ್ಲ, ಅವರ ವಿಷಯವನ್ನು ಕೇಳಿ ಬಲ್ಲೆ.

ಅವರು ಒಳ್ಳೆಯವರೋ ಕೆಟ್ಟವರೋ?

ಎರಡೂ.

ಹಾಗೆಂದರೇನು?

ಒಳ್ಳೆಯವರಿಗೆ ಒಳ್ಳೆಯವರು, ಕೆಟ್ಟವರಿಗೆ ಕೆಟ್ಟವರು.

ಇವರಿಂದ ರೊಟ್ಟಿಯನ್ನು ತೆಗೆದು ತಿನ್ನುವುದಕ್ಕಿಂತ ಯಜಮಾನನ ಮನೆಗೆ ಊಟಕ್ಕೆ ಹೋಗುವುದೇ ಮೇಲೆಂದು ತೋರುತ್ತದೆ. ನೀನೇನ ಹೇಳುತ್ತೀಯೆ ಎಂದು ವೀರಸಿಂಹನು ಕೇಳಲು; ಗುಹನು ಸ್ವಾಮೀ, ಹೋಗಬಹುದು; ಆದರೆ ಅವರು

ಒಂದು ನಿಯಮವನ್ನು ಮಾಡಿರುವರು, ಅದಕ್ಕೆ ತಾವು ಒಪ್ಪಿಕೊಳ್ಳಬೇಕಾಗುವುದು ಎಂದನು.

ಅದೇನು ?

ಒಳಗೆ ಹೋಗತಕ್ಕವರು ಬಟ್ಟೆಯಿಂದ ಕಣ್ಣುಕಟ್ಟಿಸಿಕೊಂಡು ಯಜಮಾನರ ಮುಂದೆ ನಿಂತು ಅವರು ಹೇಳುವವರೆಗೆ ಕಣ್ಣು ಕಟ್ಟನ್ನು ಬಿಚ್ಚಕೂಡದು ಇದೇ ಅವರ ನಿಯಮ.

ಈ ನಿಯಮವನ್ನು ಕೇಳುತಲೆ ವೀರಸಿಂಹನಿಗೆ ಅನುಮಾನವು ಹುಟ್ಟಿ, ಗುಹನ ಮುಖವನ್ನು ದೃಷ್ಟಿಸಿ ನೋಡಲು, ಅವನು ತಮ್ಮ ಅಭಿಪ್ರಾಯವು ನನಗೆ ಗೊತ್ತಾಯಿತು , ಇದೇನೋ ಯೋಚಿಸಿ ಮಾಡಬೇಕಾದ ಕೆಲಸವೇ ಸರಿ ಎಂದನು.

ನೀನಾಗಿದ್ದರೆ ಏನ ಮಾಡುತ್ತಲಿದ್ದೆ ?

ಊಟವೇನೋ ಒಳ್ಳೆಯದೆಂದು ಹೇಳುತ್ತಾರೆ, ಅದು ಹೇಗಾದರೂ ಇರಲಿ. ಗುಹೆಯು ನೋಡತಕ್ಕದೆಂದು ಅನೇಕರು ಹೇಳಿದ್ದಾರೆ ; ಅದನ್ನು ನೋಡಲೋಸುಗವಾದರೂ ಹೋಗಬೇಕು ನಾನಾಗಿದ್ದರೆ ಒಪ್ಪಿಕೊಳ್ಳುತಲಿದ್ದೆ

ಈ ನಿಮ್ಮ ಯಜಮಾನನು ವಿಜಾತೀಯಮನುಷ್ಯನೆಂದು ತೋರುತ್ತದೆ.

ಇದನ್ನು ಕೇಳಿ ಗುಹನು ಅತ್ತಿತ್ತ ನೋಡಿ ತನ್ನ ಧ್ವನಿಯನ್ನು ತಗ್ಗಿಸಿಕೊಂಡು ಸ್ವಾಮೀ, ಇವರು ಶ್ರೀಮಂತರೆಂದೂ, ಗುಹೆಯು ಇಂದ್ರಭವನಕ್ಕೆ ಸಮಾನವಾಗಿದೆಯೆಂದೂ ನೋಡಿದ ಜನರು ಹೇಳಿದ್ದಾರೆ. ಅದು ನಿಜವೋ ಸುಳ್ಳೋ ಗೊತ್ತಿಲ್ಲ.

ನೀನು ಹೇಳುವುದನ್ನು ನೋಡಿದರೆ ದೇವತೆಗಳು ಅರಣ್ಯಗಳಲ್ಲಿ ಅರಮನೆಗಳನ್ನೂ, ಗುಹೆಗಳಲ್ಲಿ ಕುಬೇರನ ವಾಸಕ್ಕೆ ಯೋಗ್ಯವಾದ ಭವನಗಳನ್ನೂ ನಿರ್ಮಿಸಿದರೆಂದು ಹೇಳುವ ಯವನಯಾಮಿನೀವಿನೋದಕಥೆಯೇ ಜ್ಞಾಪಕಕ್ಕೆ ಬರುವುದು.

ಸ್ವಾಮೀ, ನಾನು ಕೇಳಿದುದನ್ನು ತಮ್ಮಲ್ಲಿ ಅರಿಕೆಮಾಡಿದೆ.

ಹಾಗಾದರೆ ನೀನು ಏನ ಹೇಳುತ್ತೀಯೆ, ಹೋಗಲೋ ಬೇಡವೋ ?

ತಮ್ಮಿಷ್ಟ.

ಗುಹನು ಹೀಗೆ ಹೇಳುತ್ತತೆ ವೀರಸಿಂಹನಿಗೆ ಯೋಚನೆಯು ಹತ್ತಿತು. ಈ ಕಳ್ಳ ವ್ಯಾಪಾರಿಗಳ ಯಜಮಾನನು ಕಳ್ಳನೋ, ಸಭ್ಯನೋ ? ಗುಹನು ಹೇಳುವಂತೆ ಶ್ರೀಮಂತ

ನಾಗಿದ್ದರೆ ಇವನಿಗೆ ಕಳ್ಳವ್ಯಾಪಾರಿಗಳ ಸಹವಾಸವೇತಕ್ಕೆ? ಕಣ್ಣನ್ನು ಕಟ್ಟಿ ಗುಹೆಗೆ ಕರೆದುಕೊಂಡು ಹೋಗಲೇಕೆ? ನನ್ನಲ್ಲಿರುವ ದುಡ್ಡನ್ನು ಕಸುಗೊಳ್ಳಲೋಸುಗ ಊಟಕ್ಕೆ ಕರೆದಿರುವನೋ? ಇಲ್ಲಿರುವವರೆಲ್ಲರೂ ಅವನ ಕಡೆಯವರಾದುದರಿಂದ ಹಾಗೆ ಕಸುಗೊಳಬೇಕೆಂದಿದ್ದರೆ ಊಟಕ್ಕೆ ಕರೆಯದೆಯೇ ಆ ಕಾರ್ಯವನ್ನು ಮಾಡಲು ಬಹುದು ಊಟದಲ್ಲಿಯೇ ಆಗಲಿ, ಪಾನದಲ್ಲಿಯೇ ಆಗಲಿ ಅಮಲೇರುವಂತೆ ಔಷಧವನ್ನು ಹಾಕಿ ಮೈಯ್ಯ ಮೇಲಿರುವುದನ್ನು ಕಸುಗೊಳ್ಳುವುದುಂಟು, ಒಂದು ವೇಳೆ ಅವನು ಹಾಗೆ ಮಾಡುವುದಾದರೆ ನನಗೆ ಬಡ್ಡಿಸುವುದನ್ನೆಲ್ಲಾ ಅವನೂ ಬಡ್ಡಿಸಿಕೊಂಡು ತಿಂದ ಹೊರತು ನಾನು ಮುಟ್ಟುವುದಿಲ್ಲ ಅವನೆಂಥವನೋ, ಅವನಿರುವ ಗುಹೆಯು ಹೇಗಿರುವುದೋ, ನೋಡಬೇಕು ಎಂದು ಯೋಚಿಸಿ, ಗುಹನನ್ನು ಕುರಿತು ಊಟಕ್ಕೆ ಬರುತ್ತೇನೆಂದು ಯಜಮಾನನಿಗೆ ತಿಳಿಸು ಎಂದನು

ಈ ವಾರ್ತೆಯನ್ನು ಯಜಮಾನನಿಗೆ ತಿಳಿಸಲೋಸುಗ ಅವನ ಕಡೆ ಆಳನ್ನು ಹುಡುಕಿಕೊಂಡು ಗುಹನು ಹೊರಟ ಮೇಲೆ, ವೀರಸಿಂಹನು ಅಲ್ಲಿದ್ದ ಕಾವಲುಗಾರನ ಸಮೀಪಕ್ಕೆ ಹೋಗಿ ಇಲ್ಲಿ ಅವ ಹಡಗೂ ಇಲ್ಲವಲ್ಲಾ, ಈ ಜನರು ಹೇಗೆ ಬಂದರು ಎಂದು ಪ್ರಶ್ನೆಮಾಡಿದನು

ಅವರ ಹಡಗನ್ನು ನಾನು ಬಲ್ಲೆ

ಅದು ಹೇಗಿರುವುದು?

ಅದಕ್ಕಿಂತ ಒಳ್ಳೆಯ ಹಡಗು ಎಲ್ಲಿಯೂ ಇಲ್ಲ

ಈ ಕಳ್ಳವ್ಯಾಪಾರಿಗೆ ಅಷ್ಟು ಒಳ್ಳೆಯ ಹಡಗು ಎಲ್ಲಿ ಬಂಟಿತು?

ಅವನು ಕಳ್ಳವ್ಯಾಪಾರಿಯೆಂದು ಆರು ಹೇಳಿದರು? ನಾನು ಹೇಳಲಿಲ್ಲವಲ್ಲಾ?

ನೀನು ಹೇಳಲಿಲ್ಲ, ಗುಹನು ಹೇಳಿದ ಹಾಗಿದ್ದಿತು

ಗುಹನು ಅವನನ್ನು ನೋಡಿರಲಾರನು, ಅಥವಾ ನೋಡಿದ್ದರೂ ದೂರದಲ್ಲಿ ನೋಡಿರಬಹುದು.

ಹಾಗಾದರೆ ಅವನಾರು?

ಅವನನ್ನು ರಾಜಪುತ್ರನೆಂದು ಕೆಲವರು ಹೇಳುವರು, ಇನ್ನು ಕೆಲವರು ಶ್ರೀಮಂತನೆಂದು ಹೇಳುವರು ರಾಜಕುಮಾರನೋ ಶ್ರೀಮಂತನೋ ನನಗೆ ಗೊತ್ತಿಲ್ಲ.

ಅವನಲ್ಲಿ ವಿಶೇಷಧನವಿರುವುದು ; ಇಷ್ಟಬಂದವರಿಗೆ ಯಥೇಚ್ಛವಾಗಿ ದ್ರವ್ಯವನ್ನು ಕೊಡುವನು, ಆರಿಗಾದರೂ ಆಪತ್ತು ಒಂದು ಸರ್ಕಾರದವರಿಂದ ಪೀಡಿತರಾದರೆ, ಅವರು ಅಪರಾಧಿಗಳಾಗಿದ್ದರೂ ಕಾಪಿಡುವನು. ಅವನಿಗೆ ಈ ಕಡಲಿನಲ್ಲಿರುವ ಕಳ್ಳರೂ ಕಳ್ಳ ವ್ಯಾಪಾರಿಗಳೂ ಭೃತ್ಯರು, ಪ್ರಾಣಹೋದರೂ ಅವನು ಆವಾಗಲೂ ಸಂಚಾರಮಾ ಡುತ್ತಲೇ ಇರುವನು ; ಈ ದ್ವೀಪಕ್ಕೂ ಆಗಾಗ ಬರುವುದುಂಟು.

ಅವನ ಹೆಸರೇನು ?

ಅವನ ನಿಜವಾದ ಹೆಸರು ಆರಿಗೂ ತಿಳಿಯದು ; ಆವಾಗಲೂ ಸಮುದ್ರದಲ್ಲೇ ಸುತ್ತುತ್ತಲಿರುವುದರಿಂದ ನಾವಿಕಸ್ಸೈಂಧವನೆಂದು ಎಲ್ಲರೂ ಕರೆಯುವರು. ಅವನೂ ಅದೇ ಹೆಸರನ್ನೇ ಹೇಳುವನು.

ಅವನು ವಾಸವಾಗಿರುವುದು ಎಲ್ಲಿ? "ಸಮುದ್ರದಲ್ಲಿ."

ಆವ ದೇಶದವನು ?

ಅದು ಆರಿಗೂ ತಿಳಿಯದು ; ಒಂದೊಂದು ವೇಳೆ ಒಂದೊಂದು ದೇಶದವನಂತೆ ತೋರುವನು. ಪ್ರತಿಯೊಂದು ಭಾಷೆಯನ್ನೂ ಆ ದೇಶೀಯರಂತೆಯೇ ಚೆನ್ನಾಗಿ ಆಡುವನು.

ನೀನು ಅವನನ್ನು ಆವಾಗಲಾದರೂ ನೋಡಿರುವೆಯೋ ?

ಅಡಿಗಡಿಗೆ ನೋಡುವುದುಂಟು.

ಅವನೆಂತಹ ಮನುಷ್ಯ ?

ತಮ್ಮ ಪ್ರಶ್ನೆಯು ನನಗೆ ಸರಿಯಾಗಿ ತಿಳಿಯಲಿಲ್ಲ ಹೇಗಾದರೂ ಈಗ ತಾವು ಅವನಲ್ಲಿ ದಯೆಮಾಡಿಸುತ್ತೀರಾಗಿ ತಾವೇ ಗೊತ್ತುಮಾಡಿಕೊಳ್ಳಬಹುದು.

ಎಲ್ಲಿ ಊಟಮಾಡುತ್ತಾನೆ ? "ಗುಹೆಯಲ್ಲಿ."

ಈ ದ್ವೀಪವು ನಿರ್ಜನವಾದುದಲ್ಲವೇ ? "ಅಹುದು."

ಆರೂ ಇಲ್ಲದ ವೇಳೆಯಲ್ಲಿ ಗುಹೆಯನ್ನು ಹೊಕ್ಕು ನೋಡಬೇಕೆಂಬ ಆಸೆಯು ನಿನಗೆ ಆವಾಗಲೂ ಆಗಲಿಲ್ಲವೋ ?

ಸ್ವಾಮೀ ! ಆ ಆಸೆಯಿಂದಲೇ ಎಷ್ಟೋಜನರು ಬಹು ಪ್ರಯತ್ನಪಟ್ಟರು, ಆರಿಗೂ ಗುಹೆಯ ಬಾಗಿಲೇ ಗೋಚರವಾಗಲಿಲ್ಲ ಆ ಯಜಮಾನನಲ್ಲಿರುವ ಮಂತ್ರವನ್ನು

ಹೇಳಿದ ಹೊರತು ಗುಹೆಯು ಬಾಯಿಬಿಡುವುದೂ ಇಲ್ಲ, ಮುಚ್ಚುವುದೂ ಇಲ್ಲವೆಂದು ಜನರು ಹೇಳುವರು; ಅದು ನಿಜವೆಂದು ನನಗೂ ತೋರುತ್ತದೆ.

ವೀರಸಿಂಹನು ಈ ಯಜಮಾನನಾರೆಂಬುದನ್ನು ತಿಳಿಯಬೇಕೆಂದು ಎಷ್ಟೆಷ್ಟು ವಿಚಾರಿಸಿದರೂ ಅದು ಅಷ್ಟಷ್ಟು ಗೂಢವಾಗಿ ತೋರುತ್ತಲಿದ್ದುದೇ ಹೊರತು ಅವುದೂ ವ್ಯಕ್ತವಾಗಲಿಲ್ಲ ಯಜಮಾನನ ಸಂಗಡ ತಾನೇ ಮಾತನಾಡಿ ತಿಳಿದುಕೊಳ್ಳಬಹುದೆಂದು ಯೋಚಿಸುತ್ತಿರುವ ವೇಳೆಗೆ ಸರಿಯಾಗಿ, ಒಬ್ಬ ಆಳು ಬಂದು ಮಹಾಸ್ವಾಮೀ! ಯಜಮಾನರು ತಮಗೋಸ್ಕರ ಕಾದಿರುತ್ತಾರೆ ಬಿಜಯಮಾಡಿಸಬೇಕು ಎಂದು ಹೇಳಲು, ವೀರಸಿಂಹನು ತನ್ನ ಕರವಸ್ತ್ರದಿಂದ ಕಣ್ಣನ್ನು ಕಟ್ಟಿಸಿಕೊಂಡು ಆಳಿನ ಕಯ್ಯನ್ನು ಹಿಡಿದುಕೊಂಡು ಅವನ ಹಿಂದ ಹೋದನು

ಆ ಆಳು ನೆಟ್ಟಗೆ ಹೋಗದಂತೆ ಕೆಲವು ವೇಳೆ ಎಡಕ್ಕೂ ಬಲಕ್ಕೂ ತಿರುಗುತ್ತ, ಕೆಲವು ವೇಳೆ ಏರುತ್ತ ಇಳಿಯುತ್ತ, ಸ್ವಲ್ಪ ದೂರ ನೆಟ್ಟಗೆ ಹೋಗುತ್ತ, ಈ ರೀತಿ ಕರೆದುಕೊಂಡು ಹೋಗುತ್ತಿರಲು, ವೀರಸಿಂಹನಿಗೆ ಆ ದಾರಿಯನ್ನು ನೆನಪಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಸುಮಾರು ಹತ್ತು ನಿಮಿಷಗಳ ವರಗ ನಡೆದು ಆಳು ವೀರಸಿಂಹನನ್ನು ಯಜಮಾನನ ಮುಂದೆ ನಿಲ್ಲಿಸಿದನು ಆಗ ಯಜಮಾನನು ಸ್ವಾಮಿ, ಈಗ ತಾವು ಕಣ್ಣಕಟ್ಟನ್ನು ಬಿಚ್ಚಬಹುದು; ನನ್ನ ಈ ಗುಡಿಸಲಿಗೆ ತಾವು ಬಿಜಯಮಾಡಿಸಿದುದು ನನ್ನ ಪುಣ್ಯವೇ ಸರಿ. ಇದನ್ನು ತಮ್ಮ ಮನೆಯಂತೆಯೇ ಭಾವಿಸಿ ಸಂಕೋಚಪಡದೆ ಇರಬೇಕೆಂದು ಪ್ರಾರ್ಥಿಸುತ್ತೇನೆ ಎನ್ನಲು, ಅಷ್ಟೇ ಸಾಕೆಂದು ವೀರಸಿಂಹನು ಕಣ್ಣ ಕಟ್ಟನ್ನು ಬಿಚ್ಚಿದನು.

ಆ ಕಳ್ಳರೊಡೆಯನಿಗೆ ನಲವತ್ತು ವಯಸ್ಸು. ಅವನು ಅಷ್ಟು ಉದ್ದವಾಗಿಯೂ ಇರಲಿಲ್ಲ, ಗಿಡ್ಡನಾಗಿಯೂ ಇರಲಿಲ್ಲ; ಅವನು ಅರಬ್ಬೀದೇಶದವರ ಉಡುಪನ್ನು ತೊಟ್ಟಿದ್ದನು, ಅವನ ಮುಖದಲ್ಲಿ ರಕ್ತಪುಷ್ಟಿಯಿಲ್ಲದಿದ್ದರೂ ಬುದ್ಧಿವಿವೇಕಗಳು ತುಂಬಿ ತುಳುಕಾಡುತ್ತಲಿದ್ದುವು. ಸಂಪಗೆಯ ಮೊಗ್ಗೆಯಂತಿರುವ ಮೂಗೂ, ಕಮಲದಳದಂತಿರುವ ಕಣ್ಣುಗಳೂ, ತಿದ್ದಿದಂತಿರುವ ಹುಬ್ಬುಗಳೂ, ಗಂಭೀರವಾದ ಮಾತೂ, ಇಂಪಾದ ಧ್ವನಿಯೂ, ಅವನು ಅಸಾಧಾರಣನೆಂಬುದನ್ನು ಸೂಚಿಸುತ್ತಲಿದ್ದುವು.

ಸುಮಾರು ಒಂದು ನಿಮಿಷದ ವರೆಗೆ ವೀರಸಿಂಹನು ಯಜಮಾನನನ್ನೇ ನೋಡು

ತ್ತಲಿದ್ದು, ತರುವಾಯ ಗುಹೆಯನ್ನು ನೋಡಿದನು. ಗುಹನು ಇಂದ್ರಭವನವೆಂದು ಹೇಳಿದುದು ಕಡಿಮೆ ಎಂದು ತೋರಿತು ಅದು ಸುಮಾರಾಗಿ ಅಗಲವಾಗಿದ್ದಿತು, ನೆಲದ ಮೇಲೆ ಪಾರಶೀದೇಶದ ಅಮೌಲ್ಯವಾದ ರತ್ನಗಂಬಳಿಗಳನ್ನು ಹಾಸಿದ್ದರು, ಅವು ಗಳ ಮೇಲೆ ಅಲ್ಲಲ್ಲಿ ಶ್ಲಾಘ್ಯವಾದ ಶಿಲೆಯ ಮೇಜು ಕುರ್ಚಿಗಳು ಇದ್ದುವು ನಾಲ್ಕು ಮೂಲೆಗಳಲ್ಲಿಯೂ, ಗೋಡೆಗಳಲ್ಲಿ ಕೆಲವು ಕಡೆಗಳಲ್ಲಿಯೂ, ಅಪ್ಸರಸ್ತ್ರೀಯರಂತೆ ತೋರುತ್ತಲಿದ್ದ ಅಮೃತಶಿಲೆಯ ಪ್ರತ್ತಳಿಗಳಿದ್ದುವು. ಆಯುಧಶಾಲೆಯೆಂದು ಹೇಳ ಬಹುದಾದ ಗುಹೆಯ ಒಂದು ಭಾಗವು ಹೊಸದಾಗಿ ಮಾಡಿದ ಕೋವಿಗಳಿಂದಲೂ ರತ್ನಖಚಿತವಾದ ಹಿಡಿಗಳುಳ್ಳ ಕತ್ತಿ ಕಠಾರಿ ಈಟಿಗಳಿಂದಲೂ, ನಾಲ್ಕು ಗೋಡೆಗಳ ಲ್ಲಿಯೂ ಕಾಣಬರುತ್ತಲಿದ್ದ ಮೃಗಗಳ ಕೊಂಬುಗಳಿಂದಲೂ, ಸೂರ್ಯಚಂದ್ರರಂತೆ ಪ್ರಕಾ ಶಿಸುತ್ತಲಿರುವ ದೀಪಗಳಿಂದಲೂ, ಅಲಂಕೃತವಾಗಿದ್ದಿತು. ಸೂರಿನಲ್ಲಿ ಭಂಗಾರದ ಮುಲಾಮು ಮಾಡಿದ್ದ ಬೆಳ್ಳಿ ಸರಪಣಿಗಳಿಂದ ಎರಡು ಪಾರ್ಶ್ವದಲ್ಲಿಯೂ ತೂಗು ಮಂಚಗಳು ತೂಗುತ್ತಲಿದ್ದುವು.

ಇವುಗಳೆಲ್ಲವನ್ನೂ ನೋಡಿ ಭ್ರಮಿಸಿ ನಿಂತಿದ್ದ ವೀರಸಿಂಹನನ್ನು ಕುರಿತು, ಯಜ ಮಾನನು ಸ್ವಾಮೀ! ತಮಗೆ ಅಜ್ಞಾತನಾಮರಾಗಿರಬೇಕೆಂಬ ಅಭಿಲಾಷೆಯು ಇರುವು ದೆಂದು ಕೇಳಿರುವೆನಾಗಿ ನಿಮ್ಮ ಹೆಸರನ್ನು ನಾನು ಕೇಳುವುದಿಲ್ಲ; ಆದರೆ ಇಬ್ಬರು ಒಂದು ಕಡೆ ಸೇರಿ ಒಬ್ಬರ ಹೆಸರು ಒಬ್ಬರಿಗೆ ತಿಳಿಯದೆ ಮಾತನಾಡುವುದು ಕಷ್ಟವಾ ದುದರಿಂದ, ನಿಮಗಿಷ್ಟವಾದುದೊಂದು ಹೆಸರನ್ನು ಹೇಳಿರಿ. ನನ್ನನ್ನು ನಾವಿಕ ಸೈಂಧವನೆಂದು ನೀವು ಕರೆಯಿರಿ ಎಂದನು.

ಸ್ವಾಮೀ ನಾವಿಕಸೈಂಧವರೇ, ಅರಣ್ಯಗಳಲ್ಲಿ ಅರಮನೆಗಳೂ ಗುಹೆಗಳಲ್ಲಿ ಇಂದ್ರಭವನಗಳೂ ಉಂಟೆಂದು ಯವನಯಾಮಿನೀಕಥೆಗಳಲ್ಲಿ ಕೇಳಿದ್ದೆನೇ ಹೊರತು ಇದುವರೆಗೂ ನೋಡಿರಲಿಲ್ಲ; ಈ ಕಲ್ಲುಬಂಡೆಯ ಎಡತಿಟ್ಟಿನಲ್ಲಿ ಇಂತಹ ಐಶ್ವರ್ಯಯುಕ್ತ ವಾದ ಗುಹೆಯೂ, ತಮ್ಮ ಹೆಸರೂ ಆ ಕಥೆಯಲ್ಲಿರುವಂತೆಯೇ ಇರುವುವು. ಈಗ ನಾನು ಈ ಗುಹೆಯಲ್ಲಿ ಇರುವುದರಿಂದ 'ಅಲ್ಲಿಬಾಬ' ಎಂಬ ಹೆಸರು ನನಗೊಪ್ಪುವುದು ಎಂದನು.

ಸರಿಯೆ. ಈ ನಿಮ್ಮ ಹೆಸರಿನಿಂದ, ಆ ಕಥೆಗಳಲ್ಲಿ ನನಗಿರುವ ರುಚಿಯು ನಿಮಗೂ

ಇರುವಂತೆ ತೋರುತ್ತಲಿದೆ, ಅದು ಹಾಗಿರಲಿ. ವರ್ಷದಲ್ಲಿ ಮುನ್ನೂರರವತ್ತು ದಿನಗಳೂ ನಾನಿಲ್ಲಿರುವುದಿಲ್ಲವಾದ ಕಾರಣ, ಗುಹೆಯ ಬಾಗಿಲು ಅರಿಗಾದರೂ ತಿಳಿದರೆ ನಾನಿಲ್ಲದ ವೇಳೆಯಲ್ಲಿ ಇಲ್ಲಿರುವ ಪದಾರ್ಥಗಳನ್ನು ಲೂಟಿಮಾಡುವರು. ಪದಾರ್ಥಗಳು ಅಷ್ಟು ಬೆಲೆಯುಳ್ಳುವಲ್ಲವಾದರೂ ಸಮಯದಲ್ಲಿ ಅವಿಲ್ಲದಿದ್ದರೆ ತುಂಬಾ ಅನನುಕೂಲವಾಗುವುದು, ಅದಕ್ಕಾಗಿಯೇ ಹೊಸಬರು ಆರಾದರೂ ನನ್ನಲ್ಲಿಗೆ ಬಂದರೆ ಅವರ ಕಣ್ಣನ್ನು ಕಟ್ಟಿ ಕರೆದು ತರುವ ನಿಯಮವನ್ನು ಮಾಡಿರುವೆನು ತಮಗೆ ಇದರಿಂದುಂಟಾದ ತೊಂದರೆಯನ್ನು ಕ್ಷಮಿಸಬೇಕು

ನೀವು ಮಾಡಿರುವ ನಿಯಮವೇನೋ ಅತ್ಯವಶ್ಯಕವಾದುದೇ, ಇದರಿಂದುಂಟಾಗುವ ಸ್ವಲ್ಪ ತೊಂದರೆಯು ನಿಮ್ಮ ದರ್ಶನಲಾಭದಿಂದಲೂ ಉಪಚಾರೋಕ್ತಿಗಳಿಂದಲೂ ಉಂಟಾಗುವ ಆನಂದದಲ್ಲಿ ಲೀನವಾಗಿ ಹೋಗುವುದು.

ನೀವಿಲ್ಲಿಗೆ ಬಿಜಯಮಾಡಿಸುವ ವರ್ತಮಾನವು ಕೊಂಚ ಮುಂದಾಗಿ ನನಗೆ ತಿಳಿದಿದ್ದರೆ ಭೋಜನಕ್ಕೆ ತಕ್ಕ ಮಟ್ಟಿಗೆ ಅನುಕೂಲಪಡಿಸುತ್ತಿದ್ದೆನು. ಈಗಲೂ ನಿಮ್ಮ ಸೇವಕನು ಅಣಿಮಾಡಿಸಿರುವ ಭೋಜನವನ್ನು ಪ್ರೀತಿಯಿಂದ ಅಂಗೀಕರಿಸಬೇಕು.

ಊಟವೂ ಈ ಗುಡಿಸಲಿಗೆ ತಕ್ಕಂತೆ ಇದ್ದರೆ ಅದು ರಾಜಯೋಗ್ಯವಾದುದು ಎಂದು ಹೇಳಲು ಸಂದೇಹವೇ ಇಲ್ಲ

ವೀರಸಿಂಹನು ಹೀಗೆಂದ ಕೂಡಲೆ, ಸೈಂಧವನು ವಾಮನಭಟ್ಟ, ಭೋಜನವು ಸಿದ್ಧವಾಗಿದೆಯೋ ಎಂದು ಕೇಳಿದನು ಆಗ ಗೋಡೆಯ ಆವುದೋ ಒಂದು ಕಡೆಯಿಂದ ಸದ್ದಿಲ್ಲದೆ ಬಾಗಿಲನ್ನು ತೆಗೆದುಕೊಂಡು, ಕಾಶ್ಮೀರದೇಶದವನಂತೆ ಆರುವರೆ ಅಡಿ ಉದ್ದವಾದವನೊಬ್ಬನು ತಲೆಹಾಕಿ ಎಲ್ಲವೂ ಸಿದ್ಧವಾಗಿರುವುವು ಎಂದು ಸನ್ನೆ ಮಾಡಿ, ಭೋಜನಶಾಲೆಯ ಕಡೆಗೆ ಕೈನೀಡಿ ಬಾಗಿಲನ್ನು ಮುಚ್ಚಿಕೊಂಡು ಹೋದನು. ಅನಂತರ ಸೈಂಧವನು ವೀರಸಿಂಹನನ್ನು ಭೋಜನಶಾಲೆಗೆ ಕರೆದುಕೊಂಡು ಹೋಗಿ ಅಲ್ಲಿದ್ದ ಆಸನಗಳಲ್ಲಿ ಒಂದರ ಮೇಲೆ ಅವನನ್ನು ಕುಳ್ಳಿರಿಸಿ ತಾನೂ ಒಂದರ ಮೇಲೆ ಕುಳಿತನು.

ಗುಹೆಯ ಅಂದವನ್ನು ಕಂಡು ಮೊದಲೇ ಬೆರಗಾಗಿದ್ದ ವೀರಸಿಂಹನು, ಭೋಜನಶಾಲೆಯ ಅಚ್ಚುಕಟ್ಟನ್ನು ನೋಡಿ ಮತ್ತೂ ಬೆರಗಾದನು. ಅದು ಸಣ್ಣದಾಗಿದ್ದರೂ

ಬಹು ರಮಣೀಯವಾಗಿದ್ದಿತು. ನೆಲವು ಕಣ್ಣಡಿಯಂತಿರುವ ನಾನಾ ಬಣ್ಣದ ಅಪೂರ್ವ ವಾದ ಶಿಲೆಗಳಿಂದ ಖಚಿತವಾಗಿದ್ದಿತು, ಮೂಲೆಗಳಲ್ಲಿ ಗಂಧರ್ವಪ್ರತಿಮೆಗಳು ಫಲಭರಿತ ಗಳಾದ ಬಂಗಾರದ ತಟ್ಟೆಗಳನ್ನು ಹಿಡಿದು ಅತಿಥಿಗಳಿಗೆ ಒಪ್ಪಿಸುವಂತೆ ನಿಂತಿದ್ದುವು; ತಟ್ಟೆಗಳಲ್ಲಿ ಬಡ್ಡಿಸಿದ್ದ ಅಸಂಖ್ಯಾತವಾದ ಪದಾರ್ಥಗಳ ಇಂಪಾದ ಕಂಪು ನಾಲಗೆ ಯಲ್ಲಿ ನೀರನ್ನೂರಿಸುತ್ತಿದ್ದಿತು. ವೀರಸಿಂಹನಿಗೆ ಇವೆಲ್ಲವೂ ಸ್ವಪ್ನವೋ ಎಂಬ ಭಯ ವುಂಟಾಯಿತು. ಅದನ್ನು ತಿಳಿದು ಸೈಂಧವನು ಸ್ವಾಮೀ, ಅಲ್ಲಿಬಾಬರೇ, ಅಡಿಗೆ ಮಾಡಿದ ಅಲ್ಪಸ್ವಲ್ಪ ಪದಾರ್ಥಗಳನ್ನು ಬಡ್ಡಿಸಿದುದಾಯಿತು; ಇನ್ನು ಭೋಜನಮಾಡ ಬಹುದು ಎನ್ನಲು, ವೀರಸಿಂಹನು ಎಚ್ಚತ್ತು ಅಗಬಹುದು ಎಂದನು

ಆ ಕಾಲದಲ್ಲಿ ವಾಮನಭಟ್ಟನು ಅವ ಮಾತನ್ನೂ ಆಡದೆ ಕಾಲಕಾಲಕ್ಕೆ ತಕ್ಕಂತೆ ಭಕ್ತಿ, ವಿಶ್ವಾಸ, ಜಾಗರೂಕತೆ, ವಿವೇಕಗಳಿಂದ ತನ್ನ ಕೆಲಸವನ್ನು ಮಾಡಿಕೊಂಡು ಹೋಗುವುದನ್ನು ನೋಡಿ, ವೀರಸಿಂಹನಿಗೆ ಅತ್ಯಾಶ್ಚರ್ಯವುಂಟಾಗಿ, ಸ್ವಾಮೀ, ಸೈಂಧ ವರೇ, ನೀವು ಒಳ್ಳೆಯ ಯೋಗ್ಯನಾದ ಪರಿಚಾರಕನನ್ನು ಸಂಪಾದಿಸಿದ್ದೀರಿ ಎನ್ನಲು, ಸೈಂಧವನು ಅಯ್ಯೋ ಪಾಪ, ಒಂದಾನೊಂದು ಕಾಲದಲ್ಲಿ ಅವನ ಪ್ರಾಣವನ್ನು ನಾನು ಕಾಪಿಟ್ಟೆನು; ಅದಕ್ಕೋಸುಗ ಅವನು ನನಗೆ ಬಹು ಕೃತಜ್ಞನಾಗಿದ್ದಾನೆ ಎಂದು ಹೇಳಿದ ಕೂಡಲೆ ವಾಮನಭಟ್ಟನು ಎರಡು ಕೈಗಳನ್ನೂ ಜೋಡಿಸಿಕೊಂಡು ಸೈಂಧವ ನಿಗೆ ವಂದಿಸಿದನು.

ಸ್ವಾಮೀ! ಇವನಿಗೆ ನೀವು ಮಾಡಿದ ಉಪಕಾರವಾವುದು ಎಂದು ವೀರಸಿಂ ಹನು ಕೇಳಲು, ಸೈಂಧವನು ಸ್ವಾಮೀ, ಕೇಳಿರಿ, ಇವನು ತನ್ನ ದೇಶದಲ್ಲಿ ಅರಸನಾ ಗಿದ್ದ ಒಬ್ಬ ನವಾಬನ ಅರಮನೆಯಲ್ಲಿ ಒಳ್ಳೆಯ ಕೆಲಸದಲ್ಲಿದ್ದನು. ಒಂದಾನೊಂದು ದಿನ ಇವನು ಅಂತಃಪುರಪ್ರವೇಶಮಾಡಿದನೆಂದು ನವಾಬನಿಗೆ ಹೇಗೋ ಅನುಮಾನವು ಹುಟ್ಟಿ, ಮೊದಲನೆಯ ದಿನ ಇವನ ನಾಲಗೆಯನ್ನು ಸೀಳಿ, ಮಾರನೆಯ ದಿನ ಕೈಕಾಲು ಗಳನ್ನು ಕತ್ತರಿಸಿ, ಮೂರನೆಯ ದಿನ ಶಿರಚ್ಛೇದನವನ್ನು ಮಾಡಿ ಕೊಲ್ಲುವಂತೆ ಆಜ್ಞಾಪಿ ಸಿದನು. ಅದರಂತೆಯೇ ಮೊದಲನೆಯ ದಿನ ಇವನ ನಾಲಗೆಯನ್ನು ಕುಯ್ದರು. ಇದು ಇವನಿಗೆ ಕ್ರೂರವಾದ ಶಿಕ್ಷೆಯಾಗಿದ್ದರೂ ನನಗೆ ಅನುಕೂಲವಾಯಿತು. ಮೂಗ ನಾಗಿರುವ ಆಳು ಒಬ್ಬನಿದ್ದರೆ ಅನುಕೂಲವೆಂದು ಬಹು ದಿವಸಗಳಿಂದ ನನಗೆ ಯೋ

ಚನೆಯಿದ್ದಿತು ; ಇವನ ನಾಲಗೆಯನ್ನು ಕೊಯ್ಯುವಾಗ ಅಕಸ್ಮಾತ್ತಾಗಿ ನಾನಲ್ಲಿಗೆ ಹೋದೆನು. ಇವನನ್ನು ನೋಡಿ ಯೋಗ್ಯನಾದವನೆಂದು ತಿಳಿದು, ನವಾಬನ ಸಂಗಡ ಮಾತನಾಡಿ ಅವನಿಗೆ ಬೇಕಾಗಿದ್ದ ಕೆಲವು ತುಪಾಕಿಗಳನ್ನೂ ವಜ್ರಗಳನ್ನೂ ಕೊಟ್ಟು ಅವನಿಂದ ಇವನನ್ನು ಕ್ರಯಕ್ಕೆ ಕೊಂಡೆನು. ವಿಕ್ರೀತನಾದವನ ಪ್ರಾಣವು ಯಜಮಾನನ ಅಧೀನವೆಂಬುದು ವಾಮನಭಟ್ಟನಿಗೆ ತಿಳಿಯುವುದು , ಆದುದರಿಂದ ಅವನು ನನ್ನಲ್ಲಿ ಶ್ರದ್ಧಾಭಕ್ತಿಯುಕ್ತನಾಗಿರುವನು ಎಂದು ಹೇಳಿ ಸೈಂಧವನು ವಾಮನಭಟ್ಟನನ್ನು ನೋಡಲು, ಅವನು ಅಹುದೆಂದು ತಲೆಯನ್ನು ಅಲುಗಿಸಿದನು.

ಈ ಕ್ರೂರಮಿಶ್ರವಾದ ದಯಾಕಾರ್ಯಕ್ಕಾಗಿ ಸಂತೋಷಪಡಬೇಕೋ ಕ್ರೂರತರವಾದ ಸೈಂಧವನ ಕಥನಕ್ಕಾಗಿ ವ್ಯಸನಪಡಬೇಕೋ ಅವುದೂ ತಿಳಿಯದೆ ವೀರಸಿಂಹನು ಸ್ವಲ್ಪಕಾಲ ಸುಮ್ಮನಿದ್ದು, ಬೇರೆ ಪ್ರಸ್ತಾಪವನ್ನು ಮಾಡುವುದು ಉತ್ತಮವೆಂದು ತಿಳಿದು ನೀವು ಅವಾಗಲೂ ಪ್ರಯಾಣ ಮಾಡುತ್ತಲೇ ಇರುವಿರೆಂದು ತೋರುತ್ತಲಿದೆ ಎಂದನು.

ಸ್ವಾಮೀ, ಒಂದಾನೊಂದು ಕಾಲದಲ್ಲಿ ಕೆಲವು ಹರಕೆಗಳನ್ನು ಮಾಡಿಕೊಂಡಿದ್ದೆನು ; ಆಗ ಅವುಗಳು ನೆರವೇರುವುವೆಂಬ ನಂಬುಗೆಯು ನನಗಿರಲಿಲ್ಲ ಅವುಗಳನು ಹೇಗಾದರೂ ನೆರವೇರಿಸಬೇಕೆಂಬ ಅಭಿಲಾಷೆಯಿಂದ ಅನೇಕದೇಶಗಳನ್ನು ಸುತ್ತಿ ಅನೇಕವಿದ್ಯೆಗಳನ್ನು ಕಲಿತು ದೈವಾನುಗ್ರಹದಿಂದ ಆ ಹರಕೆಗಳಲ್ಲಿ ಕೆಲವನ್ನು ಸಲ್ಲಿಸಿದೆನು ; ಮಿಕ್ಕುವುಗಳನ್ನು ಸಕಾಲದಲ್ಲಿ ಸಲ್ಲಿಸುವೆನು ಎಂದನು.

ಆ ಮಾತುಗಳನ್ನಾಡುವ ಸೈಂಧವನ ಕಣ್ಣುಗಳು ಕೆಂಡದಂತಾಗಿ ಬೆಂಕಿಯನ್ನುಗಿಯುವುದನ್ನು ವೀರಸಿಂಹನು ಕಂಡು ಸ್ವಾಮೀ, ನೀವು ವಿಶೇಷಕಷ್ಟಪಟ್ಟಿರುವಂತೆ ತೋರುತ್ತಲಿದೆಯೆಂದನು. ಅದಕ್ಕೆ ಸೈಂಧವನು ಸ್ವಲ್ಪ ಬೆಚ್ಚಿ, ವೀರಸಿಂಹನನ್ನು ಅನುಮಾನದಿಂದ ನೋಡಿ ನೀವು ಹೀಗೆ ಊಹಿಸಲು ಕಾರಣವೇನು ಎಂದು ಕೇಳಿದನು.

ನಿಮ್ಮ ಆಕಾರ ಇಂಗಿತ ಭಾಷೆಗಳನ್ನು ನೋಡಿ ನನಗೆ ಹಾಗೆ ತೋರಿತು.

ಅಯ್ಯಾ ಅಲ್ಲಿಬಾಬರೆ, ಕೇಳಿರಿ. ನನ್ನಂಥ ಸುಖಪುರುಷನು ಈ ಲೋಕದಲ್ಲಿಯೇ ಇಲ್ಲ. ನನಗೂ ಪಕ್ಷಿಗಳಂತೆ ರೆಕ್ಕೆಗಳಿರುವುದರಿಂದ ಅವುಗಳಂತೆಯೇ ಸ್ವೇಚ್ಛೆಯಾಗಿ ಸಂಚಾರಮಾಡುತ್ತಲಿರುವೆನು. ನನ ಪದವಿಯ ಮುಂದೆ ರಾಜರ ಪದವಿಗಳು

ಏನು ? ಅವರಿಗೆ ತಮ್ಮ ತಮ್ಮ ರಾಜ್ಯಗಳಲ್ಲಿ ನಡೆಯುವ ಮರ್ಯಾದೆಯೂ ಸುಖವೂ ಮತ್ತೊಂದು ಕಡೆ ದೊರೆಯಲಾರದು ; ಸೇವಕರು ಅವರ ಉಪ್ಪನ್ನು ತಿನ್ನುತ್ತಲಿದ್ದರೂ ಅವರಿಗೇ ಎರಡನ್ನು ಒಗೆಯುವರು ; ಅವರ ರಾಜ್ಯದ ಎಲ್ಲೆಯೇ ಅವರ ಐಶ್ವರ್ಯದ ಎಲ್ಲೆ ; ಅವರ ಕಟ್ಟಳೆಗಳನ್ನು ಮೀರುವವರು ಅನ್ಯದೇಶದಲ್ಲಿದ್ದರೆ ಅವರನ್ನು ಅವರು ಶಿಕ್ಷಿಸಲಾರರು. ನಾನೋ ! ಈ ಭೂಲೋಕದಲ್ಲಿ ಎಲ್ಲಿದ್ದರೂ ನನ್ನ ಸೇವಕರು ನನ ಮನೋಭೀಷ್ಟಗಳನ್ನು ಕ್ಷಣಮಾತ್ರದಲ್ಲಿ ವಂಚನೆಯಿಲ್ಲದೆ ನಡೆಯಿಸುವರು ; ನನ್ನ ಐಶ್ವರ್ಯಕ್ಕೆ ಪಾರವೇ ಇಲ್ಲ ; ನನ್ನ ಮರ್ಯಾದೆಯೂ ಸುಖವೂ ನಾನು ಎಲ್ಲಿ ಹೋದರೂ ಒಂದೇ ರೀತಿಯಾಗಿ ನಡೆಯುವುದು ; ನನ್ನ ಶಾಸನವನ್ನು ಮೀರಿ ನಡೆಯುವವರನ್ನು ಎಲ್ಲಿದ್ದರೂ ಇತರರಿಗೆ ಲೇಶವೂ ತಿಳಿಯದಂತೆ ನನ್ನಿಂದ ನಿಯತವಾದ ಶಿಕ್ಷೆಗಳಿಂದ ಶಿಕ್ಷಿಸುವೆನು. ಹಾ ! ನನ್ನ ಐಶ್ವರ್ಯವೂ, ಶಕ್ತಿಯೂ, ಅನುಭವವೂ ನಿಮಗಿದ್ದಿದ್ದರೆ ನೀವೂ ನನ್ನಂತೆಯೇ ಇರಲು ಅಪೇಕ್ಷಿಸುತ್ತಲಿರುವಿರಲ್ಲದೆ, ಉದ್ದೇಶವಿಲ್ಲದೆ ಒಂದು ನಿಮಿಷವಾದರೂ ಜನಗಳ ಮಧ್ಯೆ ಇರಲಾರಿರಿ.

ನಿಮ್ಮ ಉದ್ದೇಶವೇನು, ಪ್ರತೀಕಾರವೋ, ಎಂದು ವೀರಸಿಂಹನು ಕೇಳಲು ಸೈಂಧವನು ಅವನ ಹೃದಯವನ್ನು ಭೇದಿಸುವಂತೆ ತೀವ್ರದೃಷ್ಟಿಯಿಂದ ನೋಡಿ, ಅದೇನು ಹಾಗೆನ್ನುವಿರಿ ಎಂದು ಕೇಳಿದನು.

ಸ್ವಾಮೀ, ನಿಮ್ಮನ್ನು ನೋಡಿ ನೀವು ಆಡುವ ಮಾತುಗಳನ್ನು ಕೇಳಿದರೆ ಜನಗಳಿಂದ ಬಲು ಹಿಂಸೆಪಟ್ಟು ಹಗೆತೀರಿಸಿಕೊಳ್ಳುವ ಪ್ರತಿಜ್ಞೆಯನ್ನು ಮಾಡಿರುವರಂತೆ ತೋರುತ್ತಲಿದೆ.

ವೀರಸಿಂಹನು ಹೀಗೆನ್ನುತಲೆ ಸೈಂಧವನು ನಸುನಕ್ಕು, ಸ್ವಾಮೀ ! ನಿಮ್ಮ ಊಹೆಯು ತಪ್ಪು. ಈ ಲೋಕದಲ್ಲಿ ಸುಖದುಃಖಗಳನ್ನು ಸಮವಾಗಿ ಭಾವಿಸಿರುವ ನಾನು ಒಬ್ಬ ತತ್ವಜ್ಞಾನಿ. ಒಂದಾನೊಂದು ದಿನ ಅಮರಪುರದಲ್ಲಿರುವ ತತ್ವಜ್ಞಾನಿಗಳಲ್ಲಿ ಅಗ್ರೇಸರನೆನಿಸಿಕೊಂಡು ನ್ಯಾಯಧುರಂಧರನಾಗಿರುವ ವಲ್ಲಭದೇವನನ್ನು ವಾದದಲ್ಲಿ ಜಯಿಸಬೇಕೆಂಬ ಆಸೆಯಿದೆ.

ತಾವು ಅಮರಪುರಕ್ಕೆ ಹೋಗುವುದು ಇದೇ ಮೊದಲನೇ ಸಾರಿಯೋ ?

ಇದಕ್ಕೆ ಮೊದಲೇ ನಾನಲ್ಲಿಗೆ ಹೋಗಬೇಕಾಗಿದ್ದಿತು ; ಆದರೆ ಅದಕ್ಕೆ ಏರ್ಪಾಡುಗಳಾಗಿರಲಿಲ್ಲ.

ತಾವು ಜಾಗ್ರತೆಯಾಗಿ ಅಲ್ಲಿಗೆ ಹೊರಡುವಿರೋ?

ಅದನ್ನು ಹೇಳಲಾರೆ. ನಾನಲ್ಲಿಗೆ ಹೋಗುವುದಕ್ಕೆ ಕೆಲವು ಏರ್ಪಾಡುಗಳನ್ನು ಮಾಡಿಕೊಳ್ಳಬೇಕು, ಅವುಗಳು ಜಾಗ್ರತೆಯಾಗಿ ಮುಗಿದರೆ ಪ್ರಯಾಣವು ಜಾಗ್ರತೆಯಾಗಿ ಆಗುವುದು.

ನೀವು ಯಾವಾಗ ಅಲ್ಲಿಗೆ ಹೋದರೂ ಸರಿಯೆ, ಆವಾಗ ನಾನಲ್ಲಿದ್ದು ನಿಮಗೆ ಯೋಗ್ಯವಾದ ಆತಿಥ್ಯವನ್ನು ಮಾಡಬೇಕೆಂಬ ಕುತೂಹಲವಿದೆ.

ನಾನು ಅಮರಪುರಕ್ಕೆ ಹೋದರೆ ಅಜ್ಞಾತನಾಮನಾಗಿಯೇ ಹೋಗುವೆನು, ಆದುದರಿಂದ ನಿಮ್ಮ ಆತಿಥ್ಯವನ್ನು ಸ್ವೀಕರಿಸುವ ಪ್ರಾಪ್ತಿ ನನಗಿರಲಾರದು.

ಇಷ್ಟು ಹೊತ್ತಿಗೆ ಭೋಜನವು ಮುಗಿಯಿತು. ಕೈಗಳನ್ನು ತೊಳೆದು ಕುರ್ಚಿಗಳಲ್ಲಿ ಕುಳಿತಾಗ ಮೂಲೆಯ ಪ್ರತಿಮೆಗಳ ಕಯ್ಯಲ್ಲಿದ್ದ ಹಣ್ಣಿನ ತಟ್ಟೆಗಳನ್ನು ವಾಮನಭಟ್ಟನು ಮೇಜಿನ ಮೇಲೆ ತಂದಿಟ್ಟು, ಅವುಗಳ ಮಧ್ಯೆ ಮುಚ್ಚಿದ್ದ ಒಂದು ಬಂಗಾರದ ಬಟ್ಟಲನ್ನು ಇಟ್ಟನು. ಅದರಲ್ಲಿ ಏನಿರಬಹುದೆಂದು ವೀರಸಿಂಹನು ಮುಚ್ಚಳವನ್ನು ತೆಗೆದು ನೋಡಲು, ಒಂದು ಬಗೆಯ ಹಸರು ಪುಡಿ ಇದ್ದಿತು. ಅದು ಇಂತಹುದೆಂಬುದನ್ನು ತಿಳಿಯಲಾರದೆ ಬಟ್ಟಲನ್ನು ಪುನಃ ಮುಚ್ಚಿಟ್ಟನು.

ಇದನ್ನು ನೋಡುತ್ತಲಿದ್ದ ಸೈಂಧವನು ಅದರಲ್ಲಿರುವುದು ಇಂತಹುದೆಂಬುದನ್ನು ನೀವು ಊಹಿಸಲಾರಿರಿ. ಅದು ದೇವಲೋಕದ ಅಮೃತಕ್ಕೆ ಸಮಾನವಾದುದು. ನಾವು ಆವುದಾದರೂ ಒಂದು ವಿಷಯವನ್ನು ಯೋಚಿಸಿಕೊಂಡು ಈ ಪುಡಿಯಲ್ಲಿ ಒಂದು ಚಿಟಕಿಯನ್ನು ಬಾಯಲ್ಲಿ ಹಾಕಿಕೊಂಡು ನುಂಗಿದರೆ ನಮ್ಮ ಅಭೀಷ್ಟವು ನೆರವೇರಿದಂತೆ ನಮಗೆ ತೋರುವುದು ಎಂದನು.

ದೇವಲೋಕದಿಂದ ಇಲ್ಲಿಗೆ ಬಂದಾಗಲೇ ಅದರ ಮಾಹಾತ್ಮ್ಯವು ಹೋಗುವುದಲ್ಲವೇ?

ನಿಮ್ಮ ಪ್ರಕೃತಿಸಂಬಂಧದ ಪ್ರಾಬಲ್ಯದಿಂದ ನೀವು ಹೀಗೆ ಹೇಳುತ್ತೀರಿ. ನಾವು ಎಷ್ಟೋ ಆವೃತ್ತಿ ಸುಖದ ಪಕ್ಕದಲ್ಲೇ ಓಡಾಡುತ್ತಲಿದ್ದರೂ ಅದು ಸುಖವೆಂಬ ಜ್ಞಾನ

ವಿಲ್ಲದೆಯೇ ಇರುವೆವು. ನಿಮಗೆ ಧನವೇ ದೈವವಾಗಿದ್ದರೆ ಇದರಲ್ಲಿ ಸ್ವಲ್ಪ ಸೇವನೆ ಮಾಡಿದರೆ ಭೂಗತಗಳಾಗಿರುವ ಬಂಗಾರ ಮುತ್ತು ರತ್ನಗಳ ಖನಿಗಳು ಬಾಯ್ದೆರೆದು ಮುಂದೆ ನಿಲ್ಲುವುವು ; ಕಲ್ಪನಾಶಕ್ತಿಯಲ್ಲಿ ಅಪೇಕ್ಷೆಯಿದ್ದರೆ, ನಭೋಮಂಡಲವು ಮುಂದೆ ಬಂದು ನಿಂತು ನಿಮ್ಮ ಕವಿತಾಶಕ್ತಿಯ ಸ್ವೇಚ್ಛಾವಿಹಾರಕ್ಕೆ ಅನುಕೂಲಪಡಿಸಿಕೊಡುವುದು , ನಿಮಗೆ ರಾಜ್ಯತೃಷ್ಣೆಯಿದ್ದರೆ, ಭೂಮಂಡಲದಲ್ಲಿ ಯಾವ ರಾಜರಿಗೂ ಇಲ್ಲದ ಏಕಚಕ್ರಾಧಿಪತ್ಯವು ನಿಮ್ಮ ಕರಗತವಾಗುವಂತೆ ಮಾಡುವುದು. ಕಷ್ಟಸಾಧ್ಯವಲ್ಲದ ಈ ಸುಖಗಳನ್ನುಂಟುಮಾಡಿಕೊಡುವ ಈ ಅಮೃತವು ನಿಮ್ಮ ಮನಸ್ಸನ್ನು ಸೆಳೆಯುವುದಿಲ್ಲವೇ ? ಇದಕ್ಕಾಗಿ ನಾವು ಮಾಡಬೇಕಾದುದು ಇಷ್ಟೇ ಎಂದು ಸೈಂಧವನು ಒಂದು ಚಿಟಕಿ ಪುಡಿಯನ್ನು ತೆಗೆದು ಬಾಯಿಯಲ್ಲಿ ಹಾಕಿಕೊಂಡು, ತಲೆಯನ್ನು ಹಿಂದಕ್ಕೆ ಬಾಗಿಸಿ, ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ಮೆಲ್ಲಗೆ ನುಂಗಿ ಅದರ ರಸಾನುಭವವನ್ನು ಮಾಡುತ್ತಿದ್ದನು.

ಹಾಗಾದರೆ ಇದರ ಹೆಸರೇನು ?

ಕಲ್ಪವಲ್ಲೀ , ಒಂದಾನೊಂದು ಕಾಲದಲ್ಲಿ ಆವನೋ ಒಬ್ಬ ಮಹಾಪುರುಷನು ದೇವಲೋಕದ ಕಲ್ಪವೃಕ್ಷದ ಒಂದು ಕೊಂಬೆಯನ್ನು ತಂದು ಕುಲಪರ್ವತಗಳಲ್ಲಿ ಪರಮಪುಣ್ಯವಾದ ಹಿಮವತ್ಪರ್ವತದಲ್ಲಿ ಒಂದು ಕಡೆ ನೆಟ್ಟನು. ಅದು ಈಗ ದೊಡ್ಡ ಮರವಾಗಿದೆ , ಅದರ ಎಲೆಯ ಪುಡಿಯು ಕಲ್ಪವೃಕ್ಷದಂತೆ ಕೇಳಿದುದನ್ನು ಕೊಡದಿದ್ದರೂ ನಾನು ಈಗ ಹೇಳಿದ ಅನುಭವಗಳನ್ನುಂಟುಮಾಡುವುದು.

ಇದೇಯೋ ಕಲ್ಪವಲ್ಲೀಚೂರ್ಣ ; ಇದನ್ನು ನಾನು ಕೇಳಿದ್ದೆನು, ನೋಡಿರಲಿಲ್ಲ. ಇದರ ಗುಣವನ್ನು ಪರೀಕ್ಷಿಸಿ ನೋಡಬೇಕೆಂಬ ಅಭಿಲಾಷೆಯು ನನಗುಂಟಾಗಿದೆ ಎಂದು ಹೇಳಿ ವೀರಸಿಂಹನು ಆ ಚೂರ್ಣದಲ್ಲಿ ಒಂದು ಚಿಟಕಿಯನ್ನು ತೆಗೆದು ಬಾಯಿಯಲ್ಲಿ ಹಾಕಿಕೊಂಡನು. ಸುಮಾರು ಅರ್ಧ ಗಂಟೆಯುಲ್ಲಿಯೇ ತನಗೆ ರಕ್ಕೆಗಳು ಹುಟ್ಟಿದಂತೆಯೂ ತಾನು ಈ ಭೂಮಂಡಲವನ್ನೆಲ್ಲಾ ಸುತ್ತಿಕೊಂಡು ಬರುವಂತೆಯೂ ಹೇಳಲಾರಂಭಿಸಿದನು. ಸೈಂಧವನು ಇದು ಚೂರ್ಣದ ಕೆಲಸವೆಂದು ತಿಳಿದು ಸ್ವಾಮೀ ಅಲ್ಲಿಬಾಬರೇ, ತಾವು ಆಕಾಶಕ್ಕೆ ಹಾರಿ ಸಂಚರಿಸುತ್ತಲಿರುವಾಗ ಅಕಸ್ಮಾತ್ತಾಗಿ ಸೂರ್ಯನ ಸಮೀಪಕ್ಕೆ ಹೋಗಿ ರಕ್ಕೆಗಳು ಸುಟ್ಟು ಕೆಳಗೆ ಬೀಳುವ

ಸಂದರ್ಭವು ಬಂದರೆ, ನಿಮಗೆ ಆವ ಅಪಾಯವೂ ಇಲ್ಲದಿರುವಂತೆ ನೋಡಿಕೊಳ್ಳಲು ನಾನಿಲ್ಲಿರುವೆನು. ನೀವು ಧೈರ್ಯವಾಗಿ ಸಂಚಾರಮಾಡಬಹುದು ಎಂದು ಗಟ್ಟಿಯಾಗಿ ಹೇಳಿ, ವಾಮನಭಟ್ಟನನ್ನು ಕರೆದು ಏನನ್ನೋ ಹೇಳಲು ಅವನು ಹಾಗೆಯೇ ಆಗಲಿ ಎಂದು ಸಂಜ್ಞೆಯನ್ನು ಮಾಡಿ ಹೋದನು.

ಆಗ ರಾತ್ರಿ ಸುಮಾರು ಹನ್ನೆರಡು ಗಂಟೆಯಾಗಿರಬಹುದು. ವೀರಸಿಂಹನು ಅದುವರೆಗೆ ತನಗುಂಟಾಗಿದ್ದ ಆನಂದವನ್ನು ಅನನ್ವಿತವಾದ ಮಾತುಗಳಿಂದಲೂ ಮುಖ ಭಾವಗಳಿಂದಲೂ ತೋರಿಸುತ್ತಲಿದ್ದು, ತರುವಾಯ ಮೆಲ್ಲಗೆ ನಿದ್ರಾಭಿಭೂತನಾಗಿ ಮಲಗಿ, ಆ ದಿನದ ಪ್ರಯಾಣದ ಆಲಸಿಕೆಯೂ ಮಲಯದ್ವೀಪಕ್ಕೆ ಬಂದಬಳಿಕ ಉಂಟಾದ ಯೋಚನೆಗಳೂ ತೊಲಗಿ, ಶರೀರವು ಲಘುವಾಗಿ ಆಕಾಶಮಾರ್ಗವಾಗಿ ಸಂಚರಿಸುತ್ತ ಏಕಚ್ಛತ್ರಾಧಿಪತ್ಯವನ್ನು ಮಾಡುತ್ತ, ವಿಹಾರಾರ್ಥವಾಗಿ ಸಮುದ್ರದ ಮಧ್ಯೆ ಇರುವ ಒಂದು ದ್ವೀಪದಲ್ಲಿ ಅನೇಕ ಗಂಧರ್ವರು ನೃತ್ಯಗೀತಾದಿಗಳಿಂದ ಆನಂದ ಪಡುತ್ತ ಹೋಗುತ್ತಲಿರುವುದನ್ನು ಕಂಡು ಮಲಗಿರುವಂತೆ ಸ್ವಪ್ನವನ್ನು ಕಂಡನು.

---

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಪ್ರಬೋಧನ

ಬೆಳಗಾಗಿ ವೀರಸಿಂಹನು ಕಣ್ಣು ಬಿಟ್ಟಿದ್ದರೂ ಸ್ವಪ್ನಾವಸ್ಥೆಯಲ್ಲಿಯೇ ಇರುವಂತಿದ್ದನು. ಅವನು ಒಂದು ನೆಲಮಾಳಿಗೆಯಲ್ಲಿರುವಂತೆಯೂ, ಅದರೊಳಗೆ ಸೂರ್ಯ ಕಿರಣವು ಒಂದು ಸಂದಿನಿಂದ ಕಷ್ಟಪಟ್ಟು ಪ್ರವೇಶಿಸುತ್ತಿರುವಂತೆಯೂ ತೋರಿತು. ನಿದ್ರೆಯು ತಿಳಿದು ಎಚ್ಚರವಾಗಿ ಹಾಸಿಗೆಯನ್ನು ಬಿಟ್ಟು ಎದ್ದು ನಿಂತಾಗ ಕತ್ತಲಾದ ಗುಹೆಯಲ್ಲಿ ತಾನಿರುವೆನೆಂದೂ ದೂರದಲ್ಲಿ ಬೆಳಕು ಬೀರುತ್ತಲಿರುವ ಕಿಂಡಿಯೇ ಆ ಗುಹೆಯ ಬಾಗಿಲೆಂದೂ ಗೊತ್ತುಮಾಡಿಕೊಂಡು, ಬೆಳಕಿನ ದಾರಿಯನ್ನೇ ಹಿಡಿದು ಹೊರಗೆ ಬಂದನು. ಆಗ ನಾವಿಕರೈವರೂ ದೋಣಿಯ ಸಮೀಪದಲ್ಲಿ ದಡದ ಮೇಲೆ ಕುಳಿತು ಹರಟುತ್ತಲಿದ್ದುದನ್ನು ನೋಡಿದನು. ರಾತ್ರಿಯೆಲ್ಲಾ ಗುಹೆಯಲ್ಲಿದ್ದು ಹೊರಗೆ ಬಂದು

ಬೆಳಗಿನ ತಂಗಾಳಿಯು ಸ್ಪರ್ಶವಾಗುತಲೆ ಅವನಿಗೆ ಬ್ರಹ್ಮಾನಂದವುಂಟಾಗಿ ಕೆಲವು ಹೊತ್ತು ಸ್ತಬ್ಧನಾಗಿ ನಿಂತನು.

ಆ ಮೇಲೆ ತಾನು ಈ ದ್ವೀಪಕ್ಕೆ ಬಂದುದೂ, ಸೈಂಧವನ ಸಂಗಡ ಮಾತನಾಡಿದುದೂ, ಇಂದ್ರಭವನದಂತಿದ್ದ ಗುಹೆಯುಲ್ಲಿದ್ದುದೂ, ಮೃಷ್ಟಭೋಜನವನ್ನು ಮಾಡಿದುದೂ, ಕಲ್ಪವಲ್ಲೀಚೂರ್ಣವನ್ನು ಸೇವಿಸಿದುದೂ, ಒಂದೊಂದಾಗಿ ನೆನಪಿಗೆ ಬಂದಿತು, ಆದರೂ ಅವೆಲ್ಲ ಸ್ವಪ್ನವೋ ನಿಜವೋ ಎಂಬ ಅನುಮಾನವು ಅವನಿಗೆ ಇನ್ನೂ ಇದ್ದಿತು. ಅವನು ಮೆಲ್ಲಮೆಲ್ಲಗೆ ನಾವಿಕರಿದ್ದೆಡೆಗೆ ಹೋದನು ಗುಹನು ಎದ್ದು ಮಹಾಸ್ವಾಮೀ, ಯಜಮಾನರು ಅವಸರದ ಕೆಲಸವಾಗಿ ಹೊರಟುಹೋದರು ಹೊರಡುವುದಕ್ಕೆ ಮುಂಚೆ ನಿಮ್ಮಪ್ಪಣೆಯನ್ನು ಪಡೆಯಬೇಕೆಂದಿದ್ದರು, ತಾವು ಇನ್ನೂ ನಿದ್ರೆಮಾಡುತ್ತಲಿದ್ದುದರಿಂದ ನಿಮ್ಮಲ್ಲಿ ಅರಿಕೆಮಾಡುವಂತೆ ನನಗೆ ಹೇಳಿ ಹೋದರು ಎಂದನು

ಹಾಗಾದರೆ ಗುಹೆಯೂ, ಯಜಮಾನನೂ, ಅವನ ಜತೆಯಲ್ಲಿ ನಾನು ಊಟ ಮಾಡಿದುದೂ, ಎಲ್ಲವೂ ನಿಜವೋ ?

ಎಲ್ಲವೂ ನಿಜ. ಅಗೋ ನೋಡಿ, ಅಲ್ಲಿ ಹೋಗುತ್ತಲಿರುವುದೇ ಅವರ ಹಡಗು; ತಮ್ಮಪ್ಪಣೆಯನ್ನು ಕೇಳುವ ಭಾವದಿಂದ ಕೈವಸ್ತ್ರವನ್ನು ಅಲ್ಲಾಡಿಸುತ್ತ ನಿಂತಿರುವವರೇ ಯಜಮಾನರು, ಎಂದು ಗುಹನು ಸಮುದ್ರದಲ್ಲಿ ಹೋಗುತ್ತಲಿದ್ದ ಹಡಗನ್ನು ತೋರಿಸಿದನು. ಆಗ ವೀರಸಿಂಹನು ಹಡಗನ್ನೂ ಯಜಮಾನನನ್ನೂ ಕಂಡು ತನ್ನ ಕೈಯ ವಸ್ತ್ರವನ್ನು ಎತ್ತಿ ಅಲ್ಲಾಡಿಸುತ್ತ, ಹಡಗು ಕಣ್ಣಿಗೆ ಕಾಣುವ ವರೆಗೂ ನೋಡುತ್ತ ಅಲ್ಲಿಯೇ ನಿಂತಿದ್ದು, ಅನಂತರ ಗುಹನನ್ನು ಕರೆದು ಈಗ ದ್ವೀಪದಲ್ಲಿ ಆರಿರುವರು ಎನ್ನಲು ಮಹಾಸ್ವಾಮೀ, ಇಲ್ಲಿ ನಾವು ವಿನಾ ಮತ್ತಾರೂ ಇಲ್ಲ ಎಂದನು.

ಆ ಇಬ್ಬರು ಕಳ್ಳರೇನಾದರು ?

ಅವರು ಯಜಮಾನರ ಸಂಗಡ ಹೊರಟು ಹೋದರು.

ಯಜಮಾನನಿಗೆ ಅವರಿಂದೇನು ಕೆಲಸ ?

ಮಹಾಸ್ವಾಮೀ, ಯಜಮಾನನು ತನ್ನ ಸಂಗಡ ಅವರನ್ನು ಕರೆದುಕೊಂಡು ಹೋಗಿ ಅನುಕೂಲವಾದ ಕಡೆಯಲ್ಲಿ ಅವರನ್ನು ಬಿಟ್ಟು ತಾನು ಮುಂದೆ ಹೋಗುವನು,

ಈ ಯಜಮಾನನು ಹೀಗೆ ಮಾಡುತ್ತಲಿದ್ದರೆ ಆವುದಾದರೂ ಒಂದು ದಿನ ಸರ್ಕಾ ದವರ ಕೈಗೆ ಸಿಕ್ಕಿ ನರಳುವನು.

ಮಹಾಸ್ವಾಮೀ! ಅವನು ಸಾಮಾನ್ಯನಲ್ಲ, ಅವನೊಂದು ಪಕ್ಷಿ, ಅವನ ಹಡ ಗೊಂದು ಪಕ್ಷಿ ಹಿಡಿಯಲು ಹೋದರೆ ಈ ಪಕ್ಷಿಗಳು ಕೈಗೆ ಸಿಕ್ಕವು. ಒಂದು ವೇಳೆ ಸಿಕ್ಕುವ ಸಂದರ್ಭವಾದರೂ ಅವನಿಗೆ ತಪ್ಪಿಸಿಕೊಳ್ಳಲು ಸಾವಿರಾರು ಉಪಾಯಗಳು ಇರುವುವು. ಇದಲ್ಲದೆ ಈ ಪ್ರಾಂತ್ಯದ ದೇಶಗಳಲ್ಲಿಯೂ ಕಡಲಿನ ಮೇಲೂ ಇರುವ ರನೇಕರು ಅವನಿಗೆ ಅತ್ಯಂತ ಆಪ್ತರು, ಅವನನ್ನು ದೇವರಂತೆ ಭಾವಿಸಿ ಅವನಿಗಾಗಿ ಅವರು ತಮ್ಮ ಪ್ರಾಣವನ್ನಾದರೂ ಕೊಡುವರು.

ಹಾಗಾದರೆ ಈ ದ್ವೀಪದಲ್ಲಿ ನಾವು ವಿನಾ ಮತ್ತಾರೂ ಇಲ್ಲವೋ?

ಇಲ್ಲ ಈಗ ನೀವು ಸ್ವೇಚ್ಛೆಯಾಗಿ ಬೇಟೆಯನ್ನಾಡಬಹುದು.

ಬೇಟೆಯು ಹಾಗಿರಲಿ, ಮೊದಲು ಒಂದು ದೀವಟಿಯನ್ನು ತರಿಸು.

ಸ್ವಾಮೀ! ನಿಮಗೆ ಈಗುಂಟಾಗಿರುವ ಭ್ರಮೆಯು ನಮಗೂ ಅನೇಕ ಸಾರಿ ಯುಂಟಾಗಿ ಎಷ್ಟೆಷ್ಟು ನೋಡಿದರೂ ಯಜಮಾನನ ಗುಹೆಯ ಬಾಗಿಲೇ ಸಿಕ್ಕಲಿಲ್ಲ.

ನಿಮಗೆ ಸಿಕ್ಕದೆ ಇರಬಹುದು, ನನಗೆ ಹಾಗಾಗದು. ಮೊದಲು ದೀವಟಿಗೆ ಯನ್ನು ತರಿಸು.

ಆಗ ಗುಹನು ದೋಣಿಯವರಲ್ಲಿ ಒಬ್ಬನನ್ನು ಕೂಗಿ ಒಂದು ಗೊರವೀ ಕಡ್ಡಿ ಯನ್ನು ಹೊತ್ತಿಸಿ ತರಹೇಳಿದನು. ಕೂಡಲೆ ದೀವಟಿಗೆಯು ಬಂದಿತು. ಅದನ್ನು ತೆಗೆಯಿಸಿಕೊಂಡು ವೀರಸಿಂಹನು ತಾನು ಮಲಗಿದ್ದ ಗುಹೆಯನ್ನು ಹೊಕ್ಕು ಅದರ ಎಲ್ಲಾ ಭಾಗಗಳನ್ನೂ ಪರಿಶೋಧಿಸಿದನು, ಎಷ್ಟು ನೋಡಿದರೂ ಯಜಮಾನನ ಗುಹೆ ಯು ಗೊತ್ತಾಗಲಿಲ್ಲ ಊಟದ ವೇಳೆಯಾಗುತಲೆ ಊಟವನ್ನು ಮಾಡಿಕೊಂಡು ಪುನಃ ನೋಡಿದನು, ಆದರೂ ಸಿಕ್ಕಲಿಲ್ಲ ಇನ್ನು ನೋಡುವುದು ಪ್ರಯೋಜನವಿಲ್ಲವೆಂದು ಪ್ರಯಾಣಮಾಡಲು ಸಿದ್ಧನಾದನು. ಗುಹನು ಪುನಃ ಬೇಟೆಯಾಡುವುದಿಲ್ಲವೇ ಎನಲು ವೀರಸಿಂಹನು ಬೇಟೆಯಾಡಿದಂತೆ ಮಾಡಿ, ಅಯ್ಯಾ! ನಾನು ಇಂದ್ರಪ್ರಸ್ಥಕ್ಕೆ ಜಾಗ್ರತೆ ಯಾಗಿ ಹೋಗಬೇಕಾಗಿದೆ; ನನ್ನನ್ನು ಆ ಊರಿಗೆ ಸಮೀಪದಲ್ಲಿರುವ ಆವುದಾದರೂ ಒಂದು ರೇವಿನಲ್ಲಿ ಬಿಡು ಎಂದನು.

ಅವನು ಇಂದ್ರಪ್ರಸ್ಥಕ್ಕೆ ಸೇರಲು ಎರಡು ದಿವಸಗಳಾದುವು ಸಿದ್ಧವಾಗಿದ್ದ ಬಿಡಾರಕ್ಕೆ ಹೋದ ಕೂಡಲೆ, ಪಶುಪತಿಯು ಇದಿರುಗೊಂಡು ಬಂದು ಯೋಗಕ್ಷೇಮ ವನ್ನು ವಿಚಾರಿಸುತ್ತಲಿರುವ ವೇಳೆಗೆ ಸರಿಯಾಗಿ ಉದಯಸಿಂಹನು ಬಂದು ಇಳಿದನು. ಇಬ್ಬರೂ ತಮಗಾಗಿ ಏರ್ಪಾಡಾಗಿದ್ದ ಬಿಡಾರವನ್ನು ನೋಡಿ ಈ ಸ್ಥಳವು ಸಾಲದು, ಇದರ ಜತೆಗೆ ಇನ್ನೊಂದು ದೊಡ್ಡಕೊಟ್ಟಡಿ ಇದ್ದರೆ ಕೊಡು ಎಂದು ಪಶುಪತಿಯನ್ನು ಕೇಳಲು, ಅವನು ಮಹಾಸ್ವಾಮೀ ! ಬೇರೆ ಅವ ಕೊಟ್ಟಡಿಯೂ ಇಲ್ಲ , ತಾವು ಮೊದಲೇ ಬರೆದು ಏರ್ಪಾಡುಮಾಡಿಕೊಳ್ಳದಿದ್ದರೆ ಈ ಸ್ಥಳವೂ ಸಿಕ್ಕುತ್ತಿರಲಿಲ್ಲ ಎಂದನು.

ನಮ್ಮ ಕೊಟ್ಟಡಿಯ ಪಕ್ಕದ ದೊಡ್ಡ ಕೊಟ್ಟಡಿಯಲ್ಲಿ ಯಾರೂ ಇಲ್ಲ, ಅದನ್ನು ಏತಕ್ಕೆ ಕೊಡಬಾರದು ?

ಅದನ್ನು ಆವನೋ ಒಬ್ಬ ಅನ್ಯದೇಶದ ಶ್ರೀಮಂತನು ಬಾಡಿಗೆಯನ್ನು ಕೊಟ್ಟು ಇಟ್ಟುಕೊಂಡಿದ್ದಾನೆ.

ಆವನಾದು ? "ನನಗೆ ತಿಳಿಯದು."

ಹಾಗಾದರೆ ನಮಗೆ ಸ್ಥಳಕ್ಕೇನಮಾಡುವುದು ?

ಮಹಾಸ್ವಾಮೀ, ನಾನೇನಮಾಡಲಿ.

ಆಗ ಉದಯಸಿಂಹನು ಪಶುಪತಿಯನ್ನು ಕುರಿತು ಸ್ಥಳವು ಹೇಗಾದರೂ ಇರಲಿ, ನನಗೆ ಬಲು ಹಸಿವಾಗಿದೆ, ಮೊದಲು ಊಟಕ್ಕೆ ಏರ್ಪಾಡಮಾಡು. ನಾಳೆ ಬೆಳಗಿ ನಿಂದ ಉತ್ಸವವು ಮುಗಿಯುವ ವರೆಗೂ ಒಂದು ಬಂಡಿಯನ್ನು ಗೊತ್ತುಮಾಡಿ ಕೊಡು ಎಂದನು

ಮಹಾಸ್ವಾಮೀ, ಊಟವೇನೋ ಸಿದ್ಧವಾಗಿದೆ ; ಈ ಉತ್ಸವವು ಮುಗಿಯುವ ವರೆಗೆ ಬಂಡಿಯು ಸಿಕ್ಕಲಾರದು. ಮೊದಲೇ ತಿಳಿಸಿದ್ದರೆ ಅದಕ್ಕೂ ಏರ್ಪಾಡ ಮಾಡು ತ್ತಲಿದ್ದೆ.

ಸ್ಥಳವನ್ನು ಅನುಕೂಲವಾಗಿ ಮಾಡಿದಂತೆಯೇ ಅಲ್ಲವೇ ?

ಸ್ಥಳವು ಅನುಕೂಲವಿಲ್ಲವೇ ?

ಆಗ ವೀರಸಿಂಹನು ಅಪ್ಪಾ ಪಶುಪತಿ, ಬಂಡಿಯು ಸಿಕ್ಕಲಾರದೆಂದರೆ ನಾನೊಪ್ಪ ಲಾರೆ ಎಂದು ಹೇಳಲು, ಪಶುಪತಿಯು ಸ್ವಾಮೀ ! ವಿಚಾರಿಸುತ್ತೇನೆ, ಮುಕ್ಕಾಲು ಪಾಲು

ಸಿಕ್ಕಲಾರದು, ಸಿಕ್ಕಿದರೆ ಸಿದ್ಧಪಡಿಸುವೆನು ಎಂದು ಹೇಳಿ ಹೊರಟು ಹೋದನು. ಪಶುಪತಿಯು ಹೋದ ಬಳಿಕ ವೀರಸಿಂಹನು ಉದಯಸಿಂಹನನ್ನು ನೋಡಿ ಬಂಡಿಯು ಇಲ್ಲದಿದ್ದರೆ ಬಲು ತೊಂದರೆಯಾಗುವುದು, ಏನಮಾಡೋಣ ಎನ್ನಲು, ಹೆಚ್ಚು ಹಣಕ್ಕೋಸುಗ ಅವನು ಹೀಗೆ ಹೇಳುವನು ಅದನ್ನು ಕೊಟ್ಟರೆ ಎಲ್ಲವೂ ಸಿಕ್ಕುವುದು ಎಂದನು.

ಅನಂತರ ಇಬ್ಬರೂ ಭೋಜನವನ್ನು ತೀರಿಸಿಕೊಂಡು ಬಿಡಾರದಲ್ಲಿ ಮಲಗಿದರು. ಉದಯಸಿಂಹನಿಗೆ ಆದಿನ ರಾತ್ರಿಯೆಲ್ಲಾ ತಾನು ಆರು ಕುದುರೆಯ ಬಂಡಿಯಲ್ಲಿ ಕುಳಿತು ಊರೆಲ್ಲಾ ಸುತ್ತಿ ಉತ್ಸವದ ಸಂಭ್ರಮವನ್ನು ನೋಡಿ ಬೇಸತ್ತು ಮಲಗಿದಂತೆ ಸ್ವಪ್ನವಾಯಿತು

ಮಾರನೇ ದಿನ ಬೆಳಿಗ್ಗೆ ವೀರಸಿಂಹನು ಮೊದಲು ಎದ್ದು ಪಶುಪತಿಯನ್ನು ಬರಹೇಳಿದನು. ಅವನು ಕೂಡಲೆ ಒಂದು ಮಹಾಸ್ವಾಮೀ! ನಾನು ಬಂಡಿಯು ಸಿಕ್ಕಲಾರದೆಂದು ನೆನ್ನೆ ಹೇಳಿದ್ದೆನಷ್ಟೆ, ರಾತ್ರಿ ವಿಚಾರಿಸಿದುದರಲ್ಲಿ ಉತ್ಸವದ ಕೊನೆಯ ಮೂರು ದಿನ ಆವ ಬಂಡಿಯೂ ಸಿಕ್ಕದು ಎಂದು ಗೊತ್ತಾಯಿತು ಎಂದನು.

ನನಗೆ ಮುಖ್ಯವಾಗಿ ಯಾವಾಗ ಬಂಡಿಯು ಬೇಕೋ ಆಗಲೆ ಇಲ್ಲದೆ ಹೋದರೆ ಏನು ಪ್ರಯೋಜನ ಎಂದು ವೀರಸಿಂಹನು ಹೇಳುತ್ತಿದ್ದಾಗ ಹೊರಗೆ ಹೋಗಿದ್ದ ಉದಯಸಿಂಹನು ಒಳಕ್ಕೆ ಬಂದು ಏನು, ಗಾಡಿ ಸಿಕ್ಕದೆನ್ನುತ್ತಾನೋ ಎಂದು ಕೇಳಲು ವೀರಸಿಂಹನು ಹೂ ಎಂದನು ಆಗ ಪಶುಪತಿಯು ಮಹಾಸ್ವಾಮೀ! ಇಂದಿನಿಂದ ಭಾನುವಾರದ ವರೆಗೆ ಬೇಕಾದಷ್ಟು ಬಂಡಿಗಳು ಸಿಕ್ಕುವುವು ಎಂದನು. ಉದಯಸಿಂಹನು ಅದು ಸರಿ, ಹಾಗೆ ಹೇಳು. ಇಂದು ಗುರುವಾರ; ಭಾನುವಾರಕ್ಕೆ ಇನ್ನೂ ಮೂರು ದಿನಗಳಿರುವುವು ; ಅಷ್ಟರಲ್ಲಿ ಏನೇನಾಗುವುದೋ ನೋಡೋಣ ಎಂದನು.

ಆಗುವುದೇನು? ಆ ವೇಳೆಗೆ ಇನ್ನೂ ಸುಮಾರು ಹತ್ತು ಹನ್ನೆರಡು ಸಾವಿರ ಜನಗಳು ಬಂದು ಸೇರುವರು, ಆಗ ಬಂಡಿ ಸಿಕ್ಕುವುದಕ್ಕೆ ಮತ್ತಷ್ಟು ಕಷ್ಟವಾಗುವುದು ಎಂದು ವೀರಸಿಂಹನೆಂದನು.

ಎಲೈ ಮಿತ್ರನೇ! ಮುಂದೆ ಅನನುಕೂಲಗಳು ಬರಬಹುದೆಂದು ಯೋಚಿಸಿಕೊಂಡು ವ್ಯಸನಪಡುವುದಕ್ಕಿಂತ ಈಗಿನ ಅನುಕೂಲಗಳನ್ನು ಉಪಯೋಗಿಸಿಕೊಂಡು

ಸುಖವಾಗಿರೋಣ. ನಾವು ಕುಳಿತುನೋಡಲು ಕಲ್ಯಾಣಿಯು ಚೌಕದಲ್ಲಿ ಒಂದು ಮಾಳಿಗೆ ಯಾದರೂ ಬಾಡಿಗೆಗೆ ಸಿಕ್ಕುವುದೋ ಇಲ್ಲವೋ ?

ಖಂಡಿತವಾಗಿಯೂ ಸಿಕ್ಕುವುದಿಲ್ಲ ಅಲ್ಲಿ ಮಿಕ್ಕಿದ್ದದ್ದೇ ಒಂದು ಮಾಳಿಗೆ, ಅದನ್ನು ನೆನ್ನೆಯ ದಿನ ಒಬ್ಬ ಅರಸುಮಗನು ನೂರು ವರಹಗಳಿಗೆ ಗೊತ್ತುಮಾಡಿಕೊಂಡನು ಎಂದು ಪಶುಪತಿಯು ಹೇಳಲು, ಏನು! ಒಂದು ದಿನ ಅಲ್ಲಿ ಕುಳಿತು ನೋಡುವುದಕ್ಕೆ ನೂರು ವರಹಗಳೇ ಎಂದು ಇಬ್ಬರೂ ಒಂದೇ ಸಾರಿ ಕೇಳಿದರು.

ಮಹಾಸ್ವಾಮೀ ! ದೊರೆಮಕ್ಕಳಿಗೆ ಕಷ್ಟವಿಲ್ಲದೆ ಬೇಕಾದಷ್ಟು ಹಣ ಸಿಕ್ಕುವುದಾದುದರಿಂದ ಹಣವೆಂದರೆ ಅವರಿಗೆ ಲಕ್ಷ್ಯವಿಲ್ಲ.

ಆಗ ವೀರಸಿಂಹನು ಉದಯುಸಿಂಹನನ್ನು ನೋಡಿ ಅಪ್ಪಾ ಉದಯುಸಿಂಹ, ನಾನು ಹೇಳುವುದನ್ನು ಕೇಳು. ಇಲ್ಲಿ ಇದ್ದು ಅವಸ್ಥೆಪಡುವುದಕ್ಕಿಂತ ನಾವಿಬ್ಬರೂ ಕಾಶ್ಮೀರಕ್ಕೆ ಹೋಗಿ ಆ ನಾಡಿನ ರಚನೆಗಳನ್ನು ನೋಡಿ ಬರೋಣ, ಅಲ್ಲಿಯೂ ಒಂದು ಜಾತ್ರೆ ಈಗ ನಡೆಯುತ್ತಾ ಇರುವುದು ಎಂದನು.

ನಾನು ಇಲ್ಲಿಯ ಉತ್ಸವವನ್ನು ನೋಡಲು ಬಂದೆನಾದ ಕಾರಣ ಹೇಗಾದರೂ ಇದನ್ನು ನೋಡಿಯೇ ಹೋಗಬೇಕು. ಬಂಡಿಯು ಸಿಕ್ಕದಿದ್ದರೆ ಮರದ ಕಾಲನ್ನಾದರೂ ಕಟ್ಟಿಕೊಂಡು ನೋಡುವೆನು.

ಹಾಗಾದರೆ ಒಂದು ಕೆಲಸ ಮಾಡೋಣ. ಈ ಉತ್ಸವಕಾಲದಲ್ಲಿ ಇಲ್ಲಿಯ ಜನಗಳು ತಮ್ಮ ಗುರುತು ಸಿಕ್ಕದಂತೆ ವೇಷಗಳನ್ನು ಹಾಕಿಕೊಂಡು ಕುದುರೆಬಂಡಿಯಲ್ಲಿಯೋ ಎತ್ತಿನ ಬಂಡಿಯಲ್ಲಿಯೋ, ಅಥವಾ ಕಾಲ್ನಡೆಯಿಂದಲೋ ಇಷ್ಟಾನುಸಾರ ಸಂಚರಿಸುವರು ; ನಾವೂ ಅದೇ ರೀತಿ ಮಾಡೋಣ.

ಇವರಿಬ್ಬರ ಮಾತನ್ನು ಕೇಳುತ್ತಲಿದ್ದ ಪಶುಪತಿಯು ನಿಮಗೆ ಬಂಡಿ ಬೇಡವೋ ಎಂದು ಕೇಳಿದನು. ಅವರು ಅಗತ್ಯ ಬೇಕು ತರಿಸೆನ್ನಲು, ಹತ್ತುನಿಮಿಷಗಳಲ್ಲಿಯೇ ಶಾಲೆಯ ಮುಂದೆ ಬಂಡಿಯೊಂದು ಬಂದು ನಿಂತಿತು. ಇಬ್ಬರೂ ಅದರಲ್ಲಿ ಕುಳಿತು ಊರಿನಲ್ಲಿ ಮುಖ್ಯವಾದ ಬೀದಿಗಳಲ್ಲಿ ಸುತ್ತಿಕೊಂಡು ಊಟದ ಹೊತ್ತಿಗೆ ಬಿಡಾರಕ್ಕೆ ಬಂದರು. ಊಟವಾಗುತಲೆ ಉದಯುಸಿಂಹನು ಪುನಃ ಸುತ್ತುವುದಕ್ಕೆ ಹೊರಡಬೇಕೆಂದಿದ್ದಾಗ, ವೀರಸಿಂಹನು ಬೆಳಿಗ್ಗೆಯೆಲ್ಲಾ ಸುತ್ತಿ ಸುತ್ತಿ ಬೇಸತ್ತಿದ್ದೇನೆ; ಈಗ ಪುನಃ ಹೊರ

ಡಲು ನನ್ನಿಂದಾಗದು ಈ ದಿನ ಪೌರ್ಣಮಿ ; ರಾತ್ರಿ ಒಳ್ಳೆಯ ಬೆಳದಿಂಗಳು ಬರುವುದು ಆಗ ಬೇಕಾದರೆ ಊರ ಹೊರಗಿರುವ ಚಕ್ರಭೀಮನ ಕೋಟೆಯನ್ನು ನೋಡಿಕೊಂಡು ಬರೋಣ ಎಂದನು.

ಹಾಗಾದರೆ ರಾತ್ರಿ ಊಟಮಾಡಿಕೊಂಡು ಎಂಟು ಗಂಟೆಗೆ ಹೊರಡೋಣ; ಆ ವೇಳೆಗೆ ಬರುವಂತೆ ಬಂಡಿಯವನಿಗೆ ಹೇಳು.

ಸುಮಾರು ಒಂದು ಗಂಟೆಯ ಸಮಯದಲ್ಲಿ ಪಶುಪತಿಯು ಒಳಗೆ ಬಂದು ಮಹಾಸ್ವಾಮೀ ! ನೀವಿಬ್ಬರೂ ಚಕ್ರಭೀಮನ ಕೋಟೆಯನ್ನು ನೋಡುವುದಕ್ಕೆ ರಾತ್ರಿ ಎಂಟು ಗಂಟೆಗೆ ಊರ ಹೊರಗಿನ ದಾರಿಯಿಂದ ಹೋಗುವುದಾಗಿ ಬಂಡಿಯವನಿಂದ ಕೇಳಿದೆ. ಅದು ನಿಜವಾದರೆ ಅಷ್ಟು ಹೊತ್ತಿನಲ್ಲಿ ಆ ದಾರಿಯಲ್ಲಿ ಹೋಗುವುದು ಒಳ್ಳೆಯದಲ್ಲವೆಂದು ನಿಮಗೆ ತಿಳಿಸಲು ಬಂದೆನು ಎಂದನು.

ಏನು ಅಪಾಯ ?

ಕಳ್ಳರ ಗುರು ಒಂಪನದೆಸೆಯಿಂದ.

ಅವನು ಏನ ಮಾಡುವನು ?

ನೀವು ಇಲ್ಲಿಂದ ಹೋಗುವುದೇನೋ ನಿಶ್ಚಯ ; ಅಲ್ಲಿಂದ ಹಿಂತಿರುಗಿ ಬರುವುದು ಅನುಮಾನ.

ಆ ಒಂಪನೆಂಬವನಾರು ?

ನಿಮಗೆ ಅವನ ಸಮಾಚಾರವೇ ತಿಳಿಯದೋ ? " ತಿಳಿಯದು "

ಅವನು ಕಳ್ಳರಿಗೆಲ್ಲ ಯಜಮಾನ ಅವನ ಮಾತೆಂದರೆ ಕಳ್ಳರಿಗೆಲ್ಲರಿಗೂ ವೇದವಾಕ್ಯ. ಅವನ ವಿಷಯದಲ್ಲಿ ನೀವು ಬಲು ಎಚ್ಚರಿಕೆಯಿಂದ ಇರಬೇಕು

ಉದಯಸಿಂಹನು ವೀರಸಿಂಹನನ್ನು ನೋಡಿ ಇಗೋ ನೋಡು, ಒಂಪನು ನಮ್ಮನ್ನು ಹಿಡಿಯಬರುವನು, ನಾವು ಅವನನ್ನು ಹಿಡಿದು ಇಲ್ಲಿಯ ರಾಜನಿಗೆ ಒಪ್ಪಿಸಿದರೆ, ಪ್ರತ್ಯುಪಕಾರಕ್ಕಾಗಿ ಏನ ಮಾಡಲಿ ಎಂದು ಅವನು ನಮ್ಮನ್ನು ಕೇಳುವನು ಆಗ ನಮಗೆ ಬಂಡಿಯೊಂದು ಬೇಕೆಂದು ಕೇಳಿದರೆ ನಾವಿಲ್ಲಿರುವ ವರೆಗೆ ಅವನು ತನ್ನ ಲಾಯದಿಂದ ಒಂದನ್ನು ಕಳುಹಿಸುವನು ಎಂದನು.

ಮಹಾಸ್ವಾಮೀ ! ಈ ಕಳ್ಳನ ಸಮಾಚಾರ ನಿಮಗೆ ಇನ್ನೂ ಗೊತ್ತಿಲ್ಲ ಇವನ

ಕೈಕೆಳಗೆ ಸಾವಿರಾರು ಜನರಿರುವರು, ಅವರು ಹಳ್ಳಕೊಳ್ಳಗಳಲ್ಲಿಯೂ ಬಂಡೆಗಳಲ್ಲಿಯೂ ಮರಗಳಲ್ಲಿಯೂ ಅಡಗಿಕೊಂಡು ಸಮಯ ಬಂದಾಗ ಬಂದು ಸೇರಿ ಸಿಕ್ಕಿದವರನ್ನು ತಮ್ಮ ಸಂಕೇತಸ್ಥಾನಕ್ಕೆ ಕೊಂಡು ಹೋಗಿ ಒಂದು ಕ್ಲಿಪ್ತಕಾಲದಲ್ಲಿ ಕೇಳಿದಷ್ಟು ಹಣವನ್ನು ತರಿಸಿಕೊಟ್ಟರೆ ಸರಿ, ಇಲ್ಲದಿದ್ದರೆ ನಿಮಿಷದಲ್ಲಿ ಪರಲೋಕಕ್ಕೆ ಸಾಗಿಸಿಬಿಡುವರು

ಈ ಕಳ್ಳನು ಅಷ್ಟು ಬಲಿಷ್ಠನೋ? ಈ ದೇಶದ ರಾಜನಿಗೆ ಇವನನ್ನು ಹಿಡಿಯಲು ಆಗಲಿಲ್ಲವೋ?

ಇವನ ಚರಿತ್ರೆಯನ್ನು ಕೇಳಿದರೆ ನೀವು ಆಶ್ಚರ್ಯಪಡುವಿರಿ ಇವನನ್ನು ಹಿಡಿದು ಕೊಡುವವರಿಗೆ ರಾಜನು ಲಕ್ಷ ವರಹಗಳನ್ನು ಕೊಡುತ್ತೇನೆಂದು ಸಾರಿ ಇರುವನು. ಹಣದ ಆಸೆಗೆ ಇವನನ್ನು ಹಿಡಿಯಹೋದವರೆಲ್ಲಾ ಹಿಂದಿರುಗಲೇ ಇಲ್ಲ.

ಅವನ ಸಮಾಚಾರ ನಿನಗೆ ಹೇಗೆ ಗೊತ್ತು?

ಅವನನ್ನು ಹುಟ್ಟಿದಂದಿನಿಂದಲೂ ಬಲ್ಲೆನು.

ಹಾಗಾದರೆ ಅವನ ಕಥೆಯನ್ನು ಸಂಕ್ಷೇಪವಾಗಿ ಹೇಳು, ಕೇಳೋಣ.

ಅವನೊಬ್ಬ ಕುರುಬರ ಹುಡಗ, ಅವನ ಹೆಸರು ಲುಂಗಿ ಒಂಪ. ಅವನ ತಾಯಿ ತಂದೆಗಳು ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋದರು; ಅವರ ಪಕ್ಕದ ಮನೆಯ ಕುರುಬನು ಸಾಕುತ್ತಲಿದ್ದನು. ಆ ಕುರುಬನಿಗೆ ರೂಪವತಿಯಾದ ತಾರಕೆಯೆಂಬ ಮಗಳಿದ್ದಳು. ಒಂಪನೂ ತಾರಕೆಯೂ ಬಾಲ್ಯದಿಂದಲೂ ಜತೆಯಲ್ಲಿ ಆಡುತ್ತಲಿದ್ದು, ದೊಡ್ಡವರಾದ ಮೇಲೆ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು.

ಒಂದಾನೊಂದು ದಿನ ಒಂಪನೂ ತಾರಕೆಯೂ ವಿನೋದವಾಗಿ ಕಥೆಗಳನ್ನು ಹೇಳಿಕೊಂಡು ಕುರಿಗಳನ್ನು ಕಾಯುತ್ತಲಿದ್ದಾಗ, ಸಮೀಪದ ಕಾಡಿನಲ್ಲಿ ತುಪಾಕಿಯ ಸದ್ದಾಯಿತು. ಅದೇನೆಂದು ಆ ಕಡೆ ತಿರುಗಿ ನೋಡಲು ಅವನೋ ಒಬ್ಬನು ಓಡಿ ಬಂದು ಅಪ್ಪಾ, ಸಿಪಾಯಿಗಳು ನನ್ನನ್ನು ಅಟ್ಟಿಸಿಕೊಂಡು ಬರುತ್ತಲಿದ್ದಾರೆ; ಅವರ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳುವ ದಾರಿಯನ್ನು ಜಾಗ್ರತೆಯಾಗಿ ತೋರಿಸಿ ನನ್ನನ್ನು ಉದ್ಧಾರ ಮಾಡು ಎಂದು ಬೇಡಿಕೊಂಡನು. ಒಂಪನು ಸಮೀಪದಲ್ಲಿ ತನಗೆ ಗೊತ್ತಿದ್ದ ಗುಹೆಯ ಒಳಗೆ ಅವನನ್ನು ಕರೆದುಕೊಂಡು ಹೋಗಿ ಗುಹೆಯ ಬಾಯಿಗೆ ಮುಚ್ಚಿದ್ದ ಕಲ್ಲನ್ನು ತೆಗೆದು ಅವನನ್ನು ಒಳಗೆ ಕೂಡಿ ಕಲ್ಲನ್ನು ಮುಚ್ಚಿದನು. ಐದು ನಿಮಿಷಗಳೊಳ

ಗಾಗಿಯೇ ಆಯುಧಪಾಣಿಗಳಾದ ನಾಲ್ವರು ಸವಾರರು ಕಾಡಿನಿಂದ ಹೊರಗೆ ಬಂದು, ಓಡಿಹೋದ ಕಳ್ಳನನ್ನು ಕಾಣದೆ, ಸಮೀಪದಲ್ಲಿ ತಾರಕೆಯೂ ಒಂಪನೂ ಕುಳಿತಿದ್ದುದನ್ನು ನೋಡಿ ಅವರ ಬಳಿಗೆ ಕುದುರೆಗಳನ್ನು ಓಡಿಸಿಕೊಂಡು ಬಂದು ಕಳ್ಳನೆತ್ತಹೋದನೆಂದು ಪ್ರಶ್ನೆಮಾಡಿದರು.

ಆವ ಕಳ್ಳ ?　　　“ ಈಗ ಕಾಡಿನಿಂದ ಓಡಿಬಂದವನು ”

ಆರನ್ನೂ ನೋಡಲಿಲ್ಲವಲ್ಲಾ. ಅಯ್ಯೋ ಅದೃಷ್ಟವೇ ! ಅವನು ಕಳ್ಳರ ಯಜಮಾನ ; ಸರ್ಕಾರದವರು ಅವನನ್ನು ಹಿಡಿದುಕೊಟ್ಟವರಿಗೆ ಒಂದು ಲಕ್ಷವರಹಗಳನ್ನು ಕೊಡುವುದಾಗಿ ಸಾರಿದಾರೆ. ಅವನನ್ನು ನೀವು ತೋರಿಸಿಕೊಟ್ಟರೆ ಅದರಲ್ಲಿ ನಿಮಗರ್ಧ ಸಿಕ್ಕುವುದು.

ಅಯ್ಯೋ ! ನಮಗೆ ಅದೃಷ್ಟವಿಲ್ಲ ಎಂದು ಒಂಪನು ಹೇಳುತಲೆ ಸವಾರರು ಒಂದೊಂದು ದಿಕ್ಕನ್ನು ಹಿಡಿದು ಹೋದರು.

ಅವರತ್ತ ಹೋಗುತಲೆ ಇತ್ತ ಒಂಪನು ಗುಹೆಯ ಬಾಗಿಲನ್ನು ತೆರೆದು, ಸವಾರರು ಹೊರಟುಹೋದರು , ನಿನ್ನ ದಾರಿಯನ್ನು ಹಿಡಿದು ನೀನು ಹೋಗಬಹುದು ಎಂದನು. ನೀವು ಮಾಡಿದ ಉಪಕಾರವನ್ನು ಎಂದಿಗೂ ಮರೆಯಲಾರೆನು ಎಂದು ಹೇಳಿ ಆ ಕಳ್ಳನು ತನ್ನಲ್ಲಿದ್ದ ವರಹಗಳು ತುಂಬಿದ ಒಂದು ಚೀಲವನ್ನು ಒಂಪನಿಗೆ ಕೊಡಬಂದಾಗ ಅವನು ನಾನೇನೂ ಹಣದಾಸೆಗೆ ಮಾಡಲಿಲ್ಲ. ಒಲ್ಲೆ ಎಂದನು. ಸವಾರರು ಒಂಪನ ಸಂಗಡ ಮಾತನಾಡುತ್ತಲಿದ್ದಾಗ ತನ್ನನ್ನು ಎಲ್ಲಿ ಬಿಟ್ಟುಕೊಡುವನೋ ಎಂಬ ಭೀತಿಯಿಂದ ಆ ಕಳ್ಳನು ಕಲ್ಲಿನ ಸಂದಿಯಿಂದ ಇಣಿಕಿನೋಡುತ್ತಿದ್ದನು. ಆಗ ತಾರಕೆಯ ರೂಪಲಾವಣ್ಯ ಯೌವನಗಳನ್ನು ಕಂಡು ಅವನು ಮನಸೋತು ಅವಳನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆಂದು ಹೊಂಚುಹಾಕುತ್ತಲಿದ್ದನು. ಈ ಕಳ್ಳರ ಯಜಮಾನನು ಇಷ್ಟು ಅನ್ಯಾಯದ ಯೋಚನೆಯನ್ನು ಮಾಡಿಕೊಂಡಿದಾನೆಂಬುದು ಒಂಪನಿಗೆ ತಿಳಿಯದು

ಹೀಗೆ ಕೆಲವು ತಿಂಗಳು ಕಳೆದ ಮೇಲೆ, ಆವೂರಿನಲ್ಲಿ ನರೇಂದ್ರನಾಥನೆಂಬ ಒಬ್ಬ ಶ್ರೀಮಂತನ ಮನೆಯಲ್ಲಿ ಒಂದು ಮದುವೆಯಾಯಿತು. ಅಲ್ಲಿ ವಧುವಿನ ಒಡವೆಗಳನ್ನೂ ಸೀರೆಯನ್ನೂ ನೋಡಿ, ಇವುಗಳನ್ನು ನನಗೆ ತಂದುಕೊಟ್ಟ ಹೊರತು ನಾನು ನಿಮ್ಮನು ವರಿಸಲೊಲ್ಲೆನೆಂದು ತಾರಕೆಯು ಒಂಪನಿಗೆ ಹೇಳಿದಳು. ಅವನು ಆ ರಾತ್ರೆ

ಶ್ರೀಮಂತ ನರೇಂದ್ರನಾಥನ ಮನೆಗೆ ಬೆಂಕಿಯನ್ನು ಇಕ್ಕಿ, ಮನೆಯು ಬೇಯುತ್ತಲಿರು ವಾಗ ಒಳಗೆ ನುಗ್ಗಿ ಆಭರಣವಸ್ತ್ರಗಳನ್ನೆಲ್ಲಾ ನಾಗಿಸಿಕೊಂಡು ಊರ ಹೊರಗಣ ಒಂದು ಗುಹೆಯಲ್ಲಿರಿಸಿದನು. ಬೆಳಗಾಗುತಲೇ ತಾರಕೆಯನ್ನು ಕರೆದುಕೊಂಡು ಹೋಗಿ ಆ ಆಭರಣಗಳನ್ನೂ ವಸ್ತ್ರಗಳನ್ನೂ ಅವಳಿಗೆ ಕೊಟ್ಟು ಇವುಗಳನ್ನು ತೊಟ್ಟುಕೊಂಡು ಬಾ ಎಂದು ಹೇಳಿದನು. ಅವಳು ಗುಹೆಯೊಳಗೆ ಹೋದಳು ಇವನು ಗುಹೆಯ ಬಾಗಿ ಲಲ್ಲಿ ನಿಂತಿದ್ದನು.

ಆಗ ಆವನೋ ಒಬ್ಬನು ಕುದುರೆಯ ಸವಾರಿ ಮಾಡುತ್ತ ಆ ಮಾರ್ಗವಾಗಿ ಬಂದು ಒಂಪನನ್ನು ಕುರಿತು ಅಪ್ಪಾ! ಇಲ್ಲಿ ತ್ರಿಪಳಿಯೆಂಬುದೊಂದು ಊರಿದೆಯಂತೆ, ಅದಕ್ಕೆ ದಾರಿಯು ನನಗೆ ಗೊತ್ತಾಗಲಿಲ್ಲ ; ದಯೆಮಾಡಿ ತೋರಿಸು ಎಂದನು ಒಂಪನು ಕಂಬಳಿಯನ್ನು ಭುಜದ ಮೇಲೆ ಹಾಕಿಕೊಂಡು, ತುಪಾಕಿಯನ್ನು ಕಯ್ಯಲ್ಲಿ ಹಿಡಿದು, ಅಷ್ಟುದೂರ ಹೋಗಿ, ಈ ದಾರಿಯಲ್ಲಿಯೇ ನೆಟ್ಟಗೆ ಹೋದರೆ ಊರನ್ನು ಸೇರಬಹುದು ಎಂದು ಹೇಳಿ ಹಿಂದಿರುಗಿದನು ಆಗ ಪ್ರಯಾಣಿಕನು ತನ್ನ ಜೇಬಿನಿಂದ ಒಂದು ಹಿಡಿ ಚಿನ್ನದ ನಾಣ್ಯಗಳನ್ನು ತೆಗೆದು ಒಂಪನಿಗೆ ಕೊಡುವುದಕ್ಕೆ ಹೋದನು. ಅವನು ಮಹಾಸ್ವಾಮೀ, ನಾನು ಕೂಲಿಗೆ ಕೆಲಸಮಾಡುವವನಲ್ಲ, ಮಾಡಿದ ಉಪಕಾರಕ್ಕೆ ಬೆಲೆಯನ್ನು ತೆಗೆಯುವುದಿಲ್ಲ ಎಂದನು

ಹಾಗಾದರೆ, ಈ ರತ್ನಖಚಿತವಾದ ಕಠಾರಿಯನ್ನು ನನ್ನ ಜ್ಞಾಪಕಾರ್ಥವಾಗಿ ಇಟ್ಟುಕೊಂಡಿರು ಎಂದು ತನ್ನ ನಡುವಿನಿಂದ ಅದನ್ನು ತೆಗೆದುಕೊಟ್ಟು, ನಿನಗೆ ಆವಾಗ ಲಾದರೂ ಏನಾದರೂ ತೊಂದರೆಯುಂಟಾದರೆ ನನಗೆ ಸ್ವಲ್ಪ ವರ್ತಮಾನವನ್ನು ಕೊಡು, ನನ್ನಿಂದ ಆಗುವ ಸಾಹಾಯ್ಯವನ್ನು ಮಾಡಿಕೊಡುವೆನು. ನಾವಿಕಸೈಂಧವ ಎಂದು ಹೇಳಿ ಕಳುಹಿಸಿದರೆ ಸಾಕು. ನಿನ್ನ ಹೆಸರೇನು ?

ಲುಂಗಿ ಒಂಪ. ವೀರಸಿಂಹನು ಬೆರಗಾಗಿ ನಾವಿಕಸೈಂಧವನೇ ಎಂದುದಕ್ಕೆ ಪಶುಪತಿಯು ಅಹುದೆಂದನು. ಆ ಹೆಸರಿನಲ್ಲಿ ಏನು ಸ್ವಾರಸ್ಯವನ್ನು ಕಂಡು ಬೆರಗಾದೆ ಎಂದು ಉದಯಸಿಂಹನು ಕೇಳಲು ವೀರಸಿಂಹನು ಏನೂ ಇಲ್ಲ, ನಾನು ಚಿಕ್ಕವನಾಗಿ ದ್ದಾಗ ಆವನ ಕಥೆಗಳನ್ನು ಓದಿ ವಿನೋದದಿಂದ ಹೊತ್ತುಕಳೆಯುತ್ತಲಿದ್ದೆನು, ಅದು ಈಗ ಜ್ಞಾಪಕಕ್ಕೆ ಬಂದಿತು ಎಂದು ಮಲಯದ್ವೀಪದಲ್ಲಿ ನಡೆದುದೆಲ್ಲವನ್ನೂ ನೆನಸಿಕೊಂಡನು.

ಮುಂದೆ ನಿನ್ನ ಕಥೆಯನ್ನು ಹೇಳು ಎಂದು ಇಬ್ಬರೂ ಹೇಳುತಲೆ ಪಶುಪತಿಯು ಹೀಗೆಂದು ಹೇಳತೊಡಗಿದನು —ಒಂಪನು ಹಿಂದಿರುಗಿ ಸೈಂಧವನು ಕೊಟ್ಟ ಕರಾರಿ ಯನ್ನು ನೋಡಿ ಆಶ್ಚರ್ಯಪಟ್ಟು ನಿಧಾನವಾಗಿ ಬರುತ್ತಲಿದ್ದಾಗ ಆರೋ ತನ್ನ ಹೆಸ ರನ್ನು ಹಿಡಿದು ಗವಿಯ ಕಡೆಯಿಂದ ಕೂಗಿದಂತಾಗಲು, ಒಂದೇ ಓಟದಲ್ಲಿ ಬಂದು ನೋಡಿ ದನು ತಾರಕೆಯನ್ನು ಕಳ್ಳರ ಯಜಮಾನನಾಗಿದ್ದ ಕಕುಂಭನೆಂಬುವನು ಎತ್ತಿ ಕೊಂಡು ಸಮೀಪದಲ್ಲಿರುವ ಕಾಡಿಗೆ ಓಡಿಹೋಗುತ್ತಲಿದ್ದನು.

ಒಂಪನಿಗೂ ಕಕುಂಭನಿಗೂ ಮಧ್ಯೆ ಸುಮಾರು ಎರಡು ನೂರು ಗಜಗಳ ದೂರ ವಿದ್ದಿತು , ಅವನು ಕಾಡನ್ನು ಸೇರಿದರೆ ಹಿಡಿಯುವುದು ಅಸಾಧ್ಯ, ಮುಂಚೆಯೇ ಓಡಿ ಹೋಗಿ ಹಿಡಿಯುವುದಕ್ಕೆ ಆಗುವುದಿಲ್ಲ; ಏನಮಾಡುವುದು ಎಂದು ಯೋಚಿಸಿ, ಒಂಪನು ಇದ ಸ್ಥಳದಲ್ಲಿ ನಿಂತು ಗುರಿಹಿಡಿದು ತುಪಾಕಿಯನ್ನು ಹಾರಿಸಿದನು. ಆಗ ಕಕುಂಭನು ಆ ಪೆಟ್ಟನಿಂದ ತತ್ತರಿಸಿ, ಕಾಲುಗಳು ನಡುಗಿ ಕೆಳಗೆ ಬಿದ್ದನು. ತಾರಕೆಯು ತಟ್ಟನೆದ್ದು ಒಂಪನ ಕಡೆಗೆ ತಿರುಗಿ ಸುಮಾರು ಹತ್ತುಗಜಗಳ ದೂರ ಬಂದು ನೆಲದ ಮೇಲೆ ಬಿದ್ದಳು. ತುಪಾಕಿಯ ಪೆಟ್ಟು ಅವಳಿಗೂ ತಾಕಿತೋ ಎಂದು ಒಂಪನಿಗೆ ಗಾಬರಿಯಾಗಿ ಓಡಿ ಹೋಗಿ ಅವಳನ್ನು ಎತ್ತಿ ನೋಡಲು ಅವಳು ಸುರಕ್ಷಿತಳಾಗಿದ್ದಳು ಕಕುಂಭನ ಸಮೀ ಪಕ್ಕೆ ಹೋಗಿ ನೋಡಲು, ಅವನು ಸತ್ತಿದ್ದನು.

ಒಂಪನು ಸ್ವಲ್ಪ ನಿಂತು ಆಲೋಚಿಸಿ, ಕಕುಂಭನ ಮೈಮೇಲಿದ್ದ ಬಟ್ಟೆಗಳನ್ನು ಬಿಚ್ಚಿ, ಹೆಣವನ್ನು ಸಮೀಪದಲ್ಲಿದ್ದ ಒಂದು ಹಳ್ಳಕ್ಕೆ ಎಳೆದು, ತಾರಕೆಯನ್ನು ಕರೆದು ಕೊಂಡು ಗವಿಯನ್ನು ಸೇರಿದನು. ಒಂಪನು ವಸ್ತ್ರಾಭರಣಭೂಷಿತೆಯಾಗಿ ಕಳ್ಳರ ಕೈ ಯಿಂದ ಬದುಕಿ ಬಂದ ತಾರಕೆಯನ್ನು ನೋಡಿ ಸಂತೋಷದಿಂದ ನನ್ನನ್ನು ನೀನು ಮದುವೆಯಾಗುವೆಯೋ ಎಂದು ಕೇಳಲು, ಅವಳು ಲಜ್ಜೆಯಿಂದ ತಲೆಯನ್ನು ತಗ್ಗಿಸಿದಳು.

ಆ ಮೇಲೆ ಇಬ್ಬರೂ ಕಾಡಿನೊಳಗೆ ಹತ್ತಡಿಯಿಡಲು, ಅಲ್ಲಿ ತುಪಾಕಿಯನ್ನು ಇಟ್ಟುಕೊಂಡು ನಿಂತಿದ್ದ ಕಾವಲುಗಾರನು ಯಾರದು ? ನಿಲ್ಲಿರಿ ! ಎಂದು ತುಪಾಕಿಯನ್ನು ಎತ್ತಿ ಗುರಿಹಿದನು. " ಈ ಕಾಡಿನಲ್ಲಿ ಕುರಿಕಾಯುವ ಲುಂಗಿ ಒಂಪ"

ಇಲ್ಲಿಗೇಕೆ ಬಂದೆ ? " ಈ ಕಾಡಿನ ಮಧ್ಯೆ ಬಂಕನೆಂಬ ಜ್ವಾಲಾಮುಖಿಯ ಬಳಿ ಇರುವ ನಿನ್ನ ಜತೆಗಾರರನ್ನು ನೋಡುವುದಕ್ಕೆ"

ಹಾಗಾದರೆ ನನ್ನ ಹಿಂದೆ ಬಾ, ಎಂದು ಕರೆದುಕೊಂಡು ಬಂಕಕ್ಕೆ ಹೋದನು.

ಅಲ್ಲಿಗೆ ಹೋಗುತ್ತಲೆ ಸುಮಾರು ಮೂವತ್ತು ನಲವತ್ತು ಮಂದಿ ಕಳ್ಳರು ಸುತ್ತಿಕೊಂಡರು. ಆಗ ಆ ಕಾವಲುಗಾರನು ಬಂಪನನ್ನು ತೋರಿಸಿ ಇವನು ನಿಮ್ಮ ಸಂಗಡ ಮಾತನಾಡಬೇಕಂತೆ, ಎಂದನು. ಎಲ್ಲರೂ ನಿನಗೇನು ಬೇಕು, ಎಂದು ಕೇಳಿದುದಕ್ಕೆ ನನಗೆ ಕುರುಬನ ಕೆಲಸದಲ್ಲಿ ಬೇಸರ ಹುಟ್ಟಿದೆಯೆಂದು ಮುಗಿಸುವುದರೊಳಗಾಗಿಯೇ ಓಹೋ, ನಮ್ಮ ಗುಂಪನ್ನು ಸೇರ ಬಂದೆಯೋ? ಅಗತ್ಯವಾಗಿ ಆಗಬಹುದು ಎಂದರು. ಆಗ ಬಂಪನು ನಿಮ್ಮ ಯಜಮಾನನಾಗಿರಬೇಕೆಂದು ಬಂದಿರುವೆನು ಎಂದನು ಹಾಗಾದರೆ ನಮ್ಮ ಯಜಮಾನನೇನಾಗಬೇಕು?

ಅವನನ್ನು ಈಗ ತಾನೆ ಕೊಂದು ಬಂದೆನು ಇಗೋ ಅವನ ಉಡುಪು

ಈ ಗುಂಪಿಗೆ ಯಜಮಾನನಾಗಿರಬೇಕಾಗಿದ್ದರೆ ಅವ್ರದಾದರೂ ಒಂದು ಸಾಹಸದ ಕೆಲಸವನ್ನು ಮಾಡಿರಬೇಕು; ಅಂಥಾ ಸಾಹಸದ ಕೆಲಸವನ್ನು ನೀನೇನ ಮಾಡಿದ್ದೀಯೋ ಎಂದು ಕೇಳಿದುದಕ್ಕೆ ಬಂಪನು ಶ್ರೀಮಂತನರೇಂದ್ರನಾಥನ ಮನೆಗೆ ಬೆಂಕಿಯನ್ನು ಹೊತ್ತಿಸಿ ನನ್ನ ಹೆಂಡಿತಿಗೆ ಈ ಉಡುಪುಗಳನ್ನೂ ಒಡವೆಗಳನ್ನೂ ತಂದು ಕೊಟ್ಟೆನು; ಸಿಪಾಯಿಗಳು ಅಟ್ಟಿಸಿಕೊಂಡು ಬಂದಾಗ, ನಿಮ್ಮ ಯಜಮಾನನನ್ನು ಕಾಪಿಟ್ಟೆನು; ನಿಮ್ಮ ಯಜಮಾನನು ಇವಳನ್ನು ಎತ್ತಿಕೊಂಡು ಓಡುತ್ತಲಿದ್ದಾಗ ಅವನನ್ನು ಕೊಂದು ಬಿಡಿಸಿಕೊಂಡು ಬಂದೆನು ಎಂದನು

ಹತ್ತು ನಿಮಿಷಗಳು ಇಲ್ಲಿಯೇ ಇರು; ನಾವು ಯೋಚಿಸಿ ಹೇಳುವೆವು, ಎಂದು ಹೇಳಿ ಕಳ್ಳರೆಲ್ಲಾ ಹತ್ತು ನಿಮಿಷಗಳು ಆಲೋಚನೆ ಮಾಡಿ ಬಂದು, ಲುಂಗಿಬಂಪನಿಗೆ ಕಾಣಿಕೆಗಳನ್ನು ಒಪ್ಪಿಸಿದರು. ಅಂದು ಮೊದಲು ಲುಂಗಿಬಂಪನೆಂದರೆ ಎಲ್ಲರಿಗೂ ಭಯ; ಅವನು ಇಲ್ಲದ ಸ್ಥಳವೇ ಇಲ್ಲ. ಹಣಗಾರರನ್ನು ಸುಲಿದು ಬಡವರಿಗೆ ಸಾಹಾಯ್ಯವನ್ನು ಮಾಡುವುದೇ ಅವನ ಮುಖ್ಯ ಉದ್ದೇಶ ನಾನೊಂದಾವೃತ್ತಿ ಅವನ ಕೈಗೆ ಸಿಕ್ಕಿಬಿದ್ದಿದ್ದೆನು, ಅದೃಷ್ಟವಶಾತ್ ಅವನು ನನ್ನ ಗುರುತನ್ನು ಹಿಡಿದು, ನನಗೊಂದು ಬೆಲೆಯುಳ್ಳ ಗಡಿಯಾರವನ್ನು ಬಹುಮಾನವಾಗಿ ಕೊಟ್ಟು ಕಳುಹಿಸಿದನು. ಇದೇ ಅದು ಎಂದು ಜೇಬಿನಿಂದ ಗಡಿಯಾರವನ್ನು ತೆಗೆದು ತೋರಿಸಿದನು.

ಉದಯಸಿಂಹನಲ್ಲಿಯೂ ಅಂಥ ಗಡಿಯಾರವೊಂದಿದ್ದಿತು; ನನ್ನ ಗಡಿಯಾರಕ್ಕೆ

ಸಾವಿರ ವರಹಗಳ ಕೊಟ್ಟೆನು ಎಂದನು. ಆಗ ವೀರಸಿಂಹನು ಉದಯಸಿಂಹನನ್ನು ನೋಡಿ ಏನಪ್ಪಾ, ಇನ್ನೂ ನಿನಗೆ ಊರ ಹೊರಗಿನ ದಾರಿಯಲ್ಲಿ ಹೋಗಬೇಕೆಂಬ ಆಸೆಯಿರುವುದೋ ಎನ್ನಲು, ಅವನು ಇವೆಲ್ಲಾ ಸುಳ್ಳುಕಥೆಗಳು ಎಂದನು.

ಉದಯಸಿಂಹನು ಪಶುಪತಿಯನ್ನು ನೋಡಿ ಒಂಪನು ಈಗಲೂ ತನ್ನ ವ್ಯಾಪಾರ ವನ್ನು ನಡೆಸುತ್ತಲಿದ್ದರೆ ಪೋಲೀಸಿನವರು ಏನಮಾಡುತ್ತಲಿರುವರು ಎಂದು ಕೇಳಿದು ದಕ್ಕೆ, ಅವನಂತೆ ಜನಸಹಾಯವೂ ಧನಸಹಾಯವೂ ಇರುವವನನ್ನು ಯಾರು ತಾನೇ ಹಿಡಿಯುವರು ನೀವು ಊರ ಹೊರಗಿನ ದಾರಿಯಲ್ಲಿ ಹೋಗುವುದು ಅನುಚಿತವೆಂದು ನನಗೆ ತೋರುತ್ತದೆ. ಇದರ ಮೇಲೆ ನಿಮ್ಮ ಇಷ್ಟ ಎಂದು ಹೇಳಿ ಪಶುಪತಿಯು ಹೋದನು.

ಇಷ್ಟು ಹೊತ್ತಿಗೆ ಸಾಯಂಕಾಲವಾಯಿತು ವೀರಸಿಂಹನೂ ಉದಯಸಿಂಹನೂ ಊಟವನ್ನು ತೀರಿಸಿಕೊಂಡು, ಬಂಡಿಯಲ್ಲಿ ಕುಳಿತು ಊರೊಳಗಣ ದಾರಿಯಲ್ಲಿ ಹೊರ ಟರು. ಉದಯಸಿಂಹನು ತನ್ನ ಸ್ನೇಹಿತನನ್ನು ನೋಡಿ ನೀನು ಧೈರ್ಯಶಾಲಿಯೆಂದಿದ್ದೆನು ಎಂದನು.

ವೀರಸಿಂಹನು ಆವ ಬದಲನ್ನೂ ಹೇಳದೆ ತಾನು ಮಲಯದ್ವೀಪದಲ್ಲಿ ನೋಡಿದ್ದ ನಾವಿಕಸ್ಯೆಂಧವನೂ, ಈ ಕಳ್ಳರ ಯಜಮಾನ ಲುಂಗಿ ಒಂಪನಿಗೆ ಸಿಕ್ಕಿದ್ದ ನಾವಿಕಸ್ಯೆಂಧ ವನೂ, ಒಬ್ಬನೇ ಆಗಿರಬೇಕೆಂದು ಊಹಿಸಿಕೊಂಡನು. ಬಂಡಿಯು ಚಕ್ರಭೀಮನ ಕೋಟೆಯನ್ನು ಸೇರಿತು.

ಈ ಕೋಟೆಯು ಬಲು ವಿಚಿತ್ರವಾದುದು. ಇದರಲ್ಲಿ ತೊಡಕು ತೊಡಕಾದ ದಾರಿಗಳು ಅನೇಕವಿರುವುವು; ಹೊಸಬರು ಈ ಕೋಟೆಯನ್ನು ಹೊಕ್ಕರೆ ಸುತ್ತಿ ಸುತ್ತಿ ಬೇಸತ್ತು ಹೊರಗೆ ಬರುವುದೇ ಪ್ರಯಾಸ.

ವೀರಸಿಂಹ ಉದಯಸಿಂಹರಿಬ್ಬರೂ ಬಂಡಿಯಿಂದ ಇಳಿದು ಕೋಟೆಯ ಬಾಗಿಲಿ ನಲ್ಲಿದ್ದ ದಾರಿತಿಳಿದವನೊಬ್ಬನನ್ನು ಗೊತ್ತುಮಾಡಿಕೊಂಡು ಒಳಗೆ ಹೋದರು. ಅಲ್ಲಿ ಸುಮಾರು ಒಂದು ಗಂಟೆಯ ಕಾಲ ಚಂದ್ರಿಕೆಯಲ್ಲಿ ದಾರಿಗಳ ಮಧ್ಯೆಮಧ್ಯೆ ಇದ್ದ ಮನೋಹರವಾದ ತಟಾಕಗಳನ್ನೂ, ವೃಕ್ಷಗಳನ್ನೂ, ಸುವಾಸನೆಯಾದ ಪುಷ್ಪಗಳಿಂದ ತುಂಬಿದ ಗಿಡುಗಳನ್ನೂ ನೋಡುತ್ತಾ ಸುತ್ತಾಡುತ್ತಾಲಿದ್ದು, ಹಿಂದಿರುಗಿ ಹೊರಟ

ಮುಕ್ಕಾಲು ದಾರಿಗೆ ಮೇಲೆ ಬಂದಾಗ ವೀರಸಿಂಹನಿಗೆ ಸೈಂಧವನ ಧ್ವನಿ ಕೇಳಿಸಿದಂತಾಯಿತು. ಆಗ ಅವನು ಉದಯಸಿಂಹನನ್ನು ಕುರಿತು ನನಗೆ ಮುಂದಣ ದಾರಿ ತಿಳಿಯುವುದು; ನಾನಿಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಬರುವೆನು, ನೀನು ಹೋಗು ಎಂದು ಹೇಳಿ ತಾನು ಅಲ್ಲಿಯೇ ನಿಂತನು. ಆಗ ಈ ಮಾತುಗಳು ಅವನ ಕಿವಿಯಲ್ಲಿ ಬಿದ್ದುವು.

ದೇವದೂತನೆಂಬವನಾರು ?

ಅವನು ಅರಮನೆಯ ಚಾಕರನು. ಅಲ್ಲಿ ನಡೆಯುವ ವರ್ತಮಾನವನ್ನು ನನಗೆ ತಿಳಿಸಲು ಅವನಿಗೆ ವರ್ಷಕ್ಕೆ ಅಷ್ಟು ಹಣವನ್ನು ಕೊಡುತ್ತಾ ಇರುವೆನು

ನೀನು ಬುದ್ಧಿಮಂತ.

ಮಹಾಸ್ವಾಮೀ, ಆವ ವೇಳೆಯಲ್ಲಿ ಏನು ಬರುವುದೋ! ಈಗ ಪ್ರತಿರೋಧಿಯು ಸಿಕ್ಕಿಬಿದ್ದಿರುವಂತೆ ನಾನೆಂದು ಸಿಕ್ಕಿಬೀಳುವೆನೋ ಅಂಥಾ ಸಂದರ್ಭಗಳಲ್ಲಿ ಮುಂದಾಗಿ ವರ್ತಮಾನವು ತಿಳಿದಿದ್ದರೆ ಅನುಕೂಲವಲ್ಲವೇ ?

ನೀನು ದೇವದೂತನನ್ನು ವಿಚಾರಿಸಿದುದರಲ್ಲಿ ನಿನಗೇನು ಗೊತ್ತಾಯಿತು ?

ಸ್ವಾಮೀ! ನಾಡಿದ್ದು ಸರ್ಕಾರದವರು ಇಬ್ಬರು ಅಪರಾಧಿಗಳನ್ನು ಶೂಲಕ್ಕೆ ಏರಿಸುವರಂತೆ. ಇವರಲ್ಲಿ ಗುರುವನ್ನು ಕೊಂದ ಮಹಾಪಾಪಿಯಾದ ಸನ್ಯಾಸಿಯೊಬ್ಬ; ಮತ್ತೊಬ್ಬನೇ ನಮ್ಮ ಪ್ರತಿರೋಧಿ; ಇವನು ಕಳ್ಳರಿಗೆ ಅನ್ನ ಅರಿವೆಗಳನ್ನು ಒದಗಿಸಿ ಕೊಟ್ಟನೆಂದು ಇವನ ಮೇಲೆ ತಪ್ಪು ಆಪಾದನೆಯಾಗಿದೆಯಂತೆ. ಸನ್ಯಾಸಿಯ ಶಿರಸ್ಸನ್ನು ಛೇದಿಸುವರಂತೆ; ಪ್ರತಿರೋಧಿಯನ್ನು ಶೂಲಕ್ಕೆ ಏರಿಸುವರಂತೆ.

ಈಗ ನೀನು ಪ್ರತಿರೋಧಿಯನ್ನು ಬಿಡಿಸಿಕೊಳ್ಳಲು ಏನು ಏರ್ಪಾಡು ಮಾಡಿಕೊಂಡಿದ್ದೀಯೆ ?

ನಮ್ಮ ಗುರುತು ಆರಿಗೂ ತಿಳಿಯದಂತೆ ವೇಷಗಳನ್ನು ಹಾಕಿಕೊಂಡು ಗುಂಪಿನಲ್ಲಿ ಸೇರಿ, ಪ್ರತಿರೋಧಿಯನ್ನು ಹನನಸ್ಥಳಕ್ಕೆ ಕರೆದುಕೊಂಡು ಬರುವಾಗ ಗಲಿಬಿಲಿಹತ್ತಿಸಿ, ಸರ್ಕಾರದವರು ಗಾಬರಿಬಿದ್ದಾಗ ಅವನನ್ನು ಬಿಡಿಸಿಕೊಂಡುಹೋಗಲು ಏರ್ಪಾಡು ಮಾಡಿಕೊಂಡಿದ್ದೇನೆ.

ಅದು ಪ್ರಯೋಜನವಿಲ್ಲ. ಈಗಲೇ ಸರ್ಕಾರದವರಿಗೂ ಈ ಊರಿನಲ್ಲಿರುವವರಿಗೂ ಈ ಊರಿನಲ್ಲಿರುವ ಶ್ರೀಮಂತರಿಗೂ ನಿನ್ನ ಮೇಲೆ ಕಣ್ಣಿದೆ; ನಿನ್ನ ಹಾವಳಿಯನ್ನು

ಹೇಗಾದರೂ ನಿಲ್ಲಿಸಬೇಕೆಂದು ಪ್ರಯತ್ನಪಡುತ್ತಲಿದ್ದಾರೆ. ಹೀಗಿರುವಲ್ಲಿ ನೀನು ಒರಟಾಟ ಮಾಡಿದರೆ ನಿನ್ನ ಮೇಲೆ ದ್ವೇಷವು ಇನ್ನೂ ಹೆಚ್ಚುವುದು. ಒರಟು ಬಲಕ್ಕಿಂತ ಹಣದ ಬಲವೇ ಮೇಲು, ಆದುದರಿಂದ ಈ ಕೆಲಸವನ್ನು ನನಗೆ ಬಿಡು, ನಾನು ನೋಡಿಕೊಳ್ಳುತ್ತೇನೆ

ಮಹಾಸ್ವಾಮೀ! ನಾಡಿದ್ದು ಬೆಳಿಗ್ಗೆ ಅವನನ್ನು ಶೂಲಕ್ಕೆ ಏರಿಸುವುದಾಗಿ ಏರ್ಪಾಡಾಗಿದೆ; ನಾಳೆ ಒಂದೇ ದಿನ ನಿಮಗೆ ಅವಕಾಶವಿರುವುದು.

ಆದರೇನು? ಒಂದು ದಿವಸಕ್ಕೆ ಇಪ್ಪತ್ತು ನಾಲ್ಕು ಗಂಟೆಗಳಿಲ್ಲವೇ? ಗಂಟೆಗೆ ಅರವತ್ತು ನಿಮಿಷಗಳಿಲ್ಲವೇ? ನಿಮಿಷಕ್ಕೆ ಅರವತ್ತು ವಿನಿಮಿಷಗಳಿಲ್ಲವೇ? ಈ ಎಂಬತ್ತಾರು ಸಾವಿರದ ನಾನೂರು ವಿನಿಮಿಷಗಳಲ್ಲಿ ಆವ ಕೆಲಸವನ್ನು ತಾನೇ ಮಾಡಕೂಡದು?

ನೀವು ಮಾಡಿದ ಪ್ರಯತ್ನವು ಸಫಲವಾಯಿತೆಂದು ನನಗೆ ಹೇಗೆ ತಿಳಿಯಬೇಕು?

ಕಲ್ಯಾಣಿ ಚೌಕದಲ್ಲಿ ನಾನೊಂದು ಮಾಳಿಗೆಯನ್ನು ಬಾಡಿಗೆಗೆ ತೆಗೆದುಕೊಂಡಿದೇನೆ, ಅದಕ್ಕೆ ಮೂರು ಕಿಟಕಿಗಳಿವೆ. ನನ್ನ ಪ್ರಯತ್ನವು ಸಾಗಿದರೆ ಅತ್ತಿತ್ತಲಿರುವ ಕಿಟಕಿಗಳಿಗೆ ಕೆಂಪು ಬಟ್ಟೆಯ ತೆರೆಯನ್ನು ಹಾಕಿ, ಮಧ್ಯದಕ್ಕೆ ಹಸರು ಬಣ್ಣದ ತೆರೆಯನ್ನು ಹಾಕುವೆನು, ಸಾಗದೆ ಇದ್ದರೆ ಮೂರಕ್ಕೂ ಕೆಂಪು ತೆರೆಯೇ ಇರುವುದು

ಮಹಾಸ್ವಾಮಿಯವರಿಗೆ ಅಸಮಾಧಾನವಿಲ್ಲದಿದ್ದರೆ ನಾನು ಒಂದು ಕೆಲಸವನ್ನು ಮಾಡುತ್ತೇನೆ ನಾನೂ ನನ್ನ ಮನುಷ್ಯರೂ ಸಿದ್ಧವಾಗಿ ಬರುವೆವು, ತಮ್ಮ ಏರ್ಪಾಡು ನಡೆದರೆ ಸರಿ, ಇಲ್ಲದಿದ್ದರೆ ನನ್ನ ಏರ್ಪಾಡನ್ನು ನಡೆಸುವೆನು.

ಅದರಿಂದ ಅಸಮಾಧಾನಕ್ಕೆ ಕಾರಣವೇನು? ಅದು ಅನವಶ್ಯಕವೆಂದು ನನಗೆ ತೋರುತ್ತದೆ, ನಿನಗೆ ತೃಪ್ತಿಯುಂಟಾಗುವುದಾದರೆ ಹಾಗೆಯೇ ಮಾಡು.

ಮಹಾಸ್ವಾಮೀ! ಪ್ರತಿರೋಧಿಯನ್ನು ತಾವು ಬಿಡಿಸಿಕೊಟ್ಟರೆ ನನ್ನ ಜೀವವಿರುವವರೆಗೆ ನಾನೂ ನನ್ನ ಕಡೆಯವರೂ ತಮ್ಮ ಸೇವಕರಾಗಿರುವೆವು.

ಅಪ್ಪಾ? ಒಂದಾನೊಂದು ಕಾಲದಲ್ಲಿ ನಾನೂ ನಿನ್ನ ಸಾಹಾಯ್ಯವನ್ನು ಕೋರಬೇಕಾಗಿ ಬರುವುದು.

ಸ್ವಾಮೀ! ಅಂಥ ಕಾಲ ಒಂದಾಗ ತಮ್ಮ ಗುಲಾಮನಾದ ನನಗೆ ಒಂದು ಮಾತ ಹೇಳಿ ಕಳುಹಿಸಿದರೆ ನಾನೆಲ್ಲಿದ್ದರೂ ತಮ್ಮ ಅಪ್ಪಣೆಯನ್ನು ಶಿರಸಾವಹಿಸಿ ನಡೆದು

ಕೊಳ್ಳುವೆನು. ಅಷ್ಟೇ ಅಲ್ಲ ತಮ್ಮ ಕಡೆಯವರಾರಾದರೂ ಸರಿಯೆ, ಅವರನ್ನೂ ತಮ್ಮಂತೆ ಭಾವಿಸುವೆನು.

ಈ ಮಾತುಗಳು ಇಲ್ಲಿಗೆ ನಿಂತು, ಮಾತನಾಡುತ್ತಲಿದ್ದವರಿಬ್ಬರೂ ಹೊರಟಂತೆ ತೋರಿತು ವೀರಸಿಂಹನು ಸ್ವಲ್ಪ ಹೊತ್ತು ನೋಡಿ ಅವರು ಹೊರಟು ಹೋದರೆಂದು ದೃಢಪಡಿಸಿಕೊಂಡು, ಎದ್ದು ಹೊರಗೆ ಬಂದು ಬಂಡಿಯನ್ನು ಸೇರಿದನು. ಉದಯ ಸಿಂಹನು ಮೊದಲೇ ಬಂಡಿಯಲ್ಲಿ ಕುಳಿತಿದ್ದನಾದ ಕಾರಣ ಬಂಡಿಯು ಒಡನೆಯೇ ಬಿಡಾರಕ್ಕೆ ಹೊರಟಿತು. ವೀರಸಿಂಹನಿಗೆ ತಾನು ಮಲಯದ್ವೀಪದಲ್ಲಿ ನೋಡಿ ಮಾತನಾಡಿಸಿದ್ದ ನಾವಿಕ ಸೈಂಧವನೂ, ಲುಂಗಿ ಒಂಪನ ಕಥೆಯಲ್ಲಿ ಕೇಳಿದ್ದ ನಾವಿಕ ಸೈಂಧವನೂ, ಈಗ ಮಾತನಾಡುತ್ತಲಿದ್ದವರಲ್ಲಿ ಒಬ್ಬನು ಆ ಸೈಂಧವನೂ ಮತ್ತೊಬ್ಬನು ಲುಂಗಿ ಒಂಪನಾಗಿರಬೇಕೆಂದು ನಿರ್ಧರಮಾಡಿಕೊಂಡನು; ಆದರೆ ಒಂಪನಿಗೂ ಅವನಿಗೂ ಏನು ಸಂಬಂಧ; ಇಷ್ಟು ಸ್ನೇಹಕ್ಕೆ ಕಾರಣವೇನು ಎಂದು ಯೋಚಿಸುತ್ತಲಿದ್ದನು. ಉದಯಸಿಂಹನು ತಾನು ಚಕ್ರಭೀಮನ ಕೋಟೆಯಲ್ಲಿ ನೋಡಿದ ಅತಿಶಯಗಳನ್ನು ಅತ್ಯುತ್ಸಾಹದಿಂದ ವರ್ಣಿಸುತ್ತಲಿದ್ದಾಗ ಇವನು ಯೋಚನಾಪರನಾಗಿದ್ದುದರಿಂದ ಅವನ ಮಾತುಗಳಿಗೆ ಗಮನವೇ ಕೊಡಲಿಲ್ಲ.

ಆ ರಾತ್ರಿ ಇಬ್ಬರೂ ಎಂದಿನಂತೆ ಮಲಗಿಕೊಂಡರು, ಆದರೆ ವೀರಸಿಂಹನಿಗೆ ಈ ಯೋಚನೆಯಿಂದ ಬಲು ಹೊತ್ತು ನಿದ್ರೆಯೇ ಹತ್ತಲಿಲ್ಲ. ಅವನು ಎಷ್ಟು ಪ್ರಯತ್ನ ಮಾಡಿದರೂ ಸೈಂಧವನ ವಿಚಾರವನ್ನು ಮರೆಯಲು ಆಗಲಿಲ್ಲ. ಬಲು ಹೊತ್ತು ಹಾಸಿಗೆಯಲ್ಲಿ ಒದ್ದಾಡಿ ಬಳಲಿ ಬೇಸತ್ತು ಬೆಳಗಿನ ಜಾವದಲ್ಲಿ ಸ್ವಲ್ಪ ನಿದ್ದೆಮಾಡಿದನು.

---

# ಇಪ್ಪತ್ತೈದನೆಯ ಅಧ್ಯಾಯ

## ಉತ್ಸವ

ಮಾರನೆಯ ದಿನ ಬೆಳಿಗ್ಗೆ ಎದ್ದು ಉದಯಸಿಂಹನು ರಾತ್ರೆ ನಾಟಕಕ್ಕೆ ಹೋಗಬೇಕೆಂದು ನಿಶ್ಚಯಿಸಿ, ಅಲ್ಲಿಗೆ ಬರುವ ಅಬಲೆಯರ ಮನಸ್ಸನ್ನು ಸೆಳೆಯಲೋಸುಗ ತಕ್ಕ ಉಡಿಗೆಗಳನ್ನು ಕೊಳ್ಳಲು ಅಂಗಡಿಗೆ ಹೋದನು. ವೀರಸಿಂಹನು ಊರಿಗೆ ಕಾಗದಗಳನ್ನು ಬರೆಯುವ ನೆವದಿಂದ ಬಿಡಾರದಲ್ಲಿಯೇ ನಿಂತನು.

ಈ ಸ್ನೇಹಿತರಿಬ್ಬರಿಗೂ ವಯಸ್ಸಾಗಿದ್ದರೂ ಮದುವೆಯಾಗಿರಲಿಲ್ಲ ವೀರಸಿಂಹನು ಕೂಡಿದ ಮಟ್ಟಿಗೆ ಜಿತೇಂದ್ರಿಯನಾಗಿದ್ದನು, ಉದಯಸಿಂಹನಿಗೆ ಹೆಂಗುಸರ ಚಾಪಲ್ಯ ಆದರಿಂದಲೇ ಅವನು ದೇಶಾಟನವನ್ನು ಮಾಡಲು ಹೊರಟನು ಇಂದ್ರಪ್ರಸ್ಥಕ್ಕೆ ಬಂದ ಮೇಲೆ ವೀರಸಿಂಹನೊಡನೆ ಈ ವಿಷಯವಾಗಿ ಪ್ರಸ್ತಾಪಮಾಡಿದಾಗಲೆಲ್ಲಾ, ಅವನು ಅಮರದೇಶದಲ್ಲಿರುವಷ್ಟು ವ್ಯಭಿಚಾರವು ಇಲ್ಲಿಲ್ಲವೆಂದೂ, ಒಂದು ವೇಳೆ ಇದ್ದರೂ ಅದರಲ್ಲಿಯೂ ಸ್ವಲ್ಪ ಸತ್ಯದಿಂದ ನಡೆಯುವರೆಂದೂ ಎಷ್ಟು ಹೇಳಿದರೂ ತನ್ನ ಚಾಪಲ್ಯ ತಪ್ಪಲಿಲ್ಲ ತಾನು ಶ್ರೀಮಂತನೂ, ರೂಪವಂತನೂ ಆಗಿದ್ದುದರಿಂದ ತನ್ನ ರೂಪಯೌವನಾದಿಸಂಪತ್ತುಗಳನ್ನು ನೋಡಿದೊಡನೆಯೇ ದೊಡ್ಡವರ ಮನೆಯ ಸ್ತ್ರೀಯರು ಮೋಹಗೊಳ್ಳುವರು ಎಂದೂ, ಅಂತಹ ಹೆಂಗುಸರ ಸ್ನೇಹವಾದರೆ ಉತ್ಸವದ ಕೊನೆಯ ಮೂರು ದಿವಸಗಳು ತನಗೆ ಬಂಡಿಗೂ ಅನುಕೂಲವಾಗುವುದು ಎಂದೂ ಯೋಚಿಸಿ, ಇದರಿಂದಲೇ ಅವನು ಹೆಚ್ಚು ಹಣವನ್ನು ಕೊಟ್ಟು ನಾಟಕಶಾಲೆಯಲ್ಲಿ ಕುಟುಂಬಿಗಳಿಗಾಗಿ ಪ್ರತ್ಯೇಕವಾಗಿ ಮಾಡಿದ್ದ ಆಸನಗಳಲ್ಲಿ ಒಂದನ್ನು ಮಾಡಿಕೊಂಡನು.

ವೀರಸಿಂಹನಿಗೆ ಇಷ್ಟವಿಲ್ಲದಿದ್ದರೂ ಸ್ನೇಹಿತನ ದಾಕ್ಷಿಣ್ಯಕ್ಕಾಗಿ ನಾಟಕಕ್ಕೆ ಹೋಗಿ ಅವನ ಜತೆಯಲ್ಲಿ ಕುಳಿತನು ನಾಟಕವು ಆರಂಭವಾದುದು ಮೊದಲು ಉದಯಸಿಂಹನು ಎಷ್ಟೆಷ್ಟು ನೋಡಿದರೂ ರೂಪವತಿಯರಾದ ಹೆಂಗುಸರೊಬ್ಬರೂ ಇವನನ್ನು ಲಕ್ಷ್ಯಮಾಡಲಿಲ್ಲ. ಇವನೂ ನೋಡಿ ನೋಡಿ ಬೇಸತ್ತು ವೀರಸಿಂಹನನ್ನು ನೋಡಿ, ಇಲ್ಲಿಯ ಹೆಂಗುಸರಿಗೆ ಉತ್ಸಾಹವೇ ಇಲ್ಲ ಎಂದು ಹೇಳುತ್ತಲಿರುವಾಗ ಸುಮಾರು ಇಪ್ಪತ್ತೈದು ವಯಸ್ಸಿನ ತರುಣಿಯೊಬ್ಬಳು ಸುತ್ತಲೂ ನೋಡಿ, ವೀರಸಿಂಹನನ್ನು ಕಂಡು ಸಸುನಗುತ್ತ ಕುಳಿತುಕೊಂಡಳು.

ಈ ಯುವತಿಯು ಒಬ್ಬ ಶ್ರೀಮಂತನನ್ನು ಕೈಹಿಡಿದಿದ್ದಳು, ಮದುವೆಯಾದ ವರ್ಷದೊಳಗಾಗಿಯೇ ಪತಿವಿಯೋಗವಾದುದರಿಂದ ನಾಟಕ, ಸಂಗೀತಗೋಷ್ಠಿಗಳಿಗೆ ತಪ್ಪದೆ ಹೋಗಿ ಕಾಲಹರಣ ಮಾಡುತಲಿದ್ದಳು ಕೆಲವರು ಸ್ತ್ರೀಯರು ಆಭರಣಗಳಿಂದ ಸೌಂದರ್ಯವು ಹೆಚ್ಚುವುದೆಂದು ತಿಳಿದುಕೊಂಡಿರುವರು, ಇವಳಾದರೋ ಆಭರಣವು

ತನ್ನ ಸೌಂದರ್ಯವನ್ನು ಮುಚ್ಚುವುದೆಂದು ತಿಳಿದುಕೊಂಡು ಹೆಚ್ಚಾಗಿ ಒಡವೆಗಳಾವು ವನ್ನೂ ತೊಟ್ಟಿರಲಿಲ್ಲ.

ವೀರಸಿಂಹನಿಗೆ ಇವಳ ಪರಿಚಯುವು ಇದೆ ಎಂದು ತಿಳಿದು, ಉದಯಸಿಂಹನು ಅವನನ್ನು ನೋಡಿ ಅವಳನ್ನು ನೀನು ಬಲ್ಲೆಯೋ ಎಂದುದಕ್ಕೆ ಹೌದು, ಬಲ್ಲೆ ಎಂದನು.

ಅವಳ ಹೆಸರೇನು ? " ಗಂಗಾಬಾಯಿ "

ಅವಳ ಪರಿಚಯುವನ್ನು ನನಗೆ ಮಾಡಿಕೊಡು ಎಂದು ಉದಯಸಿಂಹನು ಕೇಳು ವುದಕ್ಕೆ ಸರಿಯಾಗಿ, ಗಂಗಾಬಾಯಿಯು ವೀರಸಿಂಹನಿಗೆ ತನ್ನ ಹತ್ತಿರ ಬರುವಂತೆ ಸಂಜ್ಞೆ ಮಾಡಿದಳು, ಅದಕ್ಕೆ ಅವನು ಉದಯಸಿಂಹನನ್ನು ತೋರಿಸಿ ಇವನನ್ನೂ ಕರೆದು ಕೊಂಡು ಬರಲೋ ಎಂದು ಕೇಳಿದುದಕ್ಕೆ ಅವಳು ಆಗಬಹುದೆಂದಳು.

ಇದೆಲ್ಲವನ್ನೂ ನೋಡುತ್ತಲಿದ್ದ ಉದಯಸಿಂಹನು ಅಪ್ಪಾ, ವೀರ! ನಿನಗೂ ಅವ ಳಿಗೂ ವಿಶೇಷ ಪರಿಚಯವಿರುವಂತೆ ಇದೆ ಎನ್ನಲು, ಅವನು ಅಂತಹುದು ಅವುದೂ ಇಲ್ಲ, ನಮ್ಮ ಹೆಂಗುಸರಂತೆ ಇಲ್ಲಿಯವರು ಅಲ್ಲವೆಂದು ಎಷ್ಟುಸಾರಿ ಹೇಳಲಿ? ಇವರು ಸ್ವಲ್ಪ ಪರಿಚಯವಿದ್ದರೂ ಧಾರಾಳವಾಗಿ ಮಾತುಕತೆಗಳನ್ನಾಡುವರಲ್ಲದೆ ಮತ್ತೇನೂ ಇಲ್ಲ. ಇದನ್ನು ಚೆನ್ನಾಗಿ ತಿಳಿದಿರು, ಇಲ್ಲವಾದರೆ ಮೋಸಹೋಗಿ ಅವಮಾನ ಪಡುವೆ ಎಂದನು.

ಇಷ್ಟು ಹೊತ್ತಿಗೆ ಒಂದು ಅಂಕವು ಮುಗಿದು ತೆರೆಯು ಬಿದ್ದಿತು. ಆಗ ವೀರ ಸಿಂಹನು ಉದಯಸಿಂಹನನ್ನು ಕರೆದುಕೊಂಡು ಗಂಗಾಬಾಯಿಯ ಬಳಿಗೆ ಹೋಗಿ ಅವರಿಬ್ಬರಿಗೂ ಪರಿಚಯುವನ್ನು ಮಾಡಿಕೊಟ್ಟು ಉದಯಸಿಂಹನನ್ನು ಅವಳ ಪಕ್ಕದಲ್ಲಿ ಕುಳ್ಳಿರಿಸಿ ತಾನು ಹಿಂದೆ ಇದ್ದ ಆಸನದಲ್ಲಿ ಕುಳಿತನು.

ಯೌವನಸ್ಥರಲ್ಲಿ ಪರಿಚಯವೆಂದರೆ ಸ್ನೇಹ ಗಂಗಾಬಾಯಿಯೂ ಉದಯ ಸಿಂಹನೂ ತಡೆಯಿಲ್ಲದೆ ಮಾತುಗಳನ್ನಾಡುತ್ತಿದ್ದರು. ಅವರನ್ನು ತೊಂದರೆ ಮಾಡಲು ಇಷ್ಟವಿಲ್ಲದೆ ಬೇಸರಿಕೆಯಿಂದ ವೀರಸಿಂಹನು ಸುತ್ತೂ ನೋಡುತ್ತಲಿದ್ದಾಗ, ಇದಿರಿಗೆ ಸ್ಫುರದ್ರೂಪಿಯಾಗಿ ಸರ್ವಾಭರಣಭೂಷಿತೆಯಾದ ಯುವತಿಯೊಬ್ಬಳು ಕುಳಿತು ಇದ್ದು ದನ್ನು ಕಂಡನು. ಉಡಿಗೆತೊಡಿಗೆಗಳಿಂದ ಅವಳು ಯವನದೇಶದವಳಂತೆ ಕಾಣಿಸುತ್ತಿ

ದ್ದಳು. ಸಾಮಾನ್ಯವಾಗಿ ಆ ದೇಶದ ಹೆಂಗುಸರೇ ಸುಂದರಿಯರು ; ಅವಳ ಸೌಂದರ್ಯವು ಅಸಾಧಾರಣವಾಗಿ ಊರ್ವಶಿ ರತಿ ರಂಭೆಯರನ್ನೂ ಕೀಳೆನಿಸುತ್ತಿದ್ದುದರಿಂದ ಜಿತೇಂದ್ರಿಯನಾದ ವೀರಸಿಂಹನೂ ಮೋಹಪರವಶನಾಗಿ ಹೋದನು

ಅವಳ ಹಿಂದೆ ಸ್ವಲ್ಪ ಮರೆಯಲ್ಲಿ ಆವನೋ ಒಬ್ಬನು ಕುಳಿತಿದ್ದನು. ಉದಯ ಸಿಂಹ ಗಂಗಾಬಾಯಿಯರ ಸಂಭಾಷಣೆಗೆ ಅಡ್ಡಿಮಾಡಕೂಡದೆಂದಿದ್ದರೂ, ಆ ಸುಂದರಿಯು ಆರೆಂಬುದನ್ನು ತಿಳಿಯುವ ಕುತೂಹಲದಿಂದ ಅವಳಾರು ಬಲ್ಲೆಯೋ, ಎಂದು ಗಂಗಾಬಾಯಿಯನ್ನು ಕೇಳಿದನು.

ನನಗೆ ತಿಳಿಯದು , ಈ ಉತ್ಸವಾರಂಭವಾದಂದಿನಿಂದಲೂ ಅವಳು ಪ್ರತಿನಿತ್ಯವೂ ತಪ್ಪದೆ ಇಲ್ಲಿಗೆ ಬರುತ್ತಲಿದ್ದಾಳೆ.

ಅವಳ ರೂಪವು ಹೇಗಿದೆ ?

ನನ್ನನ್ನು ರೂಪವತಿಯೆಂದು ಎಲ್ಲರೂ ಹೊಗಳುವರು , ಆದರೆ ಅವಳ ರೂಪದ ಮುಂದೆ ನನ್ನದೇನು !

ಅವಳ ಹಿಂದೆ ಇರುವವನಾರು ?

ಹಿಂದೆ ಆರಿರುವರು ಎಂದು ಗಂಗಾಬಾಯಿಯು ಎದ್ದು ನೋಡಿದ ಒಡನೆಯೇ, ಕೈಕಾಲುಗಳು ಗಡಗಡನೆ ನಡುಗುತ್ತ ನಿಲ್ಲಲಾರದೆ ಕುರ್ಚಿಯ ಮೇಲೆ ಕುಳಿತು, ನಾನಿಲ್ಲಿರಲಾರೆ, ಬೇಗ ನನ್ನನ್ನು ಕರೆದುಕೊಂಡು ಮನೆಯಲ್ಲಿ ಬಿಟ್ಟುಬಿಡು ಎಂದು ವೀರಸಿಂಹನ ಎರಡು ಕೈಗಳನ್ನೂ ಹಿಡಿದು ಬೇಡಿಕೊಳ್ಳಲು, ಅವನು ಅವಳ ಜತೆಯಲ್ಲಿ ಬಂಡಿಯಲ್ಲಿ ಕುಳಿತು ಹೊರಟು ಹೋದನು.

ವೀರಸಿಂಹನು ತನ್ನ ಬಿಡಾರಕ್ಕೆ ಬಂದಾಗ ರಾತ್ರೆ ಸುಮಾರು ಒಂದು ಗಂಟೆಯಾಗಿದ್ದಿತು ಉದಯಸಿಂಹನು ಮಂಚದ ಮೇಲೆ ದಿಂಬನ್ನು ಒರಗಿ ಕುಳಿತುಕೊಂಡು ಯೋಚನಾಪರನಾಗಿದ್ದನು. ಅವನಿಗೆ ವೀರಸಿಂಹನು ಬಂದುದೇ ಗೊತ್ತಾಗಲಿಲ್ಲ; ಗೊತ್ತಾದ ಮೇಲೆ, ಎಲೋ ವೀರಸಿಂಹ ! ನೀನು ಬೆಳಗಾಗುವವರೆಗೆ ಇಲ್ಲಿಗೆ ಬರಲಾರೆ ಎಂದಿದ್ದೆನು, ಇದೇನು ಆಗಳೇ ಬಂದುಬಿಟ್ಟೆ ಎನ್ನಲು, ಅವನು ಅಪ್ಪಾ ಉದಯ ನಾನು ಎಷ್ಟು ಹೇಳಿದರೂ ನಿನ್ನ ದುರ್ಬುದ್ಧಿಯನ್ನು ನೀನು ಬೇರೆ ಬಿಡುವುದಿಲ್ಲ ಎಂದನು.

ಈ ದೇಶದ ಹೆಂಗುಸರ ಚರ್ಯೆಯನ್ನು ಹೀಗೆಂದು ತಿಳಿಯಲು ಅಸಾಧ್ಯ, ನನ್ನೊಂದಿಗೆ ಸರಸವಾಗಿ ಮಾತನಾಡುತ್ತಲಿದ್ದವಳು ಏನನ್ನೋ ನೆನಸಿಕೊಂಡು ಹೆದರಿದಂತೆ ರಾತ್ರಿಯೆಲ್ಲ ಪರಪುರುಷನ ಜತೆಯಲ್ಲಿ ಒಬ್ಬಳೇ ಬಂಡಿಯಲ್ಲಿ ಕುಳಿತು ಮನೆಗೆ ಹೋದಳಲ್ಲಾ, ಏನೆಂದು ಹೇಳೋಣ! ನಮ್ಮ ಹೆಂಗಸರು ಹೀಗೆ ಮಾಡಿದ್ದರೆ ಅವರ ಮಾನವು ನಿಲ್ಲುತಿದ್ದಿತೆ?

ನಮ್ಮ ಹೆಂಗಸರಲ್ಲಿ ಜಾರತ್ವವು ಹೆಚ್ಚಾದುದರಿಂದ ಅವರು ಸ್ವಲ್ಪ ಸರಸರಾಗಿದ್ದರೂ ಮಾನ ನಿಲ್ಲದು; ಈ ದೇಶದವರಲ್ಲಿ ಅದು ಕಡಿಮೆಯಾದುದರಿಂದ ಅವರು ಪರಿಚಿತರಾದವರೊಡನೆ ಭಯವಿಲ್ಲದೆ ಧಾರಾಳವಾಗಿ ಸರಸವಾಡುವರು, ಹೀಗಿರುವುದರಿಂದ ಇವರು ಸುಲಭರೆಂದು ತಿಳಿಯಬೇಡ. ಗಂಗಾಬಾಯಿಯು ನಾಟಕ ಶಾಲೆಯಲ್ಲಿ ಯವನದೇಶದ ಯುವತಿಯು ಹಿಂದೆ ಕುಳಿತಿದ್ದವನು ಭೂಗತನಾಗಿದ್ದು ಅವ್ಯದೋ ಅನಾಹುತವನ್ನು ನಡೆಸಲು ಮನುಷ್ಯಾಕಾರದಿಂದ ಓಡಾಡುತ್ತಲಿರುವ ಪಿಶಾಚನೆಂದು ಭಾವಿಸಿ ಗಡಗಡನೆ ನಡುಗಿ ಅಲ್ಲಿ ನಿಲ್ಲಲಾರದೆ ಮನೆಗೆ ಹೋದಳು.

ನಾಟಕ ಮುಗಿದು ಎಲ್ಲರೂ ಹೊರಟಾಗ ನಾನು ಆ ಯವನಿಯನ್ನೂ ಅವಳ ಹಿಂದೆ ಇದ್ದವನನ್ನೂ ನೋಡಿದೆನು, ಆ ಮನುಷ್ಯನು ಶ್ರೀಮಂತರ ವಂಶದಲ್ಲಿ ಹುಟ್ಟಿದವನಂತೆ ತೋರುತ್ತಲಿದ್ದನು. ಆಹಾ! ಆ ಯುವತಿಯ ಸೌಂದರ್ಯವನ್ನು ವರ್ಣಿಸಲು ಅಸಾಧ್ಯವು, ಅಂತಹ ಸುಂದರಿಯನ್ನು ನಾನೆಲ್ಲಿಯೂ ನೋಡಿರಲಿಲ್ಲ. ಅವಳ ಪರಿಚಯವು ಹೇಗೆ ತಾನೇ ನನಗಾದೀತು?

ಈ ದುರ್ಬುದ್ಧಿಯನ್ನು ಬಿಡು, ಇಲ್ಲದಿದ್ದರೆ ನಿನ್ನ ಪರಿಣಾಮವು ಏನಾದೀತೋ! ಇನ್ನು ಈ ಪ್ರಸ್ತಾಪವು ಸಾಕು. ನಾಳೆಯ ದಿನ ಒಂಡಿಗೆ ಏನ ಮಾಡಿದೆ?

ಅದಕ್ಕೆ ನಾನೊಂದು ಏರ್ಪಾಡನ್ನು ಮಾಡಿರುವೆನು.

ಅದೇನು?

ಈ ಊರಲ್ಲಿ ಎಲ್ಲರೂ ಉತ್ಸವಕಾಲದಲ್ಲಿ ವೇಷವನ್ನು ಹಾಕಿಕ್ಕೊಂಡು ಓಡಾಡುವುದರಿಂದ ನಾವೂ ಒಂದು ಎತ್ತಿನ ಬಂಡಿಯನ್ನು ಮಾಡಿಕೊಂಡು ಹಳ್ಳಿಯವರಂತೆ ವೇಷವನ್ನು ಹಾಕಿಕೊಂಡು ಊರೆಲ್ಲ ತಿರುಗಿ ಉತ್ಸವವನ್ನು ನೋಡಿಕೊಂಡು ಬರ

ಬಹುದು. ಇದನ್ನು ಪಶುಪತಿಗೆ ತಿಳಿಸಿದ ಕೂಡಲೇ, ಭಲ, ಇದು ಒಳ್ಳೆಯ ಉಪಾಯವೇ ಸರಿ ಎಂದು ಅವನು ಒಪ್ಪಿಕೊಂಡನು.

ಎತ್ತಿನ ಬಂಡಿಯು ಸಿಕ್ಕುವುದೋ ?

ಸಿಕ್ಕುವುದೋ ಇಲ್ಲವೋ ತಿಳಿದು ಬಂದು ಹೇಳುವುದಾಗಿ ಹೋಗಿದ್ದಾನೆ ಎಂದು ಉದಯಸಿಂಹನು ಹೇಳಿ ಮುಗಿಸುವುದರೊಳಗಾಗಿ ಪಶುಪತಿಯು ಕೊಟ್ಟಡಿಯೊಳಗೆ ತಲೆ ಹಾಕಿದನು.

ಅವನು ಒಳಗೆ ಬಂದು ಮಹಾಸ್ವಾಮೀ, ನಾನು ಎತ್ತಿನ ಬಂಡಿಯನ್ನು ಮಾಡಿಕೊಂಡು ಬರುವುದಕ್ಕೆ ಹೋದಾಗ, ನಿಮ್ಮ ಪಕ್ಕದ ಕೊಟ್ಟಡಿಯಲ್ಲಿಳಿದಿರುವ ರಾಜಾಮಲಯಸಿಂಹರು, ನೀವು ತೊಂದರೆ ಪಡುತ್ತಿರುವಿರೆಂಬುದನ್ನು ಕೇಳಿ, ತಮ್ಮ ಬಂಡಿಯನ್ನೂ ತಾವು ಬಾಡಿಗೆಗೆ ಮಾಡಿಕೊಂಡಿರುವ ಮಾಳಿಗೆಯಲ್ಲಿ ಸ್ಥಳವನ್ನೂ ಕೊಡುವುದಾಗಿ ನಿಮಗೆ ತಿಳಿಸಬೇಕೆಂದು ನನ್ನನ್ನು ಕಳುಹಿಸಿದಾರೆ. ನಿಮ್ಮ ಅಭಿಪ್ರಾಯವೇನು ? ಅವರಿಗೆ ಅದನ್ನು ತಿಳಿಸುವೆನು ಎಂದನು.

ಆಗ ಸ್ನೇಹಿತರಿಬ್ಬರೂ ಒಬ್ಬರ ಮುಖವನ್ನು ಒಬ್ಬರು ನೋಡಿ ಪಶುಪತಿಯನ್ನು ಕುರಿತು ಅವನಾರು ಎನ್ನಲು, ಅವನು ಒಬ್ಬ ರಾಜಕುಮಾರನೆಂದು ತೋರುತ್ತಲಿದೆ. ಅವನ ನಡತೆಯು ಬಹು ಶ್ಲಾಘ್ಯವಾದುದು ಎಂದನು.

ನೀನು ಹೇಳಿದಂತೆ ಅವನು ಶೀಲವಂತನಾಗಿದ್ದರೆ ಈ ವಿಷಯದಲ್ಲಿ ನಮಗೇಕೆ ಒಂದು ಕಾಗದವನ್ನು ಬರೆಯದೇ ಹೋದನು ಎಂದು ವೀರಸಿಂಹನು ಕೇಳುವ ವೇಳೆಗೆ ಸರಿಯಾಗಿ ಒಳ್ಳೆಯ ಉಡುಪನ್ನು ತೊಟ್ಟು ಒಬ್ಬ ಆಳು ಬಂದು ಪಶುಪತಿಯ ಕಯ್ಯಲ್ಲಿ ಎರಡು ಪತ್ರಗಳನ್ನು ಕೊಟ್ಟನು. ಅವನು ಇದೋ ಮಹಾಸ್ವಾಮೀ, ತಾವು ಕೇಳುವ ಪತ್ರಗಳು ಬಂದಿರುವಂತೆ ತೋರುತ್ತಲಿದೆ ಎಂದು ಅವುಗಳನ್ನು ಅವರ ಕಯ್ಯಲ್ಲಿ ಕೊಟ್ಟನು. ಆ ಪತ್ರಗಳಲ್ಲಿ ಈ ರೀತಿ ಬಕ್ಕಣೆಯಿದ್ದಿತು :—

ಮಹಾರಾಜಶ್ರೀಯವರ ಸಮಕ್ಷಮಕ್ಕೆ — ಉಭಯಕುಶಲೋಪರಿ. ನಿಮ್ಮ ಪಕ್ಕದ ಕೊಟ್ಟಡಿಯಲ್ಲಿರುವ ರಾಜಾಮಲಯಸಿಂಹನೆಂಬ ನಾನು ತಮ್ಮ ದರ್ಶನಲಾಭಕ್ಕೋಸುಗ ನಾಳೆಯ ಬೆಳಿಗ್ಗೆ ಬರಬೇಕೆಂದು ಇದ್ದೇನೆ. ತಮಗೆ ಅನುಕೂಲವಾದ ಕಾಲವನ್ನು ದಯೆಮಾಡಿ ತಿಳಿಸಬೇಕಾಗಿ ಬೇಡುತ್ತೇನೆ.

ವೀರಸಿಂಹನೂ ಉದಯಸಿಂಹನೂ ಆ ಪತ್ರಗಳನ್ನು ಓದಿ ನೋಡಿಕೊಂಡು ರಾಜಾಮಲಯಸಿಂಹರು ಇಲ್ಲಿಗೆ ಬಿಜಯಮಾಡುವುದಕ್ಕಿಂತ ನಾವಿಬ್ಬರೂ ಅಲ್ಲಿಗೇ ಅವರ ದರ್ಶನಕ್ಕೆ ಬರುವೆವು ಎಂದು ಆಳಿಗೆ ಹೇಳಿ ಕಳುಹಿಸಿ, ಪಶುಪತಿಯನ್ನು ನೋಡಿ ನಿಮ್ಮ ರಾಜನು ಶೀಲವಂತನೇ ಸರಿ ಎಂದರು. ಮಹಾಸ್ವಾಮೀ, ಅವರು ಹೇಳಿದುದಕ್ಕೆ ನೀವು ಒಪ್ಪಿಕೊಂಡಿರಿ ಎಂದು ತಿಳಿಸಲೋ ಎಂದು ಪಶುಪತಿಯು ಕೇಳಿದುದಕ್ಕೆ ವೀರಸಿಂಹನು ತಿಳಿಸು; ನಾಳೆ ಬೆಳಿಗ್ಗೆ ಸ್ವಲ್ಪ ಜಾಗ್ರತೆಯಾಗಿ ಎದ್ದು ಬಾ ಎಂದನು

ಪಶುಪತಿಯು ಹೊರಟು ಹೋದ ಮೇಲೆ ಗೆಳೆಯರಿಬ್ಬರೂ ಮಲಗಿದರು. ಉದಯಸಿಂಹನು ಯವನದೇಶದ ಯುವತಿಯನ್ನೇ ಧ್ಯಾನಿಸುತ್ತಿದ್ದನು, ವೀರಸಿಂಹನು ಈ ರಾಜಾಮಲಯಸಿಂಹನೇ ಮಲಯದ್ವೀಪದಲ್ಲಿ ತನ್ನ ಸಂಗಡ ಗುಹೆಯಲ್ಲಿದ್ದ ನಾವಿಕ ಸೈಂಧವನಾಗಿರಬೇಕೆಂತಲೂ, ಆ ರಹಸ್ಯವನ್ನು ಬೆಳಗಾಗುತಲೆ ಹೇಗಾದರೂ ತಿಳಿಯಬೇಕೆಂತಲೂ ಯೋಚಿಸುತ್ತಿದ್ದನು. ಅಂತು ಇಂತು ಇವರಿಬ್ಬರಿಗೂ ನಿದ್ದೆ ಬರಲಿಲ್ಲ. ಬೆಳಗಾಗುತಲೆ ಇಬ್ಬರೂ ಎದ್ದು ಒಳ್ಳೆಯ ಉಡುಪುಗಳನ್ನು ತೊಟ್ಟು ಪಶುಪತಿಯನ್ನು ಮುಂದಿಟ್ಟುಕೊಂಡು ರಾಜಾಮಲಯಸಿಂಹನ ಕೊಟ್ಟಡಿಗೆ ಹೋಗಿ ಸೇವಕನಿಗೆ ತಮ್ಮ ವಿಷಯವನ್ನು ಒಳಗೆ ತಿಳಿಸಹೇಳಲು, ಅವನು ಮಹಾಸ್ವಾಮೀ, ಸ್ವಲ್ಪ ಕುಳಿತುಕೊಳ್ಳಿರಿ; ನಾನು ರಾಜರಿಗೆ ತಮ್ಮ ಆಗಮನವನ್ನು ತಿಳಿಸುವೆನು ಎಂದು ಅವರುಗಳನ್ನು ಆಸನದಲ್ಲಿ ಕುಳ್ಳಿರಿಸಿ ತಾನು ಒಳಕ್ಕೆ ಹೋದನು.

ಆ ಕೊಟ್ಟಡಿಯು ಅಂದವನ್ನು ವರ್ಣಿಸಲು ಆರಿಗೆ ತಾನೇ ಸಾಧ್ಯ! ವಿಶೇಷಧನವೂ ಅಲಂಕಾರಾಭಿರುಚಿಯೂ ಇದ್ದರೆ ಎಷ್ಟು ಮಟ್ಟಿಗೆ ಅಲಂಕರಿಸಬಹುದೋ ಅಷ್ಟುಮಟ್ಟಿಗೆ ಅದು ಅಲಂಕೃತವಾಗಿದ್ದಿತು. ಅದರ ಸೋಪಸ್ಕರಗಳನ್ನೂ ರಚನೆಯ ರೀತಿಯನ್ನೂ ನೋಡಿ ಇಬ್ಬರೂ ಆನಂದಪರವಶರಾಗಿದ್ದಾಗ, ರಾಜಾಮಲಯಸಿಂಹನು ಒಳಗಣ ಬಾಗಿಲನ್ನು ತೆರೆದುಕೊಂಡು ಈ ಕೊಟ್ಟಡಿಗೆ ಬಂದು ಕೂಡಲೇ ಬಾಗಿಲನ್ನು ಮುಚ್ಚಿದನು. ಅಷ್ಟರಲ್ಲಿಯೇ ಒಳಗೆ ಹಾಡುತ್ತಲಿದ್ದ ಗಾನದ ಇಂಪು ಕೊಟ್ಟಡಿಯನ್ನೆಲ್ಲಾ ತುಂಬಿಕೊಂಡು ದೇವಲೋಕದ ಗಾನದ ಸೊಗಸೆಂಬ ಭ್ರಾಂತಿಯನ್ನು ಹುಟ್ಟಿಸಿತು.

ರಾಜಾಮಲಯಸಿಂಹನು ಆ ಕೊಟ್ಟಡಿಗೆ ಬಂದ ಒಡನೆಯೇ ಇವರ ಕುಶಲ ಪ್ರಶ್ನೆಯನ್ನು ಮಾಡಿ, ಸಮೀಪದಲ್ಲಿರುವ ದೊಡ್ಡಮನುಷ್ಯರ ಸ್ನೇಹವನ್ನು ಬೆಳೆಸಿ, ಅವರ

ಸೇವೆಯನ್ನು ಮಾಡಿ ಸಂತೋಷಪಡಿಸಬೇಕೆಂದು ನನಗೆ ಅವಾಗಲೂ ಬಲು ಆಸೆ; ಇದನ್ನು ಪಶುಪತಿಯು ಬಲ್ಲನು. ಆದರೂ ಆ ದಡ್ಡನು ನಿಮ್ಮ ಅನಾನುಕೂಲಗಳನ್ನು ನೆನ್ನೆಯ ರಾತ್ರಿಯ ವರೆಗೂ ನನಗೆ ಹೇಳಲೇ ಇಲ್ಲ. ಅದು ನನಗೆ ತಿಳಿದ ಕೂಡಲೆ ಅವನನ್ನು ನಿಮ್ಮ ಬಳಿಗೆ ಕಳುಹಿಸಿದೆನು ಎಂದನು. ಅದಕ್ಕೆ ವೀರಸಿಂಹನು ನಮಗಿದ್ದ ಕಷ್ಟವನ್ನು ನಿವೃತ್ತಿಮಾಡಿಕೊಟ್ಟುದಕ್ಕಾಗಿ ನಿಮಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ತೀರದು ಎಂದನು.

ಮಲಯಸಿಂಹನ ವಿಷಯದಲ್ಲಿ ತನಗಿದ್ದ ಅನುಮಾನವನ್ನು ಆಗಲೇ ಪ್ರಶ್ನೆಮಾಡಿ ಪರಿಹಾರಮಾಡಿಕೊಳ್ಳುವುದೋ ಅಥವಾ ಮುಂದೆ ಸಂಗತಿಗಳು ಹೇಗೆ ಬರುವುದೋ ನೋಡಿಕೊಂಡು ಕೇಳೋಣವೋ ಎಂದು ಯೋಚಿಸಿ, ಕೊನೆಗೆ ತನಗೂ ಅವನಿಗೂ ಹಿಂದೆ ಮಲಯದ್ವೀಪದಲ್ಲಿ ಉಂಟಾಗಿದ್ದ ಗುರುತು ಪರಿಚಯಗಳನ್ನು ಅವನು ಎಳ್ಳಷ್ಟಾದರೂ ಸೂಚಿಸದೆ ಇದ್ದುದರಿಂದಲೂ, ಆ ಕಾಲದಲ್ಲಿ ತಾನು ಹೆಸರನ್ನು ತಿಳಿಸಲು ಇಷ್ಟಪಡದಿದ್ದುದರಿಂದಲೂ, ಆ ಪರಿಚಯವನ್ನು ಈಗ ಸ್ಪಷ್ಟಪಡಿಸುವುದು ಅಲೌಕಿಕವೆಂದಿದ್ದನು. ಮೇಲೂ, ವೀರಸಿಂಹನಿಗೆ ಇವನೇ ಸೈಂಧವನು ಎಂಬಂಶವು ಸ್ಪಷ್ಟವಾಗಿದ್ದರೂ ಅವನನ್ನು ಪ್ರಶ್ನೆಮಾಡುವಷ್ಟು ದೃಢವಾಗಿ ತಿಳಿದಿರಲಿಲ್ಲ.

ಆದರೆ ಚಕ್ರಭೀಮನ ಕೋಟೆಯಲ್ಲಿ ಕೇಳಿದ ದನಿಯು ಇವನದೇ ಎಂದು ನಂಬುಗೆ ಇದ್ದುದರಿಂದ ರಾಜರೇ, ಈ ದಿನ ವಧ್ಯಸ್ಥಾನದಲ್ಲಿ ಎರಡು ವಧೆಗಳು ಆಗುವುವಲ್ಲವೆ ಎಂದು ಕೇಳಲು, ಅವನು ಅಹುದು, ಎಷ್ಟು ಹೊತ್ತಿಗಾಗುವುದೋ ನೆನಪಿಲ್ಲ, ವಿಚಾರಿಸೋಣ ಎಂದು ಮೇಜಿನ ಮೇಲೆ ಇದ್ದ ಗಂಟೆಯನ್ನು ತೆಗೆದು ಮೂರು ಸಾರಿ ಸದ್ದುಮಾಡಿ, ವೀರಸಿಂಹರೇ, ಸೇವಕರನ್ನು ಕರೆಯುವುದಕ್ಕೆ ನಾನೊಂದು ಏರ್ಪಾಟ ಮಾಡಿಕೊಂಡಿದ್ದೇನೆ; ಕೈಯಾಳನ್ನು ಕರೆಯಬೇಕಾದರೆ ಒಂದು ಸಾರಿಯೂ, ಪರಿಚಾರಕನನ್ನು ಕೂಗಬೇಕಾದರೆ ಎರಡು ಸಾರಿಯೂ, ಮನವಾರ್ತೆಯವನು ಬರಬೇಕಾದರೆ ಮೂರು ಸಾರಿಯೂ ಗಂಟೆ ಬಾರಿಸುತ್ತೇನೆ; ಇದರಿಂದ ಈ ಕೆಲಸವು ಸುಲಭವಾಗಿ ಹೋಗಿದೆ ಎಂದನು.

ಗಂಟೆಯ ಸದ್ದು ನಿಲ್ಲುವುದರೊಳಗಾಗಿಯೇ ಸುಮಾರು ನಲವತ್ತೈದು ವಯಸ್ಸುಳ್ಳವನೊಬ್ಬನು ಬಂದನು ಅವನನ್ನು ನೋಡುತಲೆ ವೀರಸಿಂಹನು ಇವನೀಗ ಘುಲ

ಯದ್ವೀಪದಲ್ಲಿ ತನ್ನನ್ನು ಕಣ್ಣುಕಟ್ಟಿ ಗುಹೆಯೊಳಗೆ ಕರೆದುಕೊಂಡು ಹೋದವನೆಂದು ತಿಳಿದುಕೊಂಡನು.

ಮಲಯಸಿಂಹನು ಮನವಾರ್ತೆಯವನನ್ನು ನೋಡಿ ಈ ದಿನ ಹನನಗಳು ಯಾವಾಗ ನಡೆಯುವುವು ಎಂದು ಕೇಳಿದುದಕ್ಕೆ ಮಹಾಸ್ವಾಮೀ, ಹತ್ತು ಗಂಟೆಗೆ ಎಂದನು.

ಈಗ ಎಂಟು ಗಂಟೆ; ಊಟವನ್ನು ತೀರಿಸಿಕೊಂಡು ಹೋಗಬಹುದು, ಅಡಿಗೆಯಾದ ಒಡನೆಯೇ ತಿಳಿಸು. ಈ ದೊಡ್ಡ ಮನುಷ್ಯರಿಬ್ಬರೂ ಇಲ್ಲಿಯೇ ಭೋಜನ ಮಾಡುವರು ಎಂದು ಹೇಳಿ ಅವರ ಮುಖಗಳನ್ನು ನೋಡಲು, ಅವರು ಆಗಬಹುದು ಎಂದರು.

ಅತಿಥಿಯನ್ನು ಸತ್ಕರಿಸುವುದು ಪ್ರತಿಯೊಬ್ಬ ಮನುಷ್ಯನಿಗೂ ಧರ್ಮ; ನೀವು ಭೋಜನಕ್ಕೆ ನಿಂತುದು ಸಂತೋಷ. ನಾನು ಅಮರಪುರಕ್ಕೆ ಬಂದಾಗ ನಿಮ್ಮ ಆತಿಥ್ಯವನ್ನು ಸ್ವೀಕರಿಸುವೆನು ಎಂದು ಹೇಳಿ, ಮನವಾರ್ತೆಯವನನ್ನು ನೋಡಿ ಭದ್ರಕ, ಅಡಿಗೆಯಾಗಿದ್ದರೆ ಮೂರು ಎಡೆಗಳನ್ನು ಸಿದ್ಧಪಡಿಸು, ಹೋಗು ಎಂದನು.

ಅಮರಪುರದ ಸ್ನೇಹಿತರಿಬ್ಬರೂ ಮಲಯಸಿಂಹನ ಜತೆಯಲ್ಲಿ ಮಾತನಾಡುತ್ತ ಭೋಜನವನ್ನು ತೀರಿಸಿಕೊಂಡು ಬಂಡಿಯಲ್ಲಿ ಕುಳಿತು ಹೊರಡುವ ವೇಳೆಗೆ ಸರಿಯಾಗಿ ಮಲಯಸಿಂಹನು ಬಂದು ಒಂದು ಕ್ಷಣ ನಾವಕಾಶವಾಗಬಹುದಾದರೆ ನಾನೂ ಜತೆಯಲ್ಲಿ ಬರುವೆನು ಎಂದು ಒಳಗೆ ಹೋದನು.

ಆಗ ವೀರಸಿಂಹನು ಉದಯಸಿಂಹನನ್ನು ನೋಡಿ ಈ ಮಲಯಸಿಂಹನ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ಎಂದುದಕ್ಕೆ, ಅವನು ಇವನ ವಿವೇಕ, ನಡತೆ, ಬುದ್ಧಿಗಳನ್ನು ನೋಡಿದರೆ ಇವನೊಬ್ಬ ದೊಡ್ಡ ಮನುಷ್ಯನೆಂದು ತೋರುತ್ತಲಿದೆ ಎಂದನು

ನೀನು ಒಂದು ಸ್ವಾರಸ್ಯವನ್ನು ನೋಡಿದೆಯೋ? ಅದೇನು?

ಅವನು ನಿನ್ನನ್ನು ಬಲವಾಗಿ ದೃಷ್ಟಿಸಿ ನೋಡಿದನು.

ನನ್ನನ್ನೇ? ಅಹುದು.

ನಾನು ಊರನ್ನು ಬಿಟ್ಟು ಬಂದು ವರ್ಷವಾಯಿತು; ಪ್ರಯಾಣದ ಶ್ರಮದಿಂದ ಮುಖವು ಬಾಡಿರಬಹುದು; ಉಡುಪುಗಳು ಹಳದಾಗಿರಬಹುದು; ಆದುದರಿಂದ ಅವನು

ನನ್ನನ್ನು ಹಳ್ಳಿಯವನೆಂದು ತಿಳಿದು ಹಾಗೆ ನೋಡಿರಬಹುದು. ಸಮಯ ಬಂದಾಗ ನಾನಿಂಥವನೆಂದು ಅವನಿಗೆ ಹೇಳು

ಇಷ್ಟರಲ್ಲಿಯೇ ಮಲಯಸಿಂಹನು ಬಂದನು ಎಲ್ಲರೂ ಗಾಡಿಯಲ್ಲಿ ಕುಳಿತು ಕಲ್ಯಾಣೀ ಚೌಕದ ಸಮೀಪಕ್ಕೆ ಹೋಗಲು ಆ ಚೌಕದಲ್ಲಿ ಹಾಕಿದ್ದ ಗಲ್ಲಿನ ಮರವನ್ನೂ, ಅದರ ಮೇಲೆ ಕಟುಕರಿಬ್ಬರು ಕುಳಿತು ಸಂತೋಷವಾಗಿರುವುದನ್ನೂ, ಕೆಳಗೆ ಬಿಚ್ಚುಕತ್ತಿ ಸಿಪಾಯಿಗಳು ನೂರಾರು ಜನ ನಿಂತಿರುವುದನ್ನೂ ಕಂಡು, ವೀರಸಿಂಹನಿಗೆ ಮೈಯ್ಯು ಬೆವರಿತು. ಬಂಡಿಯು ಹೋಗಿ ಮಾಳಿಗೆಯ ಮುಂದೆ ನಿಂತಿತು. ವೀರಸಿಂಹನು ಇದೇ ನಿಮ್ಮ ಮಾಳಿಗೆಯೋ ಎಂದು ಕೇಳಲು, ಮಲಯಸಿಂಹನು ಅಹುದೆಂದನು. ಮಾಳಿಗೆಯ ಕಿಟಿಕಿಗಳಿಗೆ ಹಾಕಿದ್ದ ಕೆಂಪು ಹಸುರು ಬಟ್ಟೆಗಳನ್ನು ನೋಡಿ ವೀರಸಿಂಹನಿಗೆ ಚಕ್ರ ಭೀಮನ ಕೋಟೆಯಲ್ಲಿ ಮಾಡಿಕೊಂಡಿದ್ದ ಸಂಕೇತವು ಜ್ಞಾಪಕಕ್ಕೆ ಬಂದು ರಾಜಾ ಮಲಯಸಿಂಹನೇ ಅಲ್ಲಿ ಬಂಪನ ಸಂಗಡ ಮಾತನಾಡುತ್ತಿದ್ದವನು ಎಂದು ನಿರ್ಧರ ಮಾಡಿಕೊಂಡನು

ಎಲ್ಲರೂ ಮಾಳಿಗೆಯಲ್ಲಿ ಕುಳಿತ ಮೇಲೆ ವಧಾರ್ಹರಾದ ಇಬ್ಬರು ಅಪರಾಧಿಗಳನ್ನು ತೂಗುಮರದ ಸಮೀಪಕ್ಕೆ ಕರೆತಂದರು ಜನಗಳೆಲ್ಲಾ ಎಷ್ಟು ಹೊತ್ತಿಗೆ ಈ ವಧೆಗಳು ನಡೆಯುವುವು ಎಂದು ಕುತೂಹಲದಿಂದ ನೋಡುತ್ತಲಿರುವ ವೇಳೆಗೆ ಅವನೋ ಒಬ್ಬ ಅಧಿಕಾರಿಯು ಕುದುರೆಯನ್ನು ಬಹು ವೇಗವಾಗಿ ಓಡಿಸಿಕೊಂಡು ಬಂದು ಅಪರಾಧಿಗಳಿದ್ದೆಡೆಗೆ ಹೋಗಿ ಈ ಇಬ್ಬರಲ್ಲಿ ಪ್ರತಿರೋಧಿಯೆಂಬವನಾರು ಎಂದು ಕೇಳಲು ಸಿಪಾಯಿಗಳ ಯಜಮಾನನು ಇವನು, ಎಂದು ಪ್ರತಿರೋಧಿಯನ್ನು ತೋರಿಸಿದನು.

ಇವನನ್ನು ಮನ್ನಿಸಿ ಬಿಟ್ಟುಬಿಡುವಂತೆ ಮಹಾರಾಜರ ಅಪ್ಪಣೆಯಾಗಿರುವುದು ಎಂದು ಹೇಳಿದ ಕೂಡಲೆ ಪ್ರತಿರೋಧಿಯ ಕೈ ಕಟ್ಟನ್ನು ಬಿಚ್ಚಿ ಬಿಟ್ಟುಬಿಟ್ಟರು. ಆಗ ಬಂದಿದ್ದವರು ಒಂದು ಜೀವವು ಉಳಿಯಿತಲ್ಲಾ ಎಂದು ಸಂತೋಷಪಟ್ಟು ರಾಜನನ್ನು ಸ್ತೋತ್ರಮಾಡಿದರು.

ಅರಸು ಪ್ರತಿರೋಧಿಯನ್ನು ಮನ್ನಿಸಿ ಬಿಟ್ಟುದು ಮತ್ತೊಬ್ಬ ಪಾಪಿಗೆ ಸಹಿಸಲಿಲ್ಲ. ಆವನನ್ನು ಬಿಡುವುದೇಕೆ, ನನ್ನನ್ನು ಕೊಲ್ಲುವುದೇಕೆ, ನಾನೊಬ್ಬನೇ ಸಾಯಲಾರೆ;

ಅವನನ್ನು ಮೊದಲು ಕೊಂದು, ಆಮೇಲೆ ನನ್ನನ್ನು ಕೊಲ್ಲಿರಿ ಎಂದು ಕೈಕಾಲುಗಳನ್ನು ಒದರುತ್ತ ಬಲು ರಗಳೆಮಾಡಿದನು.

ವೀರಸಿಂಹನು ಈ ಅವಸ್ಥೆಯನ್ನು ನೋಡಲಾರದೆ ಅತ್ತಕಡೆ ತಿರುಗಿಕೊಂಡನು, ಆಗ ಚೌಕದಲ್ಲಿ ವಿಶೇಷ ಗಲಭೆಯಾದುದರಿಂದ ಮಲಯಸಿಂಹನನ್ನು ನೋಡಿ ಅದೇನು ಗಲಭೆ, ಎಂದು ಕೇಳಲು, ತನ್ನ ಜತೆಯವನಿಗೆ ಬಿಡುಗಡೆಯಾಯಿತಲ್ಲಾ ಎಂದು ಸಂತೋಷಪಡುವುದಕ್ಕೆ ಒದಲಾಗಿ ಅವನನ್ನೂ ಕೊಂದರೆ ತಾನು ನೆಮ್ಮದಿಯಿಂದ ಸಾಯುವುದಾಗಿ ಹೇಳಿಕೊಂಡು ಆ ಪಾಪಿ ಸನ್ಯಾಸಿಯು ಒದ್ದಾಡಿ ತಪ್ಪಿಸಿಕೊಂಡು ಹೋಗಲು ಪ್ರಯತ್ನಪಡುತ್ತಲಿದ್ದಾನೆ. ಅಹಾ! ಮನುಷ್ಯರ ಸ್ವಭಾವವು ಎಂತಹುದು? ಉತ್ತರ ಕ್ಷಣದಲ್ಲಿ ತಮಗುಂಟಾಗುವ ಕಷ್ಟವನ್ನು ತಿಳಿಯದೆ ಇತರರ ಒಳ್ಳೆಯ ಸ್ಥಿತಿಯನ್ನು ನೋಡಿ ಕರುಬುತ್ತ ಅವರಿಗೆ ಹಿಂಸೆಯನ್ನುಂಟುಮಾಡುವರು. ದೇವರುಂಟೆಂದೂ ಶಾಸ್ತ್ರಗಳೆಲ್ಲವೂ ನಿಶ್ಚಯವೆಂದೂ ತಿಳಿದು, ಮುಂದೆ ನರಕಪ್ರಾಪ್ತಿಯಾಗುವುದನ್ನೂ ಲೆಕ್ಕಿಸದೆ ತಮ್ಮ ಅಸೂಯೆಯನ್ನು ತೋರಿಸಿ ತೃಪ್ತಿಪಡುವುದೇ ಸಕಲವೂ ಎಂದಿರುವವರನ್ನು ಏನೆಂದು ಹೇಳೋಣ ಎಂದನು.

ಆ ಪಾಪಿಯು ಒದ್ದಾಟ ಹೆಚ್ಚಾದಷ್ಟೂ ಜನರ ಕೂಗಾಟವೂ ಹೆಚ್ಚಿತು. ಅವನನ್ನು ಛಿನ್ನಭಿನ್ನಮಾಡಿರಿ, ಸುಣ್ಣದ ಗೂಡಿನಲ್ಲಿ ಸುಡಿಸಿರಿ, ಶೂಲಕ್ಕೆ ಏರಿಸಿರಿ ಎಂದು ನಾನಾರು ಜನಗಳು ಕೂಗಿಕೊಂಡರು. ಅಷ್ಟು ಹೊತ್ತಿಗೆ ಅವನನ್ನು ತೂಗುಮರದ ಮೇಲೆ ನಿಲ್ಲಿಸುವುದಕ್ಕೆ ಕಟುಕರು ಅಣಿಯಾದರು ಇದನ್ನು ನೋಡಿ ವೀರಸಿಂಹನೂ ಉದಯಸಿಂಹನೂ ಮೂರ್ಛಿತರಾದರು. ಅವರಿಗೆ ಪ್ರಜ್ಞೆಬಂದಾಗ ಕೊಲೆಯು ಮುಗಿದು ಚೌಕದಲ್ಲಿದ್ದ ಗಲ್ಲಿನ ಮರವೂ ಶೂಲವೂ ಕೀಳಲ್ಪಟ್ಟು ಉತ್ಸವಕ್ಕೆ ಆರಂಭವಾಗಿದ್ದಿತು.

ಆಗ ವೀರಸಿಂಹನು ಮಲಯಸಿಂಹನನ್ನು ನೋಡಿ ಸ್ವಾಮೀ ರಾಜನೇ, ಆ ಭಯಂಕರವಾದ ನೋಟವು ನನಗೆ ಸ್ವಪ್ನದಂತಾಯಿತು ಆ ಪಾಪಿಯು ಏನಾದನು ಎಂದು ಕೇಳಿದನು.

ಆ ಪಾಪಿಗೂ ಸ್ವಪ್ನವೇ, ಎಂದರೆ ನೀವು ಎಚ್ಚತ್ತಿರಿ, ಅವನು ಎಚ್ಚರುವುದಿಲ್ಲ; ಇದೇ ವ್ಯತ್ಯಾಸ

ಇದನ್ನು ನೋಡಿದ ಮೇಲೆ ಉತ್ಸವದ ಕೂಟದಲ್ಲಿ ಸೇರಲು ನನಗೆ ಇಷ್ಟವಿಲ್ಲ.

ಅದೇನು ? ಇಂತಹ ನೋಟಗಳನ್ನು ನೋಡಿದ ಹೊರತು ಮನಸ್ಸು ಗಟ್ಟಿಯಾಗ ಲಾರದು. ಏಳಿರಿ ; ಸಿದ್ಧಪಡಿಸಿರುವ ಉಡುಪುಗಳನ್ನು ತೊಟ್ಟು ನಾವು ಈ ಉತ್ಸವದ ಸಂಭ್ರಮವನ್ನು ಅನುಭವಿಸೋಣ ಎಂದು ಮಲಯಸಿಂಹನು ವೇಷವನ್ನು ಮರೆಸಿ ಕೊಳಲು ಹೊರಟನು. ವೀರಸಿಂಹ ಉದಯಸಿಂಹರೂ ಎದ್ದು ವೇಷಗಳನ್ನು ಮಾರ್ಪ ಡಿಸಿಕೊಂಡು ಕೆಳಗೆ ಇಳಿದು ಬಂಡಿಗೆ ಬಂದರು ಒಂದು ಬುಟ್ಟಿಯ ತುಂಬ ಹೂವು ಗಳೂ ಮತ್ತೊಂದು ಬುಟ್ಟಿಯ ತುಂಬ ಮಿರಾಯಿಗಳೂ ಅದರಲ್ಲಿ ಇಟ್ಟಿದ್ದಿತು.

ಉತ್ಸವಕ್ಕೆ ಲಕ್ಷೋಪಲಕ್ಷ ಜನಗಳು ಸೇರಿದ್ದರೂ ಸ್ವಲ್ಪ ಹೆಚ್ಚು ಕಡಮೆ ಎಲ್ಲರೂ ಸಂಭ್ರಮವನ್ನು ನೋಡುವುದಕ್ಕೂ ಮನಬಂದಂತೆ ವಿಹರಿಸುವುದಕ್ಕೂ ಬರುವವರೇ ಹೊರತು, ದೇವಾಲಯಕ್ಕೆ ಹೋಗಿ ಭಕ್ತಿವಿಶ್ವಾಸಗಳಿಂದ ದೇವರ ಸೇವೆಯನ್ನು ಮಾಡು ವುದಕ್ಕೆ ಬರುವವರು ಬಹು ವಿರಳ.

ಒಂದು ದೊಡ್ಡ ಬಯಲೂ ಅದರ ಸುತ್ತಲೂ ಅನೇಕ ಅಂತಸ್ತಿನ ಮನೆಗಳೂ, ಪ್ರತಿಯೊಂದು ಮಹಡಿಗೂ ಕೈಸಾಲೆಗಳೂ, ಆ ಕೈಸಾಲೆಗಳ ತುಂಬ ದೊಡ್ಡಮನುಷ್ಯರ ಮನೆಯ ಹೆಂಗುಸರೂ ಮಕ್ಕಳೂ; ಪ್ರತಿಯೊಬ್ಬ ಹೆಂಗುಸಿನ ಪಕ್ಕದಲ್ಲಿಯೂ ಒಂದೊಂದು ಹೂವಿನ ಬುಟ್ಟಿಯೂ ಮಿರಾಯಿ ಬುಟ್ಟಿಯೂ, ಆ ಹೆಂಗುಸರು ಕೆಳಗೆ ಬೀದಿಯಲ್ಲಿ ಹೋ ಗುತ್ತಲಿರುವವರಲ್ಲಿ ತಮ್ಮ ಅಭಿಮಾನಕ್ಕೆ ಪಾತ್ರರಾದವರ ಮೇಲೆ ಹೂವುಗಳನ್ನೂ ಮಿರಾಯಿಗಳನ್ನೂ ಎರಚುತ್ತಲಿರುವುದೂ, ಅವರು ತಮ್ಮ ಪ್ರೀತಿಯನ್ನು ತೋರಿಸಲು ಮೇಲೆ ಇರುವವರ ಮೇಲೆ ಅವುಗಳನ್ನು ಮರಳಿ ಎರಚುವುದೂ; ಕೆಳಗೆ ಬೀದಿಗಳಲ್ಲಿ ವಿಧವಿಧವಾದ ಉಡುಪುಗಳನ್ನು ತೊಟ್ಟು ವೇಷಗಳನ್ನು ಹಾಕಿಕೊಂಡು ಓಡಾಡುತ್ತ ಲಿರುವುದೂ, ಜನಭರಿತವಾದ ಬಂಡಿಗಳು ಹೋಗುತ್ತ ಬರುತ್ತಲಿರುವುದೂ; ಅಲ್ಲಲ್ಲಿ ಆಟ ಪಾಟಗಳೂ; ಸಂಗೀತಗಳೂ ನೃತ್ಯಗಳೂ; ನಡೆಯುತ್ತಲಿರುವುದೂ ; ಕಪಿಗಳಂತೆಯೂ, ಹುಲಿಗಳಂತೆಯೂ ಕೋಣಗಳೇ ಮೊದಲಾದ ಮೃಗಗಳಂತೆಯೂ ವೇಷಗಳನ್ನು ಧರಿಸಿ ಆಯಾಯ ಮೃಗಗಳಂತೆ ಕುಣಿದಾಡುತ್ತ ಕೂಗುತ್ತಲಿರುವುದೂ ; ಮಧ್ಯೆ ಮಧ್ಯೆ ಸುಂದ ರಿಯರಾದ ಹೆಂಗುಸರು ಮೇಘವು ತೊಲಗಿದೊಡನೆಯೇ ಚಂದ್ರನು ಕಳಕಳಿಸಿ ತೋರು ವಂತೆ ಅವಕುಂಠನದಿಂದ ಮುಚ್ಚಿದ್ದ ವದನಗಳನ್ನು ತಮ್ಮಲ್ಲಿ ಅಭಿಮಾನವುಂಟಾದವರಿಗೆ ಸಲ್ಪ ಸ್ವಲ್ಪ ತೆರೆದು ತೋರಿಸುತ್ತಲಿರುವುದೂ ; ಇವುಗಳನ್ನು ನಮ್ಮ ವಾಚಕರು ಊಹಿಸಿ

ಕೊಂಡರೆ ಇಂದ್ರಪ್ರಸ್ಥದಲ್ಲಿ ಆಗ ನಡೆಯುತ್ತಲಿದ್ದ ಉತ್ಸವವು ಸ್ವಲ್ಪ ಮಟ್ಟಿಗಾದರೂ ಅವರ ಮನಸ್ಸಿಗೆ ಗೋಚರವಾಗದಿರದು.

ಈ ಓಡಾಟಗಳಲ್ಲಿ ಸ್ಫುರದ್ರೂಪಿಯರಾದ ಗ್ರಾಮಯುವತಿಯರಂತೆ ತೋರುತ್ತಲಿದ್ದ ನಾಲ್ಕುಮಂದಿ ಕುಳಿತಿದ್ದ ಬಂಡಿಯೂ ನಮ್ಮ ಉದಯಸಿಂಹನ ಬಂಡಿಯೂ ಅನೇಕಾವೃತ್ತಿ ಸಂಧಿಸಲು, ಉದಯಸಿಂಹನು ಆ ನಾಲ್ವರಲ್ಲಿ ತಾನು ಮೆಚ್ಚಿದ ತರುಣಿಯ ಮೇಲೆ ಮಲ್ಲಿಗೆ ಹೂವಿನ ಚೆಂಡನ್ನು ಎಸೆದನು. ಮರಳಿ ಇವರ ಬಂಡಿಗಳು ಸೇರಿದಾಗ ಅವಳು ಒಂದು ಗುಲಾಬಿಯ ಹೂವನ್ನು ಉದಯಸಿಂಹನ ಮೇಲೆ ಎಸೆದಳು. ಇದರಿಂದ ತಾನು ಅವಳಲ್ಲಿ ಮೋಹಗೊಂಡಿದ್ದಂತೆ ಅವಳೂ ತನ್ನಲ್ಲಿ ಮೋಹಗೊಂಡಿರುವಳೆಂದು ತಿಳಿದು, ಮತ್ತೊಂದು ಸಾರಿ ಬಂಡಿಯು ಬರುವುದನ್ನೇ ನೋಡುತ್ತಲಿದ್ದನು. ಇಷ್ಟರಲ್ಲಿಯೇ ಸಾಯಂಕಾಲವಾಯಿತು.

ಮಾರನೆಯ ದಿನವೆಲ್ಲಾ ಎಷ್ಟೆಷ್ಟು ತಿರುಗಿದರೂ ಉದಯಸಿಂಹನಿಗೆ ಆ ತರುಣಿಯರು ಸಿಕ್ಕಲಿಲ್ಲ, ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲಾ ಎಂದು ಅವನು ಖಿನ್ನನಾಗಿ ಬಿಡಾರಕ್ಕೆ ಬಂದು ಸೇರಿದನು. ಆ ರಾತ್ರಿ ನಿದ್ರೆಯೇ ಬರಲಿಲ್ಲ. ಬೆಳಿಗ್ಗೆ ಎದ್ದು ತಾನೂ ಹಳ್ಳಿಯವನಂತೆ ವೇಷವನ್ನು ಹಾಕಿಕೊಂಡು ವೀರಸಿಂಹನನ್ನೂ ಕರೆಯಲು, ಅವನು ನಿನ್ನೊಡನೆ ನಾನು ಬರುವುದಕ್ಕಾಗುವುದಿಲ್ಲ, ದೇವಾಲಯಕ್ಕೆ ಹೋಗಿ ದೇವರ ದರ್ಶನವನ್ನು ಮಾಡಬೇಕೆಂದು ಇದ್ದೇನೆ, ನೀನೇ ಹೋಗು ಎಂದು ಹೇಳಿಬಿಟ್ಟನು.

ಉದಯಸಿಂಹನಿಗೂ ಇದೇ ಬೇಕಾಗಿದ್ದುದರಿಂದ ತಾನೊಬ್ಬನೇ ಬಂಡಿಯಲ್ಲಿ ಕುಳಿತು, ಹಳ್ಳಿಯ ತರುಣಿಯು ತನಗೆ ಕೊಟ್ಟಿದ್ದ ಗುಲಾಬಿ ಹೂವನ್ನು ಕಯ್ಯಲ್ಲಿ ಹಿಡಿದು ಹೊರಟನು. ಚೌಕದಲ್ಲಿ ಎರಡು ಮೂರು ಸುತ್ತು ಬರುವುದರೊಳಗಾಗಿಯೇ ಆ ಹೆಂಗುಸರಿದ್ದ ಬಂಡಿಯು ಸಿಕ್ಕಿ ತನ್ನ ಮೇಲೆ ಗುಲಾಬಿಹೂವನ್ನು ಎಸೆದ ಹೆಂಗುಸು ಮೋರೆಗೆ ಮುಚ್ಚಿದ್ದ ಅವಕುಂಠನವನ್ನು ಸ್ವಲ್ಪ ಓರೆಮಾಡಿ ಮುಖವನ್ನು ತೋರಿಸಿ ಮುಂದೆ ಹೊರಟು ಹೋದಳು. ಅವಳ ಮುಖವನ್ನು ನೋಡಿದ ಮಾತ್ರದಿಂದಲೇ ಉದಯಸಿಂಹನು ಮರುಳಾಗಿ ಮತ್ತೊಂದ ಸಾರಿ ಬಂಡಿಯು ಸಂಧಿಸುವುದರೊಳಗಾಗಿ 'ನನ್ನ ಪ್ರಾಣವು ನಿನ್ನಲ್ಲಿದೆ ನಿನ್ನ ದರ್ಶನಸುಖವನ್ನು ಕೊಟ್ಟು ಕಾಪಿಡು' ಎಂದು ಒಂದು ಪತ್ರವನ್ನು ಬರೆದು ಅದನ್ನು ಹೂವಿನ ಚೆಂಡಿನಲ್ಲಿಟ್ಟುಕೊಂಡು ಬಂಡಿಯು ಪುನಃ ಸಂಧಿಸಿದಾಗ ಅದನ್ನು

ಅವಳ ಮೇಲೆ ಬಿಸುಟನು. ಮತ್ತೊಂದು ಸಾರಿ ಅವಳನ್ನು ನೋಡಿದಾಗ ಆ ಯುವತಿಯು ಅದೇ ಚೆಂಡನ್ನು ಇವನ ಮೇಲೆ ಹಾಕಿದಳು. ಉದಯಸಿಂಹನು ಅದನ್ನು ಬಿಚ್ಚಿ ನೋಡಲು 'ಈ ದಿನ ಸಾಯಂಕಾಲ ಎಂಟು ಗಂಟೆಗೆ ಸರಿಯಾಗಿ ಚಕ್ರಭೀಮನ ಕೋಟೆಯ ಎಡಗಡೆಯಲ್ಲಿರುವ ಆಲದ ಮರದ ಕೆಳಗೆ ನಾನು ಕೊಟ್ಟ ಗುಲಾಬೀ ಹೂವನ್ನು ಕಯ್ಯಲ್ಲಿ ಹಿಡಿದು ನಿಂತಿದ್ದರೆ, ನಾನು ಬಂದು ನಿನ್ನನ್ನು ಸೇರುವೆನು' ಎಂದು ಬರೆದಿದ್ದ ಕಾಗದವನ್ನು ಓದಿ ನೋಡಿ, ಇಂದು ನನ್ನ ಕೆಲಸವು ಕೈಗೂಡಿತು ಎಂದು ಸಂತೋಷಪಟ್ಟು ತನ್ನ ಬಿಡಾರವನ್ನು ಸೇರಿ, ಎಷ್ಟು ಹೊತ್ತಿಗೆ ಸಾಯಂಕಾಲವಾದೀತು, ಎಷ್ಟು ಹೊತ್ತಿಗೆ ನಾನು ಅವಳನ್ನು ನೋಡೇನು, ಎಂದು ಬಹಳ ಆತುರಪಡುತ್ತಿದ್ದನು.

---

## ಇಪ್ಪತ್ತಾರನೆಯ ಅಧ್ಯಾಯ

### ಕಳ್ಳರ ಗುಂಪು

ಉದಯಸಿಂಹನು ಬಿಡಾರಕ್ಕೆ ಬಂದ ತರುವಾಯ ಹೂವಿನ ಚೆಂಡಿನಲ್ಲಿದ್ದ ಕಾಗದವನ್ನು ವೀರಸಿಂಹನಿಗೆ ತೋರಿಸಲು, ಅವನು ಅದನ್ನು ಓದಿ ನೋಡಿ ನೀನು ಅದೃಷ್ಟಶಾಲಿಯೇ ಸರಿ, ಆದರೂ ಮೆಯ್ಯುಮರೆತಿರಬೇಡ ಎಂದನು. ಅದಕ್ಕೆ ಉದಯಸಿಂಹನು ಅವಳು ಹಳ್ಳಿಯವಳಂತೆ ಇದ್ದರೂ ದೊಡ್ಡವರ ಮನೆಯವಳಂತೆ ಕಾಣುತ್ತಾಳೆ, ಆದುದರಿಂದ ಆವ ಭಯಕ್ಕೂ ಕಾರಣವಿಲ್ಲ. ಅವಳು ರೂಪವತಿಯಾಗಿರುವಷ್ಟು ಗುಣವತಿಯಾಗಿದ್ದಲ್ಲಿ ನಾನು ಇನ್ನೂ ಕೆಲವು ದಿವಸಗಳು ಇಲ್ಲಿಯೇ ಇರಬೇಕಾಗುವುದು ಎಂದನು.

ಧನಾಗಾರಪತಿಯಾದ ಅಮರನಾಥನು ತನ್ನ ಮನೆಯಲ್ಲಿ ಈ ದಿನವಾಗುವ ಹರಿಕಥೆಗೆ ನಮ್ಮಿಬ್ಬರನ್ನೂ ಕರೆದಿರುತ್ತಾನೆ; ಅಲ್ಲಿಗೆ ನೀನು ಬರುತ್ತೀಯೊ ?

ಕಥೆಯು ಎಷ್ಟು ಹೊತ್ತಿಗೆ ಪ್ರಾರಂಭವಾಗುತ್ತದೆ ?

ಒಂಭತ್ತು ಗಂಟೆಗೆ.

ಹಾಗಾದರೆ ನಾನು ಬರುವುದು ಅನುಮಾನ, ಚಕ್ರಭೀಮನ ಕೋಟೆಯ ಬಳಿ ಹೋದ ಮೇಲೆ ಅಲ್ಲಿಯ ಸಂದರ್ಭವು ಹೇಗಿರುವುದೋ ? ನಾನು ಬರಲು ಅನುಕೂಲಿಸಲಿಲ್ಲವೆಂದು ಅಮರನಾಥನಿಗೆ ಹೇಳಿಬಿಡು.

ಪಶುಪತಿಯು ಅಡಿಗೆಯಾಗಿರುವುದೆಂದು ಈಗ ತಾನೆ ಹೇಳಿಹೋದನು. ಊಟವನ್ನು ಮಾಡಿಕೊಂಡು ಇಬ್ಬರೂ ಹೊರಡೋಣ, ಏಳು. ನಿನ್ನನ್ನು ನಾನು ಸಂಕೇತಸ್ಥಾನದಲ್ಲಿ ಬಿಟ್ಟು ಗಂಗಾಬಾಯಿಯನ್ನು ನೋಡಿಕೊಂಡು ಅಮರನಾಥನ ಮನೆಗೆ ಹೋಗುವೆನು.

ಹಾಗೆಯೇ ಆಗಲಿ ಎಂದು ಉದಯಸಿಂಹನು ಒಪ್ಪಿಕೊಳ್ಳಲು, ಇಬ್ಬರೂ ಭೋಜನವನ್ನು ತೀರಿಸಿಕೊಂಡು ಉಡುಪುಗಳನ್ನು ತೊಟ್ಟು ಬಂಡಿಯಲ್ಲಿ ಕುಳಿತುಕೊಳ್ಳುವ ವೇಳೆಗೆ ಸರಿಯಾಗಿ ಮಲಯಸಿಂಹನ ಆಳು ವೀರಸಿಂಹನ ಕೈಯಲ್ಲಿ ಒಂದು ಚೀಟನ್ನು ತಂದುಕೊಟ್ಟನು. ಅವನು ಅದನ್ನು ಓದಿ ನೋಡಿ ಏನಪ್ಪಾ ಉದಯ, ಮಲಯಸಿಂಹನು ಇಂದು ನಾಟಕಕ್ಕೆ ಹೋಗುವುದಿಲ್ಲವಂತೆ; ಬೇಕಾದರೆ ಅವನ ಸ್ಥಾನದಲ್ಲಿ ನಾವು ಕುಳಿತುಕೊಳ್ಳಬಹುದು ಎಂದು ಬರೆದಿದ್ದಾನೆ ಎಂದನು.

ಈ ದಿನ ನಮ್ಮಿಬ್ಬರಿಗೂ ಬೇರೆ ಕೆಲಸವಿರುವುದರಿಂದ ನಾಟಕಕ್ಕೆ ಹೋಗುವುದಿಲ್ಲವೆಂದು ರಾಜರಿಗೆ ತಿಳಿಸು ಎಂದು ಉದಯಸಿಂಹನು ಹೇಳಿ ಕಳುಹಿಸಿ ಬಂಡಿಯನ್ನು ಬಿಡ ಹೇಳಿದನು.

ಬಂಡಿಯು ಜಾಗ್ರತೆಯಾಗಿಯೇ ಚಕ್ರಭೀಮನ ಕೋಟೆಯ ಬಳಿಗೆ ಬಂದಿತು ಜನರ ಗುಂಪು ವಿಶೇಷವಾಗಿದ್ದುದರಿಂದ ಸ್ವಲ್ಪದೂರದಲ್ಲಿಯೇ ಇಬ್ಬರೂ ಬಂಡಿಯಿಂದಿಳಿದು ಸುತ್ತುಮುತ್ತ ನೋಡಿ, ಉದಯಸಿಂಹನ ವ್ಯಕ್ತಿಯನ್ನು ಕಾಣದೆ ಸಂಕೇತಸ್ಥಾನದಲ್ಲಿ ಹೋಗಿ ನಿಂತರು. ಆಗ ವೀರಸಿಂಹನು ಅಪ್ಪಾ ಉದಯ, ಇನ್ನು ನಾನು ನಿನ್ನ ಜತೆಯಲ್ಲಿರುವುದು ಸರಿಯಲ್ಲ; ದೂರದಲ್ಲಿದ್ದು ನೀನೂ ನಿನ್ನ ಪ್ರಿಯಳೂ ಸೇರುವುದನ್ನು ನೋಡಿ ಹೊರಡುವೆನು ಎಂದನು.

ಉದಯಸಿಂಹನು ವೀರಸಿಂಹನ ನಡೆನುಡಿಗಳಿಗೆ ಸಂತೋಷಪಟ್ಟನು ಸುಮಾರು ಅರ್ಧಗಂಟೆಯ ವರೆಗೆ ಉದಯಸಿಂಹನು ತನ್ನ ಪ್ರಿಯೆಯನ್ನು ಕಾಣದೆ ಅಲೆದಾಡಿ ಸುತ್ತಲೂ ನೋಡಿ ಬೇಸತ್ತು ಅವಳು ಸುಳ್ಳ ಹೇಳಿರಬಹುದು ಎಂದು ಯೋಚಿಸುವಷ್ಟರಲ್ಲಿ, ಅಲ್ಲಿಗೆ ಒಂದು ಬಂಡಿಯು ಬಂದು ನಿಂತು ಅದರಿಂದ ಒಬ್ಬ ಹೆಂಗುಸು ಇಳಿದು ಉದಯಸಿಂಹನನ್ನು ತನ್ನ ಬಂಡಿಯಲ್ಲಿ ಕುಳ್ಳಿರಿಸಿಕೊಂಡು ಹೋದಳು.

ಇದನ್ನು ದೂರದಿಂದ ನೋಡುತ್ತಲಿದ್ದ ವೀರಸಿಂಹನು ತನ್ನ ಬಂಡಿಯನ್ನು ಹತ್ತಿ

ಗಂಗಾಬಾಯಿಯು ಮನೆಗೆ ಹೋಗಿ ಅಲ್ಲಿ ಸುಮಾರು ಒಂದು ಗಂಟೆಯು ಕಾಲ ಮಾತು ಕಥೆಗಳನ್ನಾಡುತ್ತಿದ್ದು, ಅವಳೊಡನೆ ಅಮರನಾಥನ ಮನೆಗೆ ಹೋದನು ಆ ವೇಳೆಗೆ ಹರಿಕಥೆಯು ಪ್ರಾರಂಭವಾಗಿದ್ದಿತು. ಇವರು ಬಂದುದನ್ನು ಕಂಡು ಮನೆಯ ಯಜಮಾನನು ದಿಗ್ಗನೆ ಎದ್ದು ಮರ್ಯಾದೆಯಿಂದ ಇಬ್ಬರನ್ನೂ ಉಚಿತಸ್ಥಾನದಲ್ಲಿ ಕುಳ್ಳಿರಿಸಿದನು ಶ್ರೀರಾಮಚಂದ್ರನು ವಿಭೀಷಣನಿಗೆ ಅಭಯಪ್ರದಾನವನ್ನು ಮಾಡಿದ ಕಥೆಯು ನಡೆಯುತ್ತಲಿದ್ದಿತು. ಕೃಪಾವಿಶಿಷ್ಟನಾದ ಭಗವಂತನ ಮಹಿಮೆಯನ್ನು ದಾಸರು ಹೃದಯಂಗಮವಾಗಿ ವರ್ಣಿಸುತ್ತಲಿದ್ದಾಗ ನೆಟ್ಟ ಕಣ್ಣು ಬಿಟ್ಟ ಬಾಯಾಗಿ ಜನರು ಕೇಳುತ್ತಲಿದ್ದರು. ಕಥೆಯು ಹನ್ನೆರಡು ಗಂಟೆಗೆ ಸರಿಯಾಗಿ ಪೂರ್ತಿಯಾಯಿತು.

ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಲು ಎದ್ದರು; ಗಂಗಾಬಾಯಿಯು ತನಗೆ ಪರಿಚಯವಿದ್ದ ಮತ್ತೊಬ್ಬ ಶ್ರೀಮಂತನನ್ನು ಮಾತನಾಡಿಸಲು ಹೋದಳು, ಆಗ ಅಮರನಾಥನು ವೀರಸಿಂಹನ ಬಳಿಗೆ ಬಂದು ಉದಯಸಿಂಹನೇಕೆ ಬರಲಿಲ್ಲ ಎಂದುದಕ್ಕೆ, ನಾವಿಬ್ಬರೂ ಚಕ್ರಭೀಮನ ಕೋಟೆಯ ಸಮೀಪದಲ್ಲಿ ನಿಂತು ನೋಟವನ್ನು ನೋಡುತ್ತಲಿದ್ದೆವು, ಅವನೆಲ್ಲಿಯೋ ಗುಂಪಿನಲ್ಲಿ ತಪ್ಪಿಸಿ ಕೊಂಡು ಹೋದನು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ ಇದರಿಂದಲೇ ಇಲ್ಲಿಗೆ ನಾನು ಬರುವುದು ಹೊತ್ತಾಯಿತು ಎಂದನು.

ಇಂತಹ ಕಾಳರಾತ್ರಿಯಲ್ಲಿ ಬಲು ಹೊತ್ತು ಹೊರಗಿರುವುದು ತಪ್ಪು ಎಂದು ಅಮರನಾಥನು ಹೇಳುವ ವೇಳೆಗೆ ಸರಿಯಾಗಿ ಗಂಗಾಬಾಯಿಯು ಬಂದು ಬಹು ರಮ್ಯವಾದ ಈ ಜ್ಯೋತ್ಸ್ನೆಯನ್ನು ನೀವು ಕಾಳರಾತ್ರಿಯೆಂದು ಹೇಳುವುದು ಸರಿಯಲ್ಲ ಎಂದಳು ಅದಕ್ಕೆ ಅಮರನಾಥನು ನಗುತ್ತ ನಾನು ಇಷು ಹೊತ್ತಿನಲ್ಲಿ ಮನೆಗಳಲ್ಲಿರದ ಊರಲ್ಲಿ ಅಲೆಯುತ್ತಿರುವರಿಗಾಗಿ ಆ ಮಾತನ್ನಾಡಿದೆನಲ್ಲದೆ ಇಲ್ಲಿ ಬಂದಿರುವವರ ವಿಷಯದಲ್ಲಿ ಹೇಳಲಿಲ್ಲ ಇಲ್ಲಿರುವವರು ನಿಮ್ಮ ಮುಖಚಂದ್ರನಿಂದ ಪ್ರಸರಿಸಿರುವ ಬೆಳ್ದಗೆಯೆಂಬ ಚಂದ್ರಿಕೆಯಲ್ಲಿ ವಿಹರಿಸುತ್ತಲಿರುವರು ಎಂದನು

ಹಾಗಾದರೆ ಹೊರಗೆ ಸುತ್ತುವರಾರು ?

ನಮ್ಮ ಉದಯಸಿಂಹ ಎಂದು ವೀರಸಿಂಹನು ಹೇಳಲು, ಗಂಗಾಬಾಯಿಯು

ಅವನು ಇಂತಹ ಕಡೆಗೆ ಹೋದನೆಂಬುದು ತಿಳಿಯದೋ ಎಂದು ಕೇಳಿದುದಕ್ಕೆ ಇಲ್ಲವೆಂದನು.

ಅವನನ್ನು ಹಾಗೆ ಒಬ್ಬನನ್ನೇ ನೀವು ಬಿಡಬಾರದಾಗಿದ್ದಿತು.

ಹಾಗೆ ಹೋಗುವುದರಲ್ಲಿ ಅಪಾಯವೇನು ಎಂದು ವೀರಸಿಂಹನು ಕೇಳಲು, ಯಾರು ಬಲ್ಲರು, ಈ ಊರಿನಲ್ಲಿ ಕಳ್ಳರ ಕಾಟ ಬಲ; ಸಮರಾತ್ರೆ, ಊರಿನ ಪಕ್ಕದಲ್ಲೇ ನದಿ ಎಂದಳು. ಇದನ್ನು ಕೇಳುತಲೆ ವೀರಸಿಂಹನಿಗೆ ಪಶುಪತಿಯು ಹೇಳಿದ್ದ ಕತೆಯು ಜ್ಞಾಪಕಕ್ಕೆ ಬಂದು ಸರ್ವಾಂಗವೂ ನಡ ಗಿತು ನಾನು ಹೊರಟಾಗ ಉದಯಸಿಂಹನು ಬಿಡಾರಕ್ಕೆ ಬಂದ ಕೂಡಲೆ ನನಗೆ ತಿಳಿಸೆಂದು ಪಶುಪತಿಗೆ ಹೇಳಿ ಬಂದಿದ್ದೆ. ಅವ ಸಮಾಚಾರವೂ ಬರಲಿಲ್ಲವಾಗಿ ನನಗೆ ಬಲು ಯೋಚನೆಯಾಗಿದೆ ಎಂದನು

ಇಷ್ಟು ಹೊತ್ತಿಗೆ ಅಮರನಾಥನ ಆಳು ವೀರಸಿಂಹನನ್ನು ಹುಡುಕಿಕೊಂಡು ಬಂದು, ಮಹಾಸ್ವಾಮೀ! ಅವನೋ ಒಬ್ಬನು ಉದಯಸಿಂಹರಿಂದ ಒಂದು ಲೇಖನವನ್ನು ತಂದಿರುವನೆಂದು ಪಶುಪತಿಯು ಹೇಳಿಕಳುಹಿಸಿದ್ದಾನೆ ಎಂದನು.

ಅವನೆಲ್ಲಿ? "ಹೊರಗೆ ನಿಂತಿದ್ದಾನೆ"

ಆಗ ವೀರಸಿಂಹ, ಗಂಗಾಬಾಯಿ, ಅಮರನಾಥ, ಎಲ್ಲರೂ ಹೊರಗೆ ಬಂದು ವಿಚಾರಿಸಲು, ಆಳು ಲೇಖನವನ್ನಿಟ್ಟುಕೊಂಡು ವೀರಸಿಂಹನ ಬಿಡಾರದಲ್ಲಿರುವನೆಂದು ತಿಳಿಯಿತು ವೀರಸಿಂಹನು ಗಂಗಾಬಾಯಿ ಅಮರನಾಥರನ್ನು ಕುರಿತು ನಾನು ಬಿಡಾರಕ್ಕೆ ಹೋಗಿ ನೋಡುತ್ತೇನೆ ಎಂದು ಹೇಳಲು, ಅವರಿಬ್ಬರೂ ಬೇಗನೆ ಹೋಗು, ಅಯ್ಯೋ ಪಾಪ ಅವನ ಗತಿ ಏನಾಗಿರುವುದೋ? ಎಂದರು.

ಇದೋ ಹೊರಟೆ.

ಪುನಃ ನೋಡಬಹುದಷ್ಟೆ ಎಂದು ಗಂಗಾಬಾಯಿಯು ಕೇಳಲು, ವೀರಸಿಂಹನು ಪ್ರಮಾದವೇನೂ ಇಲ್ಲದಿದ್ದರೆ ಸಮಾಚಾರವನ್ನು ತಿಳಿಸಲು ಅಗತ್ಯವಾಗಿ ಬರುವೆನು; ಇಲ್ಲದಿದ್ದರೆ ನಾನೇನ ಮಾಡುವೆನೋ ಗೊತ್ತಿಲ್ಲ ಎಂದನು.

ಹೇಗಾದರೂ ಆಗಲಿ, ವಿವೇಕವನ್ನು ಬಿಟ್ಟು ಕೆಲಸ ಮಾಡಬೇಡಿ.

ಆ ವಿಷಯವಾಗಿ ನೀವು ಯೋಚಿಸಬೇಕಾದುದಿಲ್ಲ ಎಂದು ಹೇಳಿ ವೀರಸಿಂಹನು ಹೊರಟು ತನ್ನ ಬಿಡಾರದ ಹತ್ತಿರಕ್ಕೆ ಬರುತ್ತಲೆ, ಮುಸುಕ ಹಾಕಿಕೊಂಡು

ಸ್ವಲ್ಪ ಮರೆಯಾಗಿ ನಿಂತಿದ್ದ ಮನುಷ್ಯನೊಬ್ಬನನ್ನು ನೋಡಿ ಉದಯಸಿಂಹನಿಂದ ಲೇಖನವನ್ನು ತಂದಿರುವವನು ನೀನೇಯೋ ಎಂದು ಕೇಳಿದನು.

ಪಶುಪತಿಯು ಭೋಜನ ಶಾಲೆಯಲ್ಲಿ ಬಿಡಾರ ಮಾಡಿರುವರು ತಾವೇಯೋ?

ಅಹುದು.

ಉದಯಸಿಂಹರ ಸ್ನೇಹಿತರು ತಾವೇಯೋ?　　ಹೂ.

ತಮ್ಮ ಹೆಸರು?　　ವೀರಸಿಂಹ.

ಹಾಗಾದರೆ ಇದೇ ಉದಯಸಿಂಹರು ತಮಗೆ ಕೊಟ್ಟ ಕಾಗದ ಎಂದು ಅದನು ಕಯ್ಯಲ್ಲಿ ಕೊಟ್ಟನು.

ಅದಕ್ಕೆ ಬದಲು ಏನಾದರೂ ಬೇಕೋ?

ಬದಲು ಬೇಕೆಂದು ತೋರುತ್ತದೆ.

ಹಾಗಾದರೆ ಒಳಕ್ಕೆ ಬಾ.

ಕ್ಷಮಿಸಬೇಕು, ನಾನಿಲ್ಲಿಯೇ ಇರುತ್ತೇನೆ.

ಏಕೆ?　　‘ ಕಾಗದವನ್ನು ಓದಿದರೆ ಗೊತ್ತಾಗುತ್ತದೆ. ”

ಹಾಗಾದರೆ ಸರಿ ಎಂದು ವೀರಸಿಂಹನು ತನ್ನ ಕೊಟ್ಟಡಿಯನ್ನು ಸೇರುವುದರೊಳಗಾಗಿಯೇ ಪಶುಪತಿಯು ಬಂದು ಮಹಾಸ್ವಾಮೀ, ಉದಯಸಿಂಹರು ತಮಗೆ ಕಳುಹಿಸಿದ್ದ ಕಾಗದವು ಕೈಸೇರಿತೋ ಎಂದನು.

ಈಗ ತಾನೇ ಬಂದಿತು, ಸ್ವಲ್ಪ ದೀಪವನ್ನು ಹೊತ್ತಿಸು.

ಬೆಳಕಿನಲ್ಲಿ ಪಶುಪತಿಯು ವ್ಯಾಕುಲಚಿತ್ತನಾಗಿದ್ದುದನ್ನು ಕಂಡು ವೀರಸಿಂಹನು ದಿಗಿಲುಪಟ್ಟನು. ಕಾಗದದಲ್ಲಿ ಈ ರೀತಿ ಬರೆದಿದ್ದಿತು:—

ಅಯ್ಯಾ ಸ್ನೇಹಿತನೇ, ಈ ಕಾಗದವನ್ನು ತರುವವನ ಕಯ್ಯಲ್ಲಿ ಆರುಸಾವಿರ ವರಹಗಳನ್ನು ಒಡನೆಯೇ ಕಳುಹಿಸು. ನನ್ನ ಪೆಟ್ಟಿಗೆಯಲ್ಲಿ ಒಂದು ವೇಳೆ ಅಷ್ಟು ಹಣವಿಲ್ಲದಿದ್ದರೆ ನಿನ್ನಲ್ಲಿರುವುದನ್ನೂ ಜತೆಮಾಡಿ ಕಳುಹಿಸು. ಈ ಹಣವು ಅಗತ್ಯವಾಗಿ ಈಗಲೇ ಬೇಕು ಇಂದ್ರಪ್ರಸ್ಥದಲ್ಲಿ ಕಳ್ಳರಿರುವರೆಂದು ನನಗೂ ಈಗ ಗೊತ್ತಾಯಿತು.

ಇದರ ಕೆಳಗೆ “ನಾಳೆಯ ದಿನ ಸೂರ್ಯೋದಯದೊಳಗಾಗಿ ಈ ಹಣವು ಬಾರದಿದ್ದರೆ ಉದಯಸಿಂಹನು ಜೀವಸಹಿತವಿರಲಾರನು.　　ಉಂಗಿಬಂಪ ” ಎಂದಿದ್ದಿತು.

ಇದನ್ನು ಓದಿದ ಒಡನೆಯೇ ಉದಯಸಿಂಹನು ಬಾರದಿದ್ದುದಕ್ಕೆ ಕಾರಣವು ಗೊತ್ತಾಯಿತು. ಅವನ ಪೆಟ್ಟಿಗೆಯನ್ನು ತೆರೆದು ನೋಡಲು, ನಾಲ್ಕು ಸಾವಿರದ ಐನೂರರವತ್ತು ವರಹಗಳಿದ್ದುವು ತಾನು ಇಂದ್ರಪ್ರಸ್ಥದಲ್ಲಿ ಬಹು ದಿನಗಳು ನಿಲ್ಲುವ ಯೋಚನೆಯಿಲ್ಲದಿದ್ದುದರಿಂದ ತನ್ನಲ್ಲಿ ಒಂದು ಸಾವಿರದ ನಾನೂರ ನಲವತ್ತು ವರಹಗಳು ಇರಲಾರವು, ಎಷ್ಟಿರುವುವೋ ನೋಡೋಣವೆಂದು ವೀರಸಿಂಹನು ತನ್ನ ಪೆಟ್ಟಿಗೆಯನ್ನು ತೆರೆದು ನೋಡಲು ನಾನೂರ ಇಪ್ಪತ್ತು ವರಹಗಳು ಮಾತ್ರವಿದ್ದುವು. ಇನ್ನು ಸಾವಿರದ ನೂರ ಇಪ್ಪತ್ತು ವರಹಗಳನ್ನು ಹೇಗೆ ಜತೆಮಾಡುವುದೆಂದು ಯೋಚಿಸುತ್ತಲಿರುವಾಗ ಅವನಿಗೆ ಮಲಯಸಿಂಹನ ನೆನಪು ಬಂದು, ಪಶುಪತಿಯನ್ನು ಕರೆದು ನಾನು ರಾಜಾಮಲಯಸಿಂಹರನ್ನು ಒಡನೆಯೇ ನೋಡಬೇಕಾಗಿದೆ, ಅವರು ಇದ್ದಾರೆಯೇ ನೋಡಿಬಾ ಎಂದನು ಪಶುಪತಿಯು ನೋಡಿ ಬಂದು ಮಹಾಸ್ವಾಮೀ, ರಾಜರು ಇದ್ದಾರೆ, ಭೇಟಿ ಮಾಡಬಹುದು ಎಂದು ಹೇಳಿದನು

ಒಡನೆಯೇ ವೀರಸಿಂಹನು ಮಲಯಸಿಂಹನ ಕೊಟ್ಟಡಿಗೆ ಹೋದನು. ಅವನು ಇದೇನು ಇಷ್ಟು ಹೊತ್ತಿನಲ್ಲಿ ಬಿಜಯಮಾಡಿಸಿದಿರಿ ಎನ್ನಲು, ಸ್ವಾಮೀ, ಉದಯಸಿಂಹನಿಗೆ ದೊಡ್ಡ ಗಂಡವು ಬಂದಿದೆ. ತಮ್ಮ ಸಾಹಾಯ್ಯವನ್ನು ಬಯಸಿ ಬಂದೆನು

ಅಂತಹ ಅಪಾಯವಾವುದು ?

ಈ ಕಾಗದವನ್ನು ನೋಡಿದರೆ ತಮಗೆ ಎಲ್ಲವೂ ಗೊತ್ತಾಗುವುದು. ಈ ವಿಷಯವಾಗಿ ತಮಗೇನು ತೋರುತ್ತದೆ ?

ಲುಂಗಿಬಂಪನು ಬರೆದಿರುವಂತೆ ಹಣವನ್ನು ಸೂರ್ಯೋದಯದೊಳಗಾಗಿ ಕೊಡದಿದ್ದರೆ ಉದಯಸಿಂಹನು ಬದುಕುವ ಸಂಭವವೇ ಇಲ್ಲ ; ಅವನು ಕೇಳುವಷ್ಟು ಹಣವು ನಿಮ್ಮಲ್ಲಿದೆಯೋ ?

ಇಲ್ಲ ; ಒಂದು ಸಾವಿರದ ನೂರ ಇಪ್ಪತ್ತು ವರಹಗಳು ಬೇಕಾಗಿವೆ.

ಆಗ ಮಲಯಸಿಂಹನು ತನ್ನ ಕೈಪೆಟ್ಟಿಗೆಯನ್ನು ತರಿಸಿ ಆದರಲ್ಲಿದ್ದ ಹಣದ ಚೀಲವನ್ನು ತೆಗೆದು ವೀರಸಿಂಹನ ಮುಂದಿಟ್ಟು ನಿಮಗೆ ಎಷ್ಟು ಹಣ ಬೇಕೋ ಅಷ್ಟನ್ನು ತೆಗೆದುಕೊಂಡು ಈಗಲೇ ಕಳುಹಿಸಿ ಎಂದನು.

ಸ್ವಾಮೀ, ಲುಂಗಿಬಂಪನಿಗೆ ಈ ಹಣವನ್ನು ಕೊಟ್ಟೇ ತೀರಬೇಕೋ?

ನೀವೇ ಯೋಚಿಸಿ ನೋಡಿ.

ತಾವು ಇಷ್ಟಪಟ್ಟರೆ ಅವನಿಗೆ ಒಂದು ಕಾಸನ್ನೂ ಕೊಡದೆ ಉದಯಸಿಂಹನನ್ನು ಬಿಡಿಸಿಕೊಂಡು ಒರಬಹುದು.

ಅದನ್ನು ಕೇಳಿ ಮಲಯಸಿಂಹನು ಸ್ವಲ್ಪ ಬೆಚ್ಚಿ ಅದು ಹೇಗೆ ಎನ್ನಲು ತಾವು ಅವನೊಡನೆ ಒಂದು ಮಾತನಾಡಿದರೆ ಸಾಕು, ಅವನು ಉದಯಸಿಂಹನನ್ನು ಖಂಡಿತ ವಾಗಿ ಬಿಡುವನು.

ಅವನ ಮೇಲೆ ನನ್ನ ಅಧಿಕಾರವೇನಿದೆ?

ಅವನಿಗೆ ತಾವು ಈಗ ತಾನೆ ಒತ್ತಾಸೆಯನ್ನು ಮಾಡಿರುವಿರಿ, ಅದನ್ನು ಅವನು ಮರೆತಿರಲಾರ.

ನಾನು ಅವನಿಗೆ ಆವ ಉಪಕಾರ ಮಾಡಿದೆ?

ಪ್ರತಿರೋಧಿಯನ್ನು ಬಿಡಿಸಿ ಕೊಟ್ಟಿರಿ.

ನಾನು ಬಿಡಿಸಿಕೊಟ್ಟೆನೆಂದು ನಿಮಗಾರು ಹೇಳಿದರು?

ಆರಾದರೂ ಹೇಳಲಿ, ನಾನದನ್ನು ಬಲ್ಲೆನು ಎಂದು ವೀರಸಿಂಹನು ಹೇಳಲು, ಮಲಯಸಿಂಹನು ಹುಬ್ಬುಗಳನ್ನು ಗಂಟುಹಾಕಿಕೊಂಡು ಸ್ವಲ್ಪಹೊತ್ತು ಯೋಚಿಸಿ, ನಾನು ಬಂಪನ ಬಳಿಗೆ ಹೋದರೆ ನೀವೂ ಜತೆಯಲ್ಲಿ ಬರುವಿರೋ ಎಂದನು.

ತಮಗೆ ಅಸಮಾಧಾನವಾಗದಿದ್ದರೆ ಆಗಬಹುದು.

ಹಾಗಾದರೆ ಹೊರಡೋಣ ಏಳಿ ಎನ್ನಲು, ವೀರಸಿಂಹನು ಆಯುಧವನ್ನು ತರಲೋ ಎಂದು ಕೇಳಿದನು.

ಏತಕ್ಕೆ? ಆದರಿಂದ ಏನೂ ಪ್ರಯೋಜನವಿಲ್ಲ. ಈ ಕಾಗದವನ್ನು ತಂದ ವನೆಲ್ಲಿ? "ಬೀದಿಯಲ್ಲಿ ನಿಂತಿದ್ದಾನೆ."

ಅವನನ್ನು ಕರೆಸೋಣ. "ಅವನಿಲ್ಲಿಗೆ ಬರುವುದಿಲ್ಲ."

ನಾನು ಕೂಗಿದರೆ ಅವನು ಬಾರದಿರನು. ಎಂದು ಬೀದಿಯ ಕಿಟಕಿಯ ಸಮೀ ಪಕ್ಕೆ ಹೋಗಿ ಒಂದು ವಿಧವಾಗಿ ಸಿಳ್ಳು ಹಾಕಿದನು. ಕೂಡಲೆ ಬೀದಿಯಲ್ಲಿ ನಿಂತಿದ್ದ

ವನು ಬೇಗಬೇಗನೆ ಮಹಡಿಯನ್ನು ಹತ್ತಿ ಬಂದು, ಮಲಯಸಿಂಹನ ಕಾಲಿನ ಮೇಲೆ ಬಿದ್ದು ತಾವು ಮಾಡಿದ ಉಪಕಾರವನ್ನು ನಾನೆಂದಿಗೂ ಮರೆಯಲಾರೆ ಎಂದನು

ಇದೇನು ಪ್ರತಿರೋಧಿ, ಸಮಾಚಾರವೇನು, ಎಂದು ಮಲಯಸಿಂಹನು ಕೇಳಲು ಪ್ರತಿರೋಧಿಯು ವೀರಸಿಂಹನನ್ನು ನೋಡಿ ಸುಮ್ಮನಿದ್ದನು. ಅದನ್ನರಿತು ಮಲಯ ಸಿಂಹನು ಅವರು ನಮ್ಮ ಸ್ನೇಹಿತರು , ನಡೆದ ಸಂಗತಿಯನ್ನು ಧಾರಾಳವಾಗಿ ನೀನು ತಿಳಿಸಬಹುದು ಎಂದನು.

ಮಹಾಸ್ವಾಮೀ, ತಾರಕೆಯ ಬಂಡಿಯೂ ಉದಯಸಿಂಹನ ಬಂಡಿಯೂ ಉತ್ಸವ ಕಾಲದಲ್ಲಿ ಅನೇಕಾವೃತ್ತಿ ಸಂಧಿಸಿದಾಗ—

ತಾರಕೆ ಯಾರು ? "ನಮ್ಮ ಯಜಮಾನನ ಹೆಂಡಿತಿ."

ಸಂಧಿಸಿದಾಗ ಏನಾಯಿತು ?

ಉದಯಸಿಂಹನು ಅವಳನ್ನು ನೋಡಿ ಮೋಹಿಸಿ ತನ್ನ ಕೈಯಲ್ಲಿದ್ದ ಹೂವಿನ ಚೆಂಡನ್ನು ಅವಳ ಮೇಲೆ ಹಾಕಲು, ಒಂಪನ ಅನುಮತಿಯಿಂದ ಅವಳು ಒಂದು ಗುಲಾಬಿ ಹೂವನ್ನು ಅವನ ಮೇಲೆ ಎಸೆದಳು.

ಅವಳ ಪಕ್ಕದಲ್ಲಿ ಆಗ ಲಂಗಿ ಒಂಪನು ಇದ್ದನೋ ಎಂದು ವೀರಸಿಂಹನು ಕೇಳಲು, ಮಹಾಸ್ವಾಮೀ ! ಅವನು ಸಾರಥಿಯಂತೆ ವೇಷವನ್ನು ಹಾಕಿಕೊಂಡು ಬಂಡಿ ಯನ್ನು ನಡೆಸುತ್ತಲಿದ್ದನು ಎಂದನು.

ಆಮೇಲೇನಾಯಿತು ?

ಮತ್ತೊಂದು ಸಾರಿ ಅವರ ರಥಗಳು ಸಂಧಿಸಿದಾಗ ಗಂಡನ ಅನುಮತಿಯಿಂದ ತಾರಕೆಯು ತನ್ನ ಮುಖದ ತೆರೆಯನ್ನು ತೆಗೆದು ಸಂಜ್ಞೆಯನ್ನು ಮಾಡಿದಳು. ಪುನಃ ತಾರಕೆಯ ಬಂಡಿ ಸಿಕ್ಕಿದಾಗ ಉದಯಸಿಂಹನು ಹೂವಿನ ಚೆಂಡಿನಲ್ಲಿ ಒಂದು ಚೀಟಿ ನ್ನಿಟ್ಟು ಅವಳ ಮೇಲೆ ಎಸೆಯಲು, ಅವಳು ಅದನ್ನು ಒಂಪನಿಗೆ ತೋರಿಸಿ ಅವನು ಹೇಳಿ ದಂತೆ ಒಂದು ಸ್ಥಾನವನ್ನು ಗೊತ್ತುಮಾಡಿ ಅಲ್ಲಿಗೆ ನೀವು ಸಾಯಂಕಾಲ ಬಂದರೆ ನಿಮ್ಮ ಆಸೆಯು ಪೂರ್ತಿಯಾಗುವುದು ಎಂಬ ಅಭಿಪ್ರಾಯವುಳ್ಳ ಬದಲು ಚೀಟನ್ನು ಬರೆದು ಅದನ್ನು ಒಂದು ರೋಜಾಹೂವಿನ ಗೊಂಚಲಿನಲ್ಲಿ ಸಿಕ್ಕಿಸಿ ಉದಯಸಿಂಹನ ಮೇಲೆ ಹಾಕಿದಳು. ಅದನ್ನು ನೋಡಿಕೊಂಡು ಉದಯಸಿಂಹನು ಸಂತೋಷದಿಂದ ಮೈಯುಬ್ಬಿ

ದವನಾಗಿ ಏರ್ಪಾಡಾಗಿದ್ದ ಸ್ಥಳಕ್ಕೆ ಬಂದಾಗ ತಾರಕೆಗೆ ಬದಲಾಗಿ ದೇವದೂತನು ಹೆಣ್ಣು ವೇಷವನ್ನು ಹಾಕಿಕೊಂಡು ಬಂದು ಅವನನ್ನು ಬಂಡಿಯಲ್ಲಿ ಕುಳ್ಳಿರಿಸಿಕೊಂಡು ಹೋದನು. ಉದಯಸಿಂಹನು ಕೊಂಚ ಹೊತ್ತಿನ ವರೆಗೆ ನೆಮ್ಮದಿಯಾಗಿದ್ದು ಬಂಡಿಯು ಊರ ಹೊರಗೆ ಹೋದಮೇಲೆ ದೇವದೂತನ ಮೇಲೆ ಕೈ ಹಾಕಲು ಅವನು ಪಿಸ್ತೂಲನ್ನು ಗುರಿಕಟ್ಟಿ ಸುಮ್ಮನಿದ್ದರೆ ಸರಿ, ಇಲ್ಲವಾದರೆ ನಿನ್ನ ಪ್ರಾಣವು ಉಳಿಯದು ಎಂದನು. ಆಗ ಉದಯಸಿಂಹನು ಇಳಿದು ಓಡಿ ಹೋಗಬೇಕೆಂದು ಪ್ರಯತ್ನಮಾಡಲು ದೇವದೂತನು ತನ್ನ ಜತೆಯಲ್ಲಿದ್ದ ನಾಲ್ವರೊಡನೆ ಅವನನ್ನು ಕರೆದುಕೊಂಡು ಹೋಗಿ ಬಂಪನಲ್ಲಿ ಬಿಟ್ಟನು.

ಅದನ್ನು ಕೇಳಿ ಮಲಯಸಿಂಹನು ವೀರಸಿಂಹನ ಮುಖವನ್ನು ನೋಡಿ ಇವನು ಹೇಳುವುದು ನಿಜ ; ನೀವೇನು ಹೇಳುತ್ತೀರಿ ? ಎಂದನು.

ಉದಯಸಿಂಹನಿಗಲ್ಲದೆ ಮತ್ತಾರಿಗಾದರೂ ಈ ಅವಸ್ಥೆಯು ಪ್ರಾಪ್ತವಾಗಿದ್ದಿದ್ದರೆ ಬಹು ವಿನೋದವಾದ ಸಂಗತಿಯೆಂದೇ ಹೇಳುತ್ತಿದ್ದೆನು.

ನೀವು ಈಗ ನನ್ನ ಬಳಿ ಬಾರದೆ ಇದ್ದಿದ್ದರೆ, ಮಾಡಿದ ಕಾರ್ಯಕ್ಕಾಗಿ ಉದಯಸಿಂಹರು ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಲಿದ್ದರು. ಈಗ ಆ ಭಯವೇನೂ ಇಲ್ಲ.

ನಾವು ಹೋದರೆ ಅವನು ಸಿಕ್ಕುವನೋ ?

ಓಹೋ ! ಅದರಲ್ಲಿ ಏನೂ ಅಡ್ಡಿ ಇಲ್ಲ. ಅವರಿರುವ ಸ್ಥಳವು ಬಲು ಅಂದವಾಗಿದೆ ; ಅದೂ ನೋಡಬೇಕಾದುದೇ.

ಹೊರಡೋಣವೋ ?　　" ಹೊರಡೋಣ "

ನಿಮ್ಮ ರಥವು ಸಿದ್ಧವಾಗಿದೆಯೋ ?　　" ಇಲ್ಲ "

ಚಿಂತೆಯಿಲ್ಲ ; ನನ್ನ ಬಂಡಿಯು ಆವಾಗಲೂ ಸಿದ್ಧವಾಗಿರುವುದು. ಏಳಿರಿ ಎಂದು ಹೇಳಿ, ಯಾರೋ 'ಅಲ್ಲಿ ಎಂದು ಕೂಗಿದ ಕೂಡಲೆ ಒಬ್ಬ ಆಳು ದಡ ದಡನೆ ಓಡಿ ಬಂದು ಮಹಾಸ್ವಾಮೀ, ಏನಪ್ಪಣೆ ಎಂದನು.

ಬಂಡಿಯನ್ನು ಸಿದ್ಧಪಡಿಸಿ, ಅದರಲ್ಲಿರುವ ಪಿಸ್ತೂಲುಗಳನ್ನು ತೆಗೆದು ಒಳಗೆ ಇಡು. ಸಾರಥಿಯು ನಿದ್ದೆಮಾಡುತ್ತಲಿರುವನು, ಅವನನ್ನು ಎಬ್ಬಿಸಬೇಡ ; ವಾಮನಭಟ್ಟನು ಬಂಡಿಯನ್ನು ಹೊಡೆಯುವನು ಎನ್ನಲು, ಸ್ವಲ್ಪಕಾಲದಲ್ಲಿಯೇ ರಥವು ಸಿದ್ಧವಾಗಿ ಬಿಡಾರದ ಮುಂದೆ ಬಂದು ನಿಂತಿತು.

ಆಗ ಇಬ್ಬರೂ ಅದರಲ್ಲಿ ಕುಳಿತರು ; ಪ್ರತಿರೋಧಿಯು ವಾಮನಭಟ್ಟನ ಪಕ್ಕ ದಲ್ಲಿ ಕುಳಿತನು. ಕೋಟೆಯ ಬಾಗಿಲನ್ನು ಸೇರುತ್ತಲೇ ಅಲ್ಲಿದ್ದ ಕಾವಲುಗಾರನು ಇಷ್ಟು ಹೊತ್ತಿನಲ್ಲಿ ಹೊರಗೆ ಬಿಡುವುದಿಲ್ಲ ಎಂದು ಬಂಡಿಯನ್ನು ತಡೆದನು. ಮಲಯ ಸಿಂಹನು ಆವ ವೇಳೆಯಲ್ಲಿ ಎಲ್ಲಿಗೆ ಹೋಗಬೇಕಾದರೂ ತಡೆ ಮಾಡದೆ ತನ್ನನ್ನು ಬಿಡಬೇಕೆಂದು ಇಂದ್ರಪ್ರಸ್ಥದ ರಾಜನು ತನಗೆ ಕೊಟ್ಟಿದ್ದ ನಿರೂಪವನ್ನು ತೋರಿಸಲು ಅವನು ಬಾಗಿಲನ್ನು ತೆಗೆದು ಬಂಡಿಯನ್ನು ಹೊರಕ್ಕೆ ಬಿಟ್ಟನು. ಸ್ವಲ್ಪದೂರ ಹೋದ ಅನಂತರ ಬಂಡಿಯು ನಿಂತಿತು; ಪ್ರತಿರೋಧಿಯು ಇಳಿದು ಬಾಗಿಲನ್ನು ತೆಗೆದು ಮಹಾ ಸ್ವಾಮೀ, ಇನ್ನುಮುಂದೆ ಬಂಡಿಯು ಹೋಗಲಾರದು ಎಂದನು.

ಆಗ ವೀರಸಿಂಹ ಮಲಯಸಿಂಹರಿಬ್ಬರೂ ಇಳಿದರು ಅಷ್ಟರಲ್ಲಿಯೇ ಪ್ರತಿ ರೋಧಿಯು ಮಾರ್ಗದ ಪಕ್ಕದಲ್ಲಿದ್ದ ಬಂಡೆಯ ಸಮೀಪ ಹೋಗಿ ಅಲ್ಲಿ ಪೊದರಿನಲ್ಲಿದ್ದ ದೀವಟಿಗೆಯನ್ನು ಹೊತ್ತಿಸಿಕೊಂಡು ಬಂದನು. ಇವರೂ ಅವನ ಹಿಂದೆ ಹೊರಟರು. ಎಲ್ಲರೂ ತಗ್ಗು ಪ್ರದೇಶವನ್ನಿಳಿದು ಕಾಲು ದಾರಿಯಲ್ಲಿ ಹೋಗುತ್ತಿರುವಾಗ ಒಂದು ಕಡೆ ಇಬ್ಬರು ಕಾವಲುಗಾರರನ್ನು ಕಂಡು ವೀರಸಿಂಹನು ನಾವಿಲ್ಲೇ ನಿಲ್ಲಬೇಕೋ ಎನ್ನಲು ಮಲಯಸಿಂಹನು ಅವಶ್ಯಕವಿಲ್ಲ. ಅವರಿಗೆ ಹೇಳಬೇಕಾದುದನ್ನು ಪ್ರತಿರೋಧಿಯು ಹೇಳುವನು ಎಂದನು.

ಪ್ರತಿರೋಧಿಯು ಮುಂದೆ ಹೋಗಿ ಕಾವಲುಗಾರರಿಗೆ ಬರುವರು ಇಂಥವರೆಂದು ತಿಳಿಸಲು, ಅವರು ವೀರಸಿಂಹ ಮಲಯಸಿಂಹರನ್ನು ನೋಡಿ ಮುಂದೆ ಬಿಜಯಮಾಡಿಸ ಬಹುದು ಎಂದರು.

ಅನಂತರ ಅವರು ಒಂದು ಪೊದರಿನ ಸಂದಿನಲ್ಲಿ ನುಗ್ಗಿ, ಗುಹೆಯಂತಿದ್ದ ದಾರಿ ಯನ್ನು ಹೊಕ್ಕು, ಸ್ವಲ್ಪ ದೂರ ಬಗ್ಗಿ ಹೋದ ಮೇಲೆ ಒಂದು ಒಯಲು ಸಿಕ್ಕಿತು. ಅಲ್ಲಿಯ ಕಾವಲುಗಾರರು ಆದಾರು ಎಂದು ಗದ್ದರಿಸಲು ಪ್ರತಿರೋಧಿಯು ಅವರ ಸಮೀಪ ಹೋಗಿ ಕೆಲವು ಮಾತುಗಳನ್ನಾಡಿದನು. ಅವರೂ ಇವರಿಗೆ ಮರ್ಯಾದೆಯನ್ನು ಮಾಡಿ ಬಿಜಯಮಾಡಬಹುದೆಂದು ಹೇಳಿದರು.

ಮಲಯಸಿಂಹನು ವೀರಸಿಂಹನ ಕಯ್ಯನ್ನು ಹಿಡಿದು, ಕೆಲವು ಮೆಟ್ಟಲುಗಳನ್ನು ಏರಿ ಇಳಿದು ಒಂದು ಕಡೆ ನಿಂತು ನೋಡಲು, ಅಲ್ಲಿ ಕೆಲವು ಕಟ್ಟಡಗಳು ಕಾಣಿಸಿದುವು.

ಒಂದು ಪಡಸಾಲೆಯಲ್ಲಿ ದೀಪವನ್ನಿಟ್ಟುಕೊಂಡು ಅವನೋ ಒಬ್ಬನು ಒಂದು ಪುಸ್ತಕವನ್ನು ಓದುತ್ತಲಿದ್ದನು ಅವನ ಸುತ್ತುಮುತ್ತಲೂ ಅಲ್ಲಲ್ಲಿ ಕೆಲವರು ಕಟ್ಟೆಡಗಳಲ್ಲಿಯೂ ಕೆಲವರು ಬಯಲಿನಲ್ಲಿಯೂ, ಕೆಲವರು ಮರಗಳ ಕೆಳಗೂ, ಕಂಬಳಿಗಳನ್ನೂ ತೊಗಲುಗಳನ್ನೂ ಹೊದ್ದು ತುಪಾಕಿಗಳನ್ನು ಪಕ್ಕದಲ್ಲಿಟ್ಟುಕೊಂಡು ಮಲಗಿದ್ದರು.

ವೀರಸಿಂಹನು ಈ ಸನ್ನಿವೇಶವನ್ನು ಚೆನ್ನಾಗಿ ನೋಡಿದನೆಂದು ಮಲಯಸಿಂಹನು ತಿಳಿದು, ಕೂಡಲೇ, ಸದ್ದುಮಾಡಬೇಡವೆಂದು ಸಂಜ್ಞೆಮಾಡಿ, ಮೆಲ್ಲಗೆ ಬಂಪನಿದ್ದೆಡೆಗೆ ಹೊರಟನು. ಆಗ ಇದಿರಿಗಿದ್ದ ಕಾವಲುಗಾರನು ಆದಾರು ಎಂದು ಕೂಗಲು, ಕಳ್ಳರೆಲ್ಲರೂ ತುಪಾಕಿಗಳನ್ನು ಕಯ್ಯಲ್ಲಿ ಹಿಡಿದು ಒಂದೇಸಾರಿ ಎದ್ದು ಮಲಯಸಿಂಹ ವೀರಸಿಂಹರಿಗೆ ಗುರಿಕಟ್ಟಿದರು. ಆಗ ಮಲಯಸಿಂಹನು ಲೇಶವೂ ಭಯಪಡದೆ ಅಲ್ಲಿಯೇ ನಿಂತು ಬಂಪನನ್ನು ಕುರಿತು ಏನಪ್ಪಾ ಬಂಪ, ನಿನ್ನನ್ನು ನೋಡಬಂದರೆ ನಿನ್ನ ಕಡೆಯುವರು ನನ್ನನ್ನು ಬಹು ಮರ್‍ಯಾದೆಯಿಂದ ಕಾಣುವಂತೆ ತೋರುತ್ತಲಿದೆ ಎಂದು ಹೇಳಲು, ಅವನು ತುಪಾಕಿಗಳನ್ನು ಕೆಳಗೆ ಇಡಿರಿ. ನಮ್ಮ ಸ್ವಾಮಿಗಳು ಬಂದಿದ್ದಾರೆ ಎಂದು ಎದ್ದು ಮಲಯಸಿಂಹನಿಗೆ ಮರ್‍ಯಾದೆಮಾಡಿ ಮಹಾಸ್ವಾಮೀ, ತಾವು ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ಬಿಜಯಮಾಡಿಸುವಿರಿ ಎಂದು ನನಗೆ ಹೇಗೆ ತಿಳಿಯುವುದು, ಕ್ಷಮಿಸಬೇಕು ಎಂದನು.

ಇದೇನೋ ಸರಿ. ಆದರೆ ನೀನು ನನ್ನ ಸಂಗಡ ಮಾಡಿಕೊಂಡಿದ್ದ ಮುಗುವಳಿಯನ್ನು ಮರೆತೆಯೋ ?

ಮಹಾಸ್ವಾಮೀ, ನಾನು ಯಾವುದನ್ನು ಮರೆತೆನೋ ಅಪ್ಪಣೆಯಾಗಬೇಕು.

ನನ್ನ ಸ್ನೇಹಿತರ ಮತ್ತು ನನ್ನ ಕಡೆಯುವರ ಗೋಜಿಗೆ ಬರುವುದಿಲ್ಲವೆಂದು ನೀನು ಹೇಳಿರಲಿಲ್ಲವೇ ?

ಅಹುದು, ಹೇಳಿದ್ದೆ. ಆದರೆ ಅದರಲ್ಲಿ ಈಗ ವ್ಯತ್ಯಾಸ ಬಂದುದೇನು?

ಈ ಉದಯಸಿಂಹನು ನನ್ನ ಸ್ನೇಹಿತನು ; ನಾನಿದ್ದ ಬಿಡಾರದಲ್ಲಿಯೇ ಇಳಿದು, ನನ್ನ ಬಂಡಿಯಲ್ಲಿಯೇ ಓಡಾಡುತ್ತಲಿದ್ದರೂ ನೀನೂ ನಿನ್ನ ಕಡೆಯುವರೂ ಅನ್ಯನೆಂದು ಭಾವಿಸಿ ಅವನನ್ನು ಬಿಡುಗಡೆ ಹಣವನ್ನು ಕೇಳಿದ್ದೀರಿ.

ಮಲಯಸಿಂಹನು ಈ ಮಾತನ್ನು ಕೋಪದಿಂದಾಡುತ್ತಲೆ ಬಂಪನು ಗಡಗಡನೆ

ನಡುಗಿ ಕೋಪದಿಂದ ತನ್ನ ಜನಗಳ ಕಡೆ ತಿರುಗಿ ಈ ಸಮಾಚಾರಗಳನ್ನೆಲ್ಲಾ ನನಗೆ ಏತಕ್ಕೆ ನೀವು ತಿಳಿಸಲಿಲ್ಲ? ಇವರಿಗೆ ನಾನು ಕೊಟ್ಟಿದ್ದ ಮಾತನ್ನು ಸುಳ್ಳುಮಾಡಿದಿರಿ. ಇನ್ನು ಮುಂದೆ ಆರಾದರೂ ಇಂತಹ ಕೆಲಸವನ್ನು ಮಾಡಿದರೆ ಅವರ ತಲೆಯನ್ನು ನುಗ್ಗುನುರಿಮಾಡಿಬಿಡುವೆನು ಎಂದು ಗರ್ಜಿಸಿದನು

ಆಗ ಮಲಯಸಿಂಹನು ವೀರಸಿಂಹನನ್ನು ನೋಡಿ ಇದು ಒಂಪನ ತಪ್ಪಲ್ಲ ಎನ್ನಲು, ಒಂಪನು ಗಾಬರಿಬಿದ್ದು ಇನ್ನಾರೋ ಬಂದಿರುವಂತಿದೆ ಎಂದನು.

ಇವರು ವೀರಸಿಂಹರು, ಇವರ ಹೆಸರಿಗೇ ನೀನು ಕಾಗದ ಬರೆದಿದ್ದುದು ಎನ್ನಲು, ಅವನು ವೀರಸಿಂಹನನ್ನು ನೋಡಿ ಮಹಾಸ್ವಾಮೀ, ನನಗೆ ಹಣವೇ ಮುಖ್ಯವಲ್ಲ; ಇದು ನಮ್ಮ ಮಹಾಸ್ವಾಮಿಗಳಿಗೆ ಗೊತ್ತು. ನಾಲಗೆಯೊಂದು ಸರಿಯಾಗಿದ್ದರೆ ಲೋಕವೆಲ್ಲವೂ ನಮ್ಮನ್ನು ಗೌರವಿಸುವುದು ಎಂದನು.

ವೀರಸಿಂಹನು ಸುತ್ತಲೂ ನೋಡಿ ಉದಯಸಿಂಹನನ್ನು ಕಾಣದೆ ಅವನೆಲ್ಲಿರುವನೆಂದು ಒಂಪನನ್ನು ಕೇಳಲು, ಇದಿರಿಗಿರುವ ಮಂಟಪವನ್ನು ತೋರಿಸಿ ಅದರಲ್ಲಿದಾರೆ ಎಂದು ಹೇಳಿ ನಾನೇ ಅವರನ್ನು ಕರೆದುಕೊಂಡು ಬರುವೆನು ಎಂದು ಹೊರಟನು. ಅವನ ಜತೆಯಲ್ಲಿ ಇವರೂ ಹೋದರು ಮಂಟಪದ ಬಾಗಿಲನ್ನು ತೆರೆದು ಒಳಗೆ ನೋಡಲು, ಉದಯಸಿಂಹನು ಗೊರಕೆಯನ್ನು ಹೊಡೆಯುತ್ತಿದ್ದನು.

ಇದನ್ನು ಕಂಡು ಮಲಯಸಿಂಹನು ನಾಳೆಯ ಬೆಳಿಗ್ಗೆ ಸಾಯುವವನು ಇಷ್ಟು ನೆಮ್ಮದಿಯಾಗಿ ಮಲಗಿರುವುದು ವಿಶೇಷವೇ ಸರಿ ಎಂದನು. ಒಂಪನೂ ಇದನ್ನು ನೋಡಿ ಆಶ್ಚರ್ಯಪಟ್ಟನು. ಧೈರ್ಯಶಾಲಿಯೆಂದರೆ ಒಂಪನಿಗೂ ಗೌರವವುಂಟು.

ಒಂಪನು ಉದಯಸಿಂಹನ ಸಮೀಪಕ್ಕೆ ಹೋಗಿ ಅವನನ್ನು ತಟ್ಟಿ ಮಹಾಸ್ವಾಮೀ, ಏಳಬೇಕು ಎನ್ನಲು, ಅವನು ಈಗ ಗಂಟೆ ಎಷ್ಟು ಎಂದನು.

ಸ್ವಾಮೀ! ಒಂದೂವರೆ. ತಾವು ಬಂಧನವಿಮುಕ್ತರಾದಿರಿ.

ವೀರಸಿಂಹನು ಹಣವನ್ನು ಕಳುಹಿಸಿದನೋ? "ಇಲ್ಲ ಮಹಾಸ್ವಾಮಿ"

ಹಾಗಾದರೆ ನನಗೆ ವಿಮೋಚನವು ಹೇಗೆ ಆಯಿತು.

ಮಹಾಸ್ವಾಮೀ, ನನಗೆ ಒಬ್ಬರು ಉಪಕಾರಕರುಂಟು. ಅವರ ಅಪ್ಪಣೆಯನ್ನು ತಲೆಯಲ್ಲಿಟ್ಟು ನಡೆಸುವೆನು. ಅವರು ಇಲ್ಲಿಗೆ ಬಿಜಯಮಾಡಿಸಿದ್ದಾರೆ.

ಉದಯಸಿಂಹನು ಕಣ್ಣನ್ನುಜ್ಜಿಕೊಂಡು ವೀರಸಿಂಹನನ್ನು ನೋಡಿ ಓಹೋ ವೀರಸಿಂಹ! ನನಗಾಗಿ ಇಷ್ಟು ತೊಂದರೆ ತೆಗೆದುಕೊಂಡು ನೀನು ಇಲ್ಲಿಗೆಬಂದೆ, ಸ್ನೇಹವೆಂದರೆ ಹೀಗಲ್ಲವೇ ಇರಬೇಕು! ಬಂಪನಿಗೂ ನೀನು ಉಪಕಾರಮಾಡಿರುವಂತೆ ತೋರುತ್ತದೆ ಎಂದನು.

ಅಪ್ಪಾ ಉದಯ! ಇದು ನನ್ನ ಕೆಲಸವಲ್ಲ, ನಮ್ಮ ರಾಜಾಮಲಯಸಿಂಹರ ಕೃಪೆಯಿಂದಾದುದು ಇಗೋ ನೋಡು ಎಂದು ಮಲಯಸಿಂಹನನ್ನು ತೋರಿಸಿದನು.

ಆಗ ಉದಯಸಿಂಹನು ಎದ್ದು ಸ್ವಾಮೀ! ತಾವು ಮಾಡಿದ ಉಪಕಾರವನ್ನು ನಾನೆಂದಿಗೂ ಮರೆಯಲಾರೆ ಮೊದಲು ತಮ್ಮ ಬಂಡಿಯನ್ನು ನನಗೆ ಕೊಟ್ಟು ಈಗ ಇಲ್ಲಿಗೆ ಬಂದು ನನ್ನ ಬಂಧನವನ್ನು ಬಿಡಿಸಿದಿರಿ ಎನ್ನಲು, ಮಲಯಸಿಂಹನು ಏನೋ ಯೋಚನೆ ಮಾಡುತ್ತಲಿದ್ದು ಆವ ಮಾತನ್ನೂ ಆಡದೆ ಇದ್ದನು

ಬಳಿಕ ಉದಯಸಿಂಹನು ತನ್ನ ಪದಾರ್ಥಗಳನು ತೆಗೆದುಕೊಂಡು, ಇನ್ನು ನಾನು ಹೊರಡಲೋ ಎಂದು ಬಂಪನನ್ನು ಕೇಳಲು, ಅವನು ಆಗಬಹುದು ಎಂದು ಹೇಳಿ ಒಂದು ದೀವಟಿಗೆಯನ್ನು ಹೊತ್ತಿಸಿ, ಮಹಾಸ್ವಾಮಿಗಳು ಇತ್ತ ದಯೆಮಾಡಿಸಿದರೆ ನಾನೇ ದಾರಿ ತೋರಿಸುವೆನು. ನನ್ನಿಂದ ಆವ ಅಪರಾಧವಿದ್ದರೂ ಕ್ಷಮಿಸಬೇಕು ಎಂದನು.

ಅಪ್ಪಾ ಬಂಪ! ನೀನು ಮಾಡುವ ಉಪಚಾರಗಳನ್ನು ನೋಡಿದರೆ ಇಂತಹ ಅಪರಾಧವನ್ನು ಮತ್ತೊಂದು ಸಾರಿ ಮಾಡುವಿಯೋ ಎಂದು ಆಸೆಯಾಗುವುದು ಎಂದು ಮಲಯ ಸಿಂಹನು ಹೇಳಿ ಮುಂದಕ್ಕೆ ಹೊರಟನು. ಉದಯಸಿಂಹನು ಅವನ ಹಿಂದೆ ಹೊರಟನು. ವೀರಸಿಂಹನು ಮಾತ್ರ ಸ್ವಲ್ಪ ಅನುಮಾನಿಸಿ ಹಿಂದೆ ನಿಲ್ಲಲು, ಬಂಪನು ಮಹಾಸ್ವಾಮೀ! ನನ್ನನ್ನು ಕೇಳತಕ್ಕದು ಏನೋ ಇರುವಂತೆ ತೋರುತ್ತದೆ; ಅಪ್ಪಣೆಯಾಗಲಿ ಎಂದನು.

ನೀನು ಓದುತ್ತಲಿದ್ದ ಪುಸ್ತಕವು ಆವುದು?

ಅದು ಭಾರತ ಯುದ್ಧ; ಅದನ್ನು ಓದುವುದೆಂದರೆ ನನಗೆ ಬಹಳ ಇಷ್ಟ.

ಈ ಸ್ಥಳವು ಬಲು ಅಂದವಾಗಿದೆ ಎಂದು ಉದಯಸಿಂಹನು ಹೇಳಲು ಬಂಪನು, ಮಹಾಸ್ವಾಮಿಯವರು ಆವ ವೇಳೆಯಲ್ಲಿ ಇಲ್ಲಿಗೆ ಬಿಜಯಮಾಡಿಸಿದರೂ ಸೇವಕನ್ನು

ಸಿದ್ಧವಾಗಿದ್ದು ತಮ್ಮನ್ನು ಅತ್ಯಾದರದಿಂದ ಕಾಣುವನು ಎಂದು ಮುಂದೆ ಹೋಗುತ್ತಿದ್ದ ಉದಯಸಿಂಹನನ್ನು ಸೇರಿದನು

## ಇಪ್ಪತ್ತೇಳನೆಯ ಅಧ್ಯಾಯ

### ಒಪ್ಪಂದ

ಮಾರನೆಯ ದಿನ ಬೆಳಿಗ್ಗೆ ಉದಯಸಿಂಹನು ಮಲಯಸಿಂಹನನ್ನು ನೋಡಬೇಕೆಂದು ಉದ್ದೇಶಪಟ್ಟು, ವೀರಸಿಂಹನನ್ನೂ ಕರೆದನು ವೀರಸಿಂಹನಿಗೆ ಮಲಯಸಿಂಹನ ವಿಷಯದಲ್ಲಿ ಒಂದು ಒಗೆಯ ಅನುಮಾನವೂ ಭಯವೂ ಇದ್ದುದರಿಂದ ಉದಯಸಿಂಹನೊಡನೆ ಹೋಗಲು ಇಷ್ಟಪಡಲಿಲ್ಲ, ಆದರೂ ಅವನಲ್ಲಿದ್ದ ಒಂದು ವಿಧವಾದ ಅಪೂರ್ವ ಶಕ್ತಿಯು ಇವನ ಮನಸ್ಸನ್ನು ಅವಾಗಲೂ ಅವನ ಬಳಿಗೆ ಸೆಳೆಯುತ್ತಲಿದ್ದಿತು. ಇವನಲ್ಲದೆ ಗೆಳೆಯನೊಬ್ಬನೇ ಹೋದರೆ ಏನು ಅಪಾಯವುಂಟಾದೀತೋ ಎಂದು ದಿಗಿಲುಬಿದ್ದು ಉದಯಸಿಂಹನ ಜತೆಯಲ್ಲಿ ಹೋದನು.

ಇಬ್ಬರೂ ಮಲಯಸಿಂಹನ ಬಿಡಾರವನ್ನು ಸೇರಿದರು ಅವನು ಇವರನ್ನು ಆದರದೊಡನೆ ಬರಮಾಡಿಕೊಂಡು ಆಸನದಲ್ಲಿ ಕುಳ್ಳಿರಿಸಿ ತಾನೂ ಕುಳಿತು ಇದೇನು ಬಿಜಯಮಾಡಿಸಿದುದು ಎಂದು ಕೇಳಲು, ಉದಯಸಿಂಹನು ಸ್ವಾಮೀ ರಾಜರೇ ! ತಾವು ನನಗೆ ಪ್ರಾಣದಾನವನ್ನು ಮಾಡಿದಿರಿ, ನನ್ನ ಪ್ರಾಣವಿರುವವರೆಗೂ ನಿಮ್ಮ ಉಪಕಾರವನ್ನು ಮರೆಯಲಾರೆನು ಎಂದನು.

ಆ ಕಳ್ಳನಿಗೆ ನೀವು ಒಳ್ಳೇ ಆರು ಸಾವಿರ ವರಹಗಳನ್ನು ಕೊಟ್ಟಿದ್ದರೆ ನಿಮ್ಮನ್ನು ಬಿಟ್ಟು ಬಿಡುತ್ತಲಿದ್ದನು ; ನಾನು ಅದನ್ನು ನಿಮಗೆ ಉಳಿಸಿದೆನೇ ಹೊರತು ಬೇರೇನೂ ಇಲ್ಲ. ಅದು ಹಾಗಿರಲಿ , ಅಂತಹ ಆಪತ್ತಿನಲ್ಲಿಯೂ ಕೂಡ ನೀವು ಅಷ್ಟು ಧೈರ್ಯವಾಗಿ ನಿದ್ದೆಮಾಡುತ್ತಿದ್ದುದು ಆಶ್ಚರ್ಯವೇ ಸರಿ ಎಂದು ಮಲಯಸಿಂಹನು ಹೇಳಿದನು

ಉದಯಸಿಂಹನು ಆ ಮಾತನ್ನು ಮರೆಸಿ ನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರಮಾಡಲು ನನ್ನಿಂದಾಗದು; ನನ್ನ ತಂದೆಯಾದ ರಾಜಸಿಂಹನು ಅಮರಪುರದಲ್ಲಿ ಪ್ರಸಿದ್ಧನಾಗಿರುವನು ; ಅವನಿಂದಲೇ ಆಗಲಿ ನನ್ನಿಂದಲೇ ಆಗಲಿ ತಮಗೆ ಏನಾದರೂ ಆಗಬೇಕಾದ

ಕೆಲಸವಿದ್ದಲ್ಲಿ ತಾವು ಒಂದು ಮಾತನ್ನು ಅಪ್ಪಣೆ ಕೊಡಿಸಿದರೆ ನಾವು, ಅದನ್ನು ಶಿರಸಾ ವಹಿಸಿ ನಡೆಸಿಕೊಡುತ್ತೇವೆ

ಹಾಗಾದರೆ ನನಗೊಂದು ಕೆಲಸವನ್ನು ಮಾಡಿಕೊಡುವಿರಾ ?

ಅದೇನು ?

ನಾನು ಅಮರಪುರವನ್ನು ನೋಡಿಲ್ಲ, ಅಲ್ಲಿಗೆ——

ಏನು ! ನಮ್ಮ ಖಂಡದಲ್ಲಿ ಇಂದ್ರಪ್ರಸ್ಥವನ್ನು ಬಿಟ್ಟರೆ ಅಮರಪುರವೇ ದೊಡ್ಡ ಪಟ್ಟಣ, ತಾವು ಇಷ್ಟು ದೇಶಗಳನ್ನು ಸುತ್ತಿಯೂ ಆ ಪಟ್ಟಣವನ್ನು ನೋಡಿಲ್ಲವೇ !

ಇಲ್ಲ, ಅಲ್ಲಿ ನನಗೆ ಯಾರ ಪರಿಚಯವೂ ಇಲ್ಲ.

ತಮ್ಮಂಥವರಿಗೆ ಆರ ಪರಿಚಯವೂ ಬೇಕಾದುದಿಲ್ಲ

ಇದು ಬರಿಯ ಉಪಚಾರದ ಮಾತು. ಆವ ಯೋಗ್ಯತೆಯೂ ಇಲ್ಲದೆ ಧನವೊಂದಿದ್ದರೆ ಏನು ಪ್ರಯೋಜನ ? ನಿಮ್ಮ ಪರಿಚಯವಾದುದು ನನಗೆ ಬಲು ಅನುಕೂಲವಾಯಿತು.

ತಾವು ಅಲ್ಲಿಗೆ ಆವಾಗ ಬಿಜಯಮಾಡಿಸುವಿರಿ ?

ನೀವು ಆವಾಗ ಹೊರಡುವಿರಿ ?

ನನ್ನನ್ನು ಬೇಗನೆ ಬರಹೇಳಿ ನನ್ನ ತಂದೆಯು ಬರೆದಿದ್ದಾನೆ; ಬಹುಶಃ ನನ್ನ ಮದುವೆಯ ಏರ್ಪಾಡು ಮಾಡುವಂತೆ ತೋರುತ್ತಲಿದೆ.

ವಧುವು ಯಾರು ?

ಅಮರಪುರದಲ್ಲಿ ಧನಾಗಾರಪತಿಯೂ ರಾಜಪೂಜಿತರೂ ಆದ ದುರ್ಮತಿಯವರ ಮಗಳು.

ಹಾಗೆಯೇ ! ಸಂತೋಷ. ನೀವು ಎಂದು ಹೊರಡುವಿರಿ ?

ನಾಳೆ ಸಾಯಂಕಾಲ.

ವೀರಸಿಂಹರೋ ?

ಅವರೂ. ಆದರೆ ಅವರು ಅಮರಪುರಕ್ಕೆ ಈಗಲೇ ಬರುವುದಿಲ್ಲ. ಈ ದೇಶದ ಜಲಂಧರಪುರ ಎಂಬ ರೇವುಪಟ್ಟಣದಲ್ಲಿ ಒಂದು ವರ್ಷವಿರಬೇಕೆಂದು ಯೋಚಿಸಿದ್ದಾರೆ.

ನಾಳೆಯ ದಿನ ಹೊರಟರೆ ನೀವು ಅಮರಪುರಕ್ಕೆ ಸೇರುವುದು ಅವಾಗ ?

ಸುಮಾರು ಒಂದು ತಿಂಗಳೊಳಗೆ.

ಹಾಗಾದರೆ ನೀವಲ್ಲಿಗೆ ಹೋದ ಎರಡು ತಿಂಗಳಲ್ಲಿ ನಾನು ಅಲ್ಲಿಗೆ ಬರುತ್ತೇನೆ. ಅಷ್ಟರೊಳಗೆ ಇಲ್ಲಿ ನನ್ನ ಕೆಲಸಗಳನ್ನು ಅನುಕೂಲಮಾಡಿಕೊಳ್ಳುವೆನು.

ಮಲಯಸಿಂಹನು ಹೀಗೆಂದ ಕೂಡಲೆ ವೀರಸಿಂಹನಿಗೆ ಮಲಯದ್ವೀಪದಲ್ಲಿ ನಾವಿಕಸೈಂಧವನು ಸೂಚಿಸಿದ್ದುದು ಜ್ಞಾಪಕಕ್ಕೆ ಬಂದು, ಇವನು ಬಲು ಚತುರ, ಇವನ ಆಳವನ್ನು ಕಂಡು ಹಿಡಿಯುವುದು ಅಸಾಧ್ಯ ಎಂದು ಯೋಚಿಸಿದನು.

ತಾವು ಅಮರಪುರಕ್ಕೆ ಬಿಜಯಮಾಡಿಸುವ ದಿನವನ್ನು ತಿಳಿಸಿದರೆ ನಮ್ಮ ಮನೆ ಯಲ್ಲಿ ಭೋಜನಕ್ಕೆ ಏರ್ಪಾಡಮಾಡಿ ತಮ್ಮ ಆಗಮನವನ್ನು ನಿರೀಕ್ಷಿಸುತ್ತಿರುವೆನು.

ಭೋಜನವು ಬೇಡ; ಫಲಾಹಾರಕ್ಕೆ ಏರ್ಪಾಡಮಾಡಿದರೆ ಸಾಕು. ಇಂದು ವೈಶಾಖ ಶುದ್ಧ ದಶಮಿ, ಬರುವ ಶ್ರಾವಣ ಶುದ್ಧ ದಶಮಿಯದಿನ ಬೆಳಿಗ್ಗೆ ಹತ್ತು ಗಂಟೆಗೆ ಸರಿಯಾಗಿ ನಿಮ್ಮ ದರ್ಶನಲಾಭಕ್ಕಾಗಿ ಬರುವೆನು ನಿಮ್ಮ ಮನೆಯ ಗುರುತು ತಿಳಿದರೆ ಅನುಕೂಲ

ನಿಜ, ಮರೆತೆ. ಅಮರಪುರದ ಉತ್ತರ ರಾಜಬೀದಿಯನಡುವೆ ಇರುವ 'ಸುಖಾ ವಾಸ'ವೆಂಬುದೇ ನಮ್ಮ ಮನೆ ಎಂದು ಉದಯಸಿಂಹನು ಹೇಳಲು, ಮಲಯ ಸಿಂಹನು ಅದನ್ನು ಗುರುತು ಹಚ್ಚಿಕೊಂಡನು. ತರುವಾಯ ಉದಯಸಿಂಹ ವೀರಸಿಂಹ ರಿಬ್ಬರೂ ಅಲ್ಲಿಂದ ಹೊರಟು ತಮ್ಮ ಬಿಡಾರವನ್ನು ಸೇರಿದರು.

ತಾನು ಮಲಯಸಿಂಹನ ಸಂಗಡ ಮಾತನಾಡುತ್ತಲಿದ್ದಾಗ ವೀರಸಿಂಹನು ಆವ ಮಾತನ್ನೂ ಆಡದೆ ಬಹು ಯೋಚನಾಪರನಾಗಿದ್ದುದನ್ನು ನೋಡಿದ್ದ ಉದಯಸಿಂಹನು ಏನಯ್ಯಾ! ಬಹು ಯೋಚನೆಮಾಡುತ್ತಲಿದ್ದೆ ಎಂದು ಕೇಳಲು, ಆವನು ಮಲಯ ಸಿಂಹನು ಬಲು ಸೋಜಿಗದವನು; ನೀನು ಅವನ ಸಂಗಡ ಮಾಡಿಕೊಂಡ ಒಪ್ಪಂದವು ನನಗೇಕೋ ಭಯವನ್ನುಂಟುಮಾಡುತ್ತಲಿದೆ ಎಂದನು.

ನಾನು ಅವನೊಂದಿಗೆ ಮಾಡಿದ ಏರ್ಪಾಡಿನಲ್ಲಿ ಭಯಕ್ಕೆ ಕಾರಣವೇ ಇಲ್ಲ; ನಿನಗೆ ಈಚೆಗೆ ಬುದ್ಧಿಶೂನ್ಯವಾದಂತೆ ತೋರುತ್ತದೆ.

ಏನ ಬೇಕಾದರೂ ಹೇಳು, ನನಗೇನೋ ಅವನ ವಿಷಯದಲ್ಲಿ ಸಂಪೂರ್ಣವಾದ ಅನುಮಾನ.

ಅವನು ನಿನಗೇನಾದರೂ ಕೆಡುಕನ್ನು ಮಾಡಿದ್ದಾನೋ ?

ಇಲ್ಲ

ಹಿಂದೆ ಅವನನ್ನು ಆವಾಗಲಾದರೂ ನೋಡಿದ್ದೆಯೋ ?

ಹೂ ; ನೋಡಿದ್ದೆ.		ಎಲ್ಲಿ, ಆವಾಗ ?

ಆರಿಗೂ ಹೇಳುವುದಿಲ್ಲವೆಂದು ಪ್ರಮಾಣ ಮಾಡಿದರೆ ಹೇಳುತ್ತೇನೆ.

"ಆಗಲಿ"		"ನಿನ್ನಾಣೆಗೂ ?"		"ನನ್ನಾಣೆಗೂ."

ತಾನು ಮಲಯದ್ವೀಪಕ್ಕೆ ಹೋಗಿದ್ದಾಗ ಅಲ್ಲಿ ನಡೆದ ಸಂಗತಿಗಳನ್ನೂ, ಚಕ್ರಭೀಮನಕೋಟೆಯಲ್ಲಿ ನಡೆದ ಸಮಾಚಾರವನ್ನೂ, ಒಂಪನಿಗೆ ಕೊಡಲು ಹಣ ಸಾಲದೇ ಹೋದುದರಿಂದ ಮಲಯಸಿಂಹನ ಒಳಿಗೆ ತಾನು ಹೋದಾಗ ನಡೆದ ವರ್ತಮಾನಗಳನ್ನೂ ಉದಯಸಿಂಹನಿಗೆ ವಿಸ್ತಾರವಾಗಿ ತಿಳಿಸಿದನು. ಎಲ್ಲವನ್ನೂ ಕೇಳಿ ಉದಯಸಿಂಹನು ಇವುಗಳಲ್ಲಿ ನನಗೇನೂ ಅನುಮಾನ ತೋರುವುದಿಲ್ಲ. ಮಲಯಸಿಂಹನು ಧನಿಕನಾದುದರಿಂದ ವಿಹಾರಾರ್ಥವಾಗಿ ಒಂದು ಹಡಗನ್ನೂ, ಬೇಸರಹತ್ತಿದಾಗ ಏಕಾಂತವಾಗಿರಲು ಮಲಯದ್ವೀಪದಲ್ಲಿ ಒಂದು ನಿವಾಸಸ್ಥಾನವನ್ನೂ, ಮಾಡಿಕೊಂಡಿರಬಹುದು ; ಪರಸ್ಥಳದಿಂದ ಬಂದವರನ್ನು ಆದರಿಸುವುದು ಪ್ರತಿಯೊಬ್ಬನಿಗೂ ಕರ್ತವ್ಯ ; ಹೀಗಿರುವಲ್ಲಿ, ನೀನು ಅಲ್ಲಿಗೆ ಅಪೂರ್ವವಾಗಿ ಒಬ್ಬನೇ ಹೋದಾಗ ಅವನು ನಿನಗೆ ಆತಿಥ್ಯಮಾಡಿದನು ; ಇದರಲ್ಲಿ ಅನುಮಾನವೇತಕ್ಕೆ ಎಂದನು.

ಮಲಯದ್ವೀಪದ ಇಬ್ಬರು ಕಳ್ಳರು ?

ಅವರು ಕಳ್ಳರಲ್ಲವೆಂದು ನೀನೇ ಹೇಳಿದೆಯಲ್ಲಾ.

ಅದು ಹೋಗಲಿ ; ಲುಂಗಿಬಂಪನ ಸ್ನೇಹವೋ ?

ಅಪ್ಪಾ ! ಅವನಿಗೆ ಅದಿದ್ದುದರಿಂದ ನಾನು ಬದುಕಿ ಬಂದೆನು; ಆದಕಾರಣ ಅವರವರ ಗೆಳೆತನವನ್ನು ವಿಚಾರಿಸುವುದು ಸರಿಯಲ್ಲ.

ಅವನಾರು ? ಎಲ್ಲಿಯವನು ? ಅವನ ಪೂರ್ವೋತ್ತರವೇನು ? ಅವನಿಗೆ ಮನುರಲ್ಲಿ ದ್ವೇಷವೇತಕ್ಕೆ ? ಅವನು ಅಮರಪುರಕ್ಕೆ ಬರುವ ಉದ್ದೇಶವೇನು ? ಇವುಗ

ಳನ್ನೆಲ್ಲಾ ಚೆನ್ನಾಗಿ ತಿಳಿದುಕೊಳ್ಳದೆ ಅವನ ಸಹವಾಸವನ್ನು ಮಾಡುವುದು ಸರಿಯಲ್ಲ; ನಾನಾಗಿದ್ದರೆ ಹಾಗೆ ಮಾಡುತ್ತಿರಲಿಲ್ಲ.

ನೀನು ನೆನ್ನೆಯದಿನ ನನ್ನ ಕಾಗದವನ್ನು ತೆಗೆದುಕೊಂಡು ಅವನ ಬಳಿಗೆ ಹೋಗಿ ಅವನ ಸಾಹಾಯ್ಯವನ್ನು ಕೋರಿದಾಗ ನಮ್ಮಿಬ್ಬರ ಪೂರ್ವೋತ್ತರಗಳನ್ನು ತಿಳಿದುಕೊಂಡ ಮೇಲೆ ಅವನೇನಾದರೂ ನಿನ್ನ ಸಂಗಡ ಬಂದನೇ? ಇಲ್ಲ, ನೀನು ಕೇಳಿದ ಒಡನೆಯೇ ನಿನ್ನ ಸಂಗಡ ಬಂದನು. ಅವನು ಮನುಷ್ಯರನ್ನು ವಾಸ್ತವವಾಗಿಯೂ ದ್ವೇಷಿಸುವವ ನಾಗಿದ್ದರೆ ಆ ಕಳ್ಳನ ಕಯ್ಯಿಂದ ನನ್ನನ್ನು ಬಿಡಿಸಿಕೊಂಡು ಬರುತ್ತಿದ್ದನೇ? ಅವನ ಉಪ ಕಾರಕ್ಕೆ ಪ್ರತಿಯಾಗಿ ನಮ್ಮೂರಿನ ದೊಡ್ಡ ಮನುಷ್ಯರ ಪರಿಚಯವನ್ನು ಮಾಡಿಕೊಡ ಬೇಕೆಂದು ನನ್ನನ್ನು ಕೇಳಿರುವನು. ಇದರಿಂದೇನು ಅಪಾಯ? ಎನ್ನಲು, ಅವನು ನಿಟ್ಟುಸಿರನ್ನು ಬಿಟ್ಟು ಅಪ್ಪಾ! ನಿನಗೆ ಬದಲು ಹೇಳಲು ನನ್ನಿಂದಾಗದು; ಆದರೂ ಅವನ ರೀತಿಯನ್ನು ನೋಡಿದರೆ ನನಗೇಕೋ ಒಂದು ವಿಧವಾದ ಅನುಮಾನವು ತೋರುತ್ತಿದೆ ಎಂದನು

ಹೋಗಲಿ ಬಿಡಪ್ಪ! ಆ ಪ್ರಸ್ತಾಪವೇಕೆ? ನಾಳೆಯ ಪ್ರಯಾಣಕ್ಕೆ ಬೇಕಾದ ಏರ್ಪಾಡನ್ನು ಮಾಡಿಕೊಳ್ಳೋಣ.

ಮರುದಿನ ಸಾಯಂಕಾಲ ಉದಯಸಿಂಹನು ಅಮರಪುರಕ್ಕೂ ವೀರಸಿಂಹನು ಜಲಂಧರಪುರಕ್ಕೂ ಪ್ರಯಾಣಮಾಡಿದರು ಉದಯಸಿಂಹನು ಹೊರಟು ಒಂದು ತಿಂಗಳೊಳಗೆ ಸುಖಾವಾಸವನ್ನು ಸೇರಿದನು.

ಸುಖಾವಾಸವೆಂಬುದು ಅಮರಪುರದಲ್ಲಿ ಒಂದು ದೊಡ್ಡ ಮನೆ ಅದನ್ನು ರಾಜ ಸಿಂಹನು ಕಟ್ಟಿಸಿ ಅಲ್ಲಿ ವಾಸಮಾಡುತ್ತಿದ್ದನು. ಮುಂಭಾಗದಲ್ಲಿ ರಾಜಬೀದಿ; ಮಿಕ್ಕ ಮೂರು ಕಡೆಗಳಲ್ಲಿ ತೋಟ, ಅವನ ಪತ್ನಿಯಾದ ರಾಧಾಬಾಯಿಯ ಜಾಣ್ಮೆಯಿಂದ ಮನೆಯೂ ತೊಟವೂ ನೋಡುವವರೆಲ್ಲರಿಗೂ ಅನಂದವನ್ನುಂಟುಮಾಡುವಂತೆ ಅಚ್ಚು ಮೆಚ್ಚಾಗಿದ್ದುವು.

ಉದಯಸಿಂಹನು ಒಬ್ಬನೇ ಮಗನಾದುದರಿಂದ ತಂದೆತಾಯಿಗಳು ಅವನನ್ನು ಅತಿಪ್ರೀತಿಯಿಂದ ಸಾಕುತ್ತಲಿದ್ದರು. ಶ್ರೀಮಂತರಾದುದರಿಂದ ಅವನು ಕೇಳುವಷ್ಟು ಧನವನ್ನು ಕೊಟ್ಟು, ಅವನ ಇಷ್ಟದಂತೆ ಬಿಟ್ಟಿದ್ದರು. ಇದೂ ಅಲ್ಲದೆ, ಅವನ ಸ್ನೇಹಿತರು

ಧಾರಾಳವಾಗಿ ಬಂದು ಹೋಗುವುದಕ್ಕೆ ಅನುಕೂಲವಾಗಿ ನಾಲ್ಕು ಕೊಟ್ಟಡಿಗಳನ್ನು ಬಿಟ್ಟುಕೊಟ್ಟಿದ್ದರು.

ಉದಯಸಿಂಹನ ಕೊಟ್ಟಡಿಯಿಂದ ತೋಟಕ್ಕೆ ಹೋಗುವುದಕ್ಕೂ, ಕೋಟದಿಂದ ಹೆಬ್ಬಾಗಿಲನ್ನು ತೆರೆಯದೆ ಹೊರಗೆ ಹೋಗುವುದಕ್ಕೂ ಎರಡು ದಿಡ್ಡಿಬಾಗಿಲುಗಳಿದ್ದುವು. ಒಂದು ಬಾಗಿಲಿನಿಂದ ಮತ್ತೊಂದು ಬಾಗಿಲವರೆಗೆ ಮಾಡಿದ್ದ ಸಣ್ಣ ಕಾಲುಹಾದಿಯ ಉದ್ದಕ್ಕೂ ಎರಡು ಕಡೆಯಲ್ಲಿಯೂ ಕಲ್ಲುಕಂಬಗಳನ್ನು ನಿಲ್ಲಿಸಿ, ಅವುಗಳ ಮೇಲೆ ಕಬ್ಬಿಣದ ಕಂಬಿಗಳನ್ನು ಹಾಕಿ, ಆ ಕಂಬಗಳ ಮೇಲೆ ಅಲಂಕಾರಕ್ಕಾಗಿ ವಾಸನೆಯಾಗಿಯೂ ಮನೋಹರವಾಗಿಯೂ ಇರುವ ಹೂಬಳ್ಳಿಗಳನ್ನು ಹಬ್ಬಿಸಿದ್ದರು. ಅವು ದಪ್ಪವಾಗಿ ಬೆಳೆದಿದ್ದುದರಿಂದ ಇತರರಿಗೆ ಆ ದಾರಿಯಲ್ಲಿ ಓಡಾಡುವವರು ಕಾಣುತ್ತಿರಲಿಲ್ಲ. ಈ ಎರಡು ಬಾಗಿಲುಗಳ ಬೀಗದಕ್ಕೆಗಳು ಉದಯಸಿಂಹನ ಅಂತರಂಗನಾದ ಸೂಕ್ಷ್ಮಬುದ್ಧಿ ಎಂಬ ಕೂಳಿಗದವನ ಹತ್ತಿರ ಇರುತ್ತ, ರಾತ್ರಿಯಲ್ಲಿ ಸ್ವೈರಿಣಿಯರಾದ ರಮಣಿಯರು ತಮ್ಮ ಸುಸ್ವರದಿಂದ ಕೂಗಿದ ಹೊರತು ಆ ಬಾಗಿಲುಗಳು ತೆರೆಯಲ್ಪಡುತ್ತಿರಲಿಲ್ಲ.

ಮಲಯಸಿಂಹನು ಬರುವನೆಂದು ಉದಯಸಿಂಹನು ಕೈಲಾದವರೆಗೂ ಆ ಕೊಟ್ಟಡಿಗಳನ್ನು ಅಲಂಕರಿಸಿದ್ದನು ಅವನ ಆಗಮನವು ಸಮೀಪಿಸುತ್ತ ಬಂದ ಹಾಗೆಲ್ಲಾ ಇವನ ಏರ್ಪಾಡುಗಳು ಪೂರೈಸುತ್ತ ಬಂದುವು ಉದಯಸಿಂಹನಿಗೆ ಶ್ರಾವಣ ಶುದ್ಧ ನವಮಿಯ ದಿನವೆಲ್ಲಾ ಫಲಾಹಾರದ ಪದಾರ್ಥಗಳನ್ನು ಒದಗಿಸಿಕೊಳ್ಳುವುದರಲ್ಲಿಯೇ ಆಯಿತು. ದಶಮಿಯದಿನ ಬೆಳಿಗ್ಗೆ ಮಲಯಸಿಂಹನ ಜತೆಯಲ್ಲಿರಲು ತಕ್ಕ ಸ್ನೇಹಿತರು ಕೆಲವರನ್ನು ಕರೆಯುವುದಕ್ಕೆ ಸುಮಾರು ಎಂಟುಗಂಟೆಯವರಗೆ ಹೋಗಿದ್ದು, ಸತ್ಕಾರಕ್ಕೆ ಸಿದ್ಧಪಡಿಸಿಕೊಂಡನು.

ಬೆಳಿಗ್ಗೆ ಸುಮಾರು ಒಂಭತ್ತುವರೆ ಗಂಟೆಯ ಸಮಯದಲ್ಲಿ ಸೂಕ್ಷ್ಮಬುದ್ಧಿಯು ಆ ದಿನ ಬಂದ ವೃತ್ತಾಂತ ಪತ್ರಿಕೆಗಳನ್ನೂ ಕಾಗದಗಳನ್ನೂ ತಂದು ಉದಯಸಿಂಹನಿಗೆ ಕೊಟ್ಟನು. ಅವನು ಪತ್ರಿಕೆಗಳನ್ನೆಲ್ಲಾ ಮೇಜಿನಮೇಲೆ ಇಟ್ಟು ವಾಸನೆ ಹಚ್ಚಿ ಹೆಂಗಸರು ಬರೆದಿದ್ದಂತಿದ್ದ ಎರಡು ಕಾಗದಗಳನ್ನು ಮೊದಲು ತೆಗೆದು ಓದಿ, ಕಿಂಕರನನ್ನು ಕುರಿತು ಎಲೋ ಸೂಕ್ಷ್ಮಬುದ್ಧಿ! ತಾರಾಬಾಯಿಗೆ ಬೇಕಾದ ಪದಾರ್ಥಗಳನ್ನು ಅಂಗಡಿ

ಯಿಂದ ತಂದುಕೊಡು; ಈ ರಾತ್ರಿ ಎಂಟುಗಂಟೆಗೆ ಅಲ್ಲಿಗೇ ಊಟಕ್ಕೆ ಬರುವೆನೆಂದು ಹೇಳು. ವಿಲಾಸಿನಿಯ ಪರಿಚಾರಕನೊಡನೆ ಅವನ ಒಡತಿಯ ಇಷ್ಟದಂತೆ ಈ ರಾತ್ರಿ ನಾಟಕಕ್ಕೆ ಒಂಭತ್ತುಗಂಟೆಗೆ ಬರುವೆನೆಂದು ಹೇಳಿ ಕಳುಹಿಸು. ಎಂದನು.

ಮಹಾಸ್ವಾಮಿ! ಅಪ್ಪಣೆ; ಫಲಾಹಾರವು ಎಷ್ಟು ಹೊತ್ತಿಗೆ?

ಹತ್ತುಗಂಟೆಗೆ ತಾಯಿಯವರು ಏನಮಾಡುತ್ತಲಿದ್ದಾರೆ?

ನೋಡಿಬರುವೆನು.

ಹಾಗೆಯೇಮಾಡು; ಬರುವಾಗ ನಾನು ಕೇಳಿದೆನೆಂದು ಹೇಳಿ ಚಿನ್ನದ ದೊಡ್ಡ ತಾಂಬೂಲದ ತಟ್ಟೆಯನ್ನು ತೆಗೆದುಕೊಂಡು ಬಾ.

ಒಳಿಕ ಉದಯಸಿಂಹನು ಗಡಿಯಾರವನ್ನು ನೋಡಿ ಮಲಯಸಿಂಹನ ಆಗಮನಕ್ಕೆ ಇನ್ನೂ ಸಾವಕಾಶವಿರುವುದೆಂದು ತಿಳಿದು ವೃತ್ತಾಂತಪತ್ರಿಕೆಗಳನ್ನು ಒಂದೊಂದಾಗಿ ಬಿಚ್ಚಿನೋಡಿ, ತಾನು ಕೇಳಿದ್ದ ಪ್ರಸಿದ್ಧವಾದ ಹಲ್ಲುಪುಡಿಯ ಪ್ರಕಟನೆಯು ಅವುಗಳಲ್ಲಿ ಇಲ್ಲದಿರುವುದನ್ನು ಕಂಡು, ಏಕೋ ಬರುತ್ತಬರುತ್ತ ಈ ಪತ್ರಿಕೆಗಳು ದರಿದ್ರಗಳಾಗಿ ಹೋದುವು ಎಂದು ಅವುಗಳನ್ನೆಲ್ಲಾ ಒಂದು ಕಡೆ ಬಿಸುಟನು

ಈ ವೇಳೆಗೆ ಸರಿಯಾಗಿ ಆಳು, ದಮನಕರು ಬಂದರು ಎಂದನು; ಕೂಡಲೇ ಆತನೂ ಒಳಕ್ಕೆ ಬಂದನು. ಅವನು ಮೂವತ್ತು ವಯಸ್ಸಿನವನು, ತೆಳ್ಳಗೆ ಉದ್ದವಾಗಿದ್ದನು; ನಡೆನುಡಿಗಳು ರಾಜ್ಯಾಂಗದಲ್ಲಿ ಆತನಿಗಿದ್ದ ಮಹತ್ವದನಿಯನ್ನು ತೋರುತ್ತಿದ್ದುವು. ಅವನು ಒಳಗೆ ಬರುತಲೆ ಉದಯಸಿಂಹನು ಓಹೋ ದಮನಕ! ಇದೇನು? ಯಾವಾಗಲೂ ಕಡೆಯಲ್ಲಿ ಬರತಕ್ಕವನು ಈ ದಿನ ಎಲ್ಲರಿಗೂ ಮೊದಲು ಬಂದೆ? ನಿಮ್ಮ ಪ್ರಧಾನನು ಕೆಲಸದಿಂದ ನಿವೃತ್ತನಾದನೋ? ಎನ್ನಲು, ಅಯ್ಯಾ! ನನಗೆ ಬಹಳ ಹಸಿವು, ಅದಕ್ಕಾಗಿ ಜಾಗ್ರತೆಯಾಗಿ ಬಂದೆನು. ನಮ್ಮ ಯಜಮಾನನ ಅಧಿಕಾರಕ್ಕೆ ಚ್ಯುತಿಯಿಲ್ಲವೆಂದು ತಿಳಿ. ಅವನು ಯಾವಾಗಲೂ ವೇಗವಾಗಿ ನಡೆಯುತ್ತಲಿದ್ದರೂ ಮುಗ್ಗರಿಸಿ ಕೆಳಗೆ ಬೀಳನು ಎಂದನು.

ಪಕ್ಕದ ರಾಜ್ಯದ ಅರಸಾದ ದಾನಚರಣನನ್ನು ಓಡಿಸುವ ಪ್ರಯತ್ನವೇನಾಯಿತು?

ಅವನನ್ನು ನಾವು ಓಡಿಸಲಿಲ್ಲ ಅತ್ತಲಿಂದ ಸೆರೆತಂದು ಇತ್ತ ಒಂದು ಭದ್ರವಾದ ಕೋಟೆಯಲ್ಲಿ ಮೂರು ದಿನಗಳ ಮುಂಚೆ ಇರಿಸಿ, ಹಿಂದೆ ರಾಜ್ಯವಾಳುತ್ತಿದ್ದ ರಾಜಪಿಂಡೆ ಯುವನೊಬ್ಬನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದೆವು

ದುರ್ಮತಿಗೆ ಈ ಸಮಾಚಾರವು ಹೇಗೋ ಗೊತ್ತಾಗಿ ಅದರಿಂದ ವಿಶೇಷಲಾಭ ವನ್ನು ಸಂಪಾದಿಸಿದನೆಂದು ಹೇಳುತ್ತಾರೆ, ಅದು ನಿಜವೋ?

ನಿಜ ಅವನಿಗೆ ಇಂತಹ ಸಮಾಚಾರಗಳು ಹೇಗೋ ಪ್ರಧಾನನಿಗಿಂತ ಮೊದಲು ತಿಳಿದು ತನ್ನ ಹತ್ತಿರ ಇದ್ದ ದಾನಚರಣನ ಪತ್ರಗಳನ್ನು ಮಾರಿ ಇದುವರೆಗೆ ಬೆಲೆಯಾ ಗದೆ ಇದ್ದ ಹಳೆಯ ರಾಜರ ಪತ್ರಗಳನ್ನು ಕೊಂಡು ಎರಡು ಲಕ್ಷ ವರಹಗಳನ್ನು ಸಂಪಾ ದಿಸಿದನು.

ಅದರಲ್ಲಿ ನಿನಗೇನೂ ಪ್ರಯೋಜನವಾಗಲಿಲ್ಲವೋ?

ನನಗೇನು ಪ್ರಯೋಜನ ಎಂದು ದಮನಕನು ಉದಯಸಿಂಹನ ಮುಖವನ್ನು ದೃಷ್ಟಿಸಿ ನೋಡಿದನು

ನಿನ್ನ ಅಂಗಿಯ ಮೇಲೆ ಹಾಕಿಕೊಂಡಿರುವ ಬಿರುದಿನ ಬಿಲ್ಲೆಯೇ ನಿನಗಾದ ಪ್ರಯೋಜನವನ್ನು ವ್ಯಕ್ತಪಡಿಸುತ್ತದೆ

ಇದೇನು ಹಣಕಾಸಿಲ್ಲದ ಬರಿಯ ಅಲಂಕಾರ.

ಇಂತಹ ಅಲಂಕಾರಕ್ಕಾಗಿಯೇ ಜನರು ಎಷ್ಟೋ ಹಣವನ್ನು ವೆಚ್ಚಮಾಡಿ ಸರ್ಕಾ ರದ ಉದ್ಯೋಗಸ್ಥರ ಬಳಿಗೆ ಹೋಗಿ, ನಿಹೀನವಾದ ಸೇವಾವೃತ್ತಿಯನ್ನು ಕೂಡ ಮಾಡುವರು ಎಂದು ಉದಯಸಿಂಹನು ಹೇಳುತ್ತಲಿರುವಾಗ, ಆ ಪಟ್ಟಣದ ಮುಖ್ಯ ಪತ್ರಿಕಾಸಂಪಾದಕನಾದ ಭದ್ರಸಿಂಹನು ಒಂದನು. ಅವನು ಉದಯಸಿಂಹ ದಮನಕ ರಿಬ್ಬರೇ ಇದ್ದುದನ್ನು ನೋಡಿ, ನನಗೆ ಹಸಿವಾಗುತ್ತಲಿದೆ, ಎಷ್ಟು ಹೊತ್ತಿಗೆ ಫಲಾಹಾರ ಮಾಡುವೆವು ಎಂದು ಉದಯಸಿಂಹನನ್ನು ಕೇಳಿದುದಕ್ಕೆ, ಹತ್ತು ಗಂಟೆಗೆ, ಎಂದನು.

ಅದು ವರೆಗೆ ಕಾಯಬೇಕೇ?

ಎಲೋ ಭದ್ರಸಿಂಹ! ದಮನಕನ ಪ್ರತಿಕಕ್ಷಿಯಾಗಿದ್ದೂ ನೀನೂ ಅವನಂತೆ ಹೊತ್ತಾಗುತ್ತದೆಂದು ವಿಷಾದಪಡುತ್ತೀಯಾ? ಅವನು ಹಾಗಿದ್ದರೆ ನೀನು ನ್ಯಾಯವಾಗಿ ಉತ್ಸಾಹದಲ್ಲಿರಬೇಕು.

ಪ್ರತಿಕಕ್ಷಿಯಾಗಿದ್ದರೂ ಅವನಂತೆ ನಾನೂ ಮನುಷ್ಯನೇ. ಹಸಿವನ್ನು ತಡೆಯಲು ಆರಿಂದ ಸಾಧ್ಯ ? ಈ ದಿನ ಮಧ್ಯಾಹ್ನ ಅರ್ಥಶಾಸ್ತ್ರಪರಿಣತನಾದ ದುರ್ಮತಿಯು ಧನಾರ್ಜನೆಯ ವಿಚಾರವಾಗಿ ಉಪನ್ಯಸಿಸುವನಂತೆ ; ಆ ಉಪನ್ಯಾಸದ ಗುಣದೋಷಗಳನ್ನು ವಿಚಾರಮಾಡಿ ನನ್ನ ಪತ್ರಿಕೆಯಲ್ಲಿ ಪ್ರಕಟಿಸಬೇಕು. ಆದುದರಿಂದ ಬೇಗ ಹೋಗಬೇಕು.

ಅವನಿಗೆಲ್ಲಿಯ ಶಾಸ್ತ್ರಪರಿಚಯ? ಅದೃಷ್ಟವಿದ್ದುದರಿಂದ ಐಶ್ವರ್ಯವಂತನಾದನು; ಐಶ್ವರ್ಯಕ್ಕಾಗಿ ಅವನಿಗೆ ಆ ಬಿರುದು ಬಂದಿತು ಎಂದು ದಮನಕನು ಹೇಳಲು, ಭದ್ರಸಿಂಹನು ಅದಕ್ಕಾಗಿಯೇ 'ಪರಿಣತನು' ಎಂದು ನಾನು ಮರ್ಯಾದೆಯಿಂದ ಹೇಳಿದುದು ಎಂದನು.

ಅಪ್ಪಾ ಭದ್ರಸಿಂಹ ! ಅವನ ಮಗಳನ್ನು ನನಗೆ ಮದುವೆಮಾಡಿ ಕೊಡುವುದಾಗಿ ಏರ್ಪಾಡು ನಡೆಯುತ್ತಲಿದೆ. ನನ್ನ ಮಾವನನ್ನು ನೀನು ಪರಿಹಾಸ್ಯಮಾಡಬಹುದೇ ? ಇದೂ ಅಲ್ಲದೆ ಅವನು ನಿನ್ನ ಕಕ್ಷಿಗೇ ಸೇರಿದವನು.

ನಿಜ, ನಿಜ ; ದುರ್ಮತಿಯು ಮಗಳಿಗೆ ಎರಡು ಲಕ್ಷ ವರಹಗಳ ಸ್ತ್ರೀಧನವನ್ನು ಕೊಡುತ್ತಾನಂತೆ ; ಅದಕ್ಕಾಗಿ ಆ ದುಂದುಭಿಯನ್ನು ನೀನು ಮದುವೆಯಾಗುವುದಾಗಿ ಊರೆಲ್ಲ ವರ್ತಮಾನವಿದೆ. ಅವನು ಹಣವನ್ನೇನೋ ತುಂಬ ಸಂಪಾದಿಸಿದ್ದಾನೆ ; ದೊರೆಗೆ ವಿಶೇಷವಾಗಿ ಸಾಲಕೊಟ್ಟಿರುವುದರಿಂದ ಅನೇಕ ಮರ್ಯಾದೆಗಳೂ ಬಿರುದಗಳೂ ಬಂದಿವೆ; ಆದರೂ ಅವನನ್ನು ದೊಡ್ಡ ಮನುಷ್ಯನೆಂದು ಯಾರು ತಾನೇ ಗಣಿಸುವರು ?

ಅವನು ಹೇಗಿದ್ದರೇನು ? ನಾನು ಅವನ ಮಗಳನ್ನು ಮದುವೆಯಾಗುವೆನಲ್ಲದೆ ಅವನನ್ನು ಬೇರೆ ಮದುವೆಯಾಗುವುದಿಲ್ಲ. ಎರಡು ಲಕ್ಷ ವರಹಗಳು ಸಿಕ್ಕುವುದಾದರೆ ಆರು ತಾನೇ ಅವಳನ್ನು ತಿರಸ್ಕರಿಸುವರು ?

ಆಗ ದಮನಕನು ಉದಯಸಿಂಹನನ್ನು ನೋಡಿ ಭದ್ರಸಿಂಹನ ಮಾತನ್ನು ನೀನು ಕೇಳಬೇಡ. ಈ ಕಾಲದಲ್ಲಿ ಹಣವೇ ಮುಖ್ಯ. ಅದೊಂದಿದ್ದರೆ ದಡ್ಡನು ಬುದ್ಧಿವಂತನು ; ನೀಚನು ದೊಡ್ಡವನು , ಕಳ್ಳನು ಯೋಗ್ಯನು ; ಜಾರೆಯರು ಪತಿವ್ರತೆಯರು,

ಪಣಮುಳ್ಳವನೆ ಕುಲೀನಂ ।
ಗುಣಿ ರೂಪಾಢ್ಯಂ ಸಮಸ್ತವಿದ್ಯಾನಿಪುಣಂ ॥
ಎಣಿಸಲ್ ವಾಗ್ಮಿಯುಮಾತನೆ ।
ಗುಣಮೆಲ್ಲಂ ಜಗದೆ ಪಣಮನಾಶ್ರಯಿಸಿರ್ಕುಂ ॥

ಎಂದಲ್ಲವೆ ಭರ್ತೃಹರಿಯು ಹೇಳಿರುವನು ಎನ್ನಲು, ಭದ್ರಸಿಂಹನು ಗುಣ, ನಡತೆ, ಆಚಾರ ವ್ಯವಹಾರ, ಸತ್ಯ, ಇವುಗಳಿಲ್ಲದೆ ಬರಿಯ ಹಣವುಳ್ಳವನ ಜನ್ಮವನ್ನು ಸುಡಬೇಕು. ಅಂಥವನ ಮಗಳನ್ನು ಹಣಕ್ಕಾಗಿ ಮದುವೆಯಾಗುವುದಕ್ಕಿಂತಲೂ, ದುಡ್ಡಿಲ್ಲದ ಶೀಲ ವಂತನ ಮಗಳನ್ನು ಮದುವೆಯಾಗಿ ಭಿಕ್ಷಬೇಡಿ ಜೀವಿಸುವುದು ಮೇಲು ಎಂದನು.

ಅದಿರಲಿ ; ದುರ್ಮತಿಯು ಮಗಳನ್ನು ದುಂದುಭಿಯೆಂದೆಯಲ್ಲಾ, ಅದೇನು ಅವಳ ಹೆಸರೋ ?

ಅವಳ ತಂದೆಯು ಅವಳಿಗೆ ವಿಲಾಸಿನಿ ಎಂದು ಹೆಸರಿಟ್ಟಿದಾನೆ, ಆದರೆ ದುರ್ಮತಿ ಯಾದ ಬಳಿಕ ದುಂದುಭಿ ತಾನೆ !

ಈ ವೇಳೆಗೆ ಮಹಾಸ್ವಾಮೀ, ಚಿತ್ರಸೇನ ಜಯವೀರರು ಬಿಜಯಮಾಡಿದರು ಎಂದು ಆಳು ಸೂಚಿಸಲು, ಉದಯಸಿಂಹನು ಜಯವೀರನಾರು ಎಂದು ಯೋಚಿಸು ವುದರಲ್ಲಿಯೇ ಚಿತ್ರಸೇನನು ಬಂದು, ಅಪ್ಪಾ ಉದಯ, ನಿನ್ನ ಸ್ನೇಹಿತನೆಂದು ನೀನು ನನ್ನನ್ನು ಕರೆದೆ; ನಾನು ಜತೆಯಲ್ಲಿ ನನ್ನ ಸ್ನೇಹಿತ ಜಯವೀರನನ್ನು ಕರೆದುಕೊಂಡು ಬಂದೆನು , ಇವನು ನನ್ನ ಪ್ರಾಣವನ್ನು ಕಾಪಿಟ್ಟವನು ಎಂದನು.

ನಿನ್ನ ಸ್ನೇಹಿತನು ನಮಗೆಲ್ಲರಿಗೂ ಸ್ನೇಹಿತನೇ ಎಂದು ಎಲ್ಲರೂ ಎದ್ದು ಜಯ ವೀರನಿಗೆ ತಕ್ಕ ಮರ್ಯಾದೆಯನ್ನು ಮಾಡಿ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು.

ಏನಪ್ಪಾ ಚಿತ್ರಸೇನ, ಇವನು ನಿನ್ನ ಪ್ರಾಣವನ್ನು ಕಾಪಿಟ್ಟನೆಂದು ಹೇಳಿದಿ ಯಲ್ಲಾ, ಅದೇನು, ಎಂದು ಭದ್ರಸಿಂಹನು ಕೇಳಲು, ಜಯವೀರನು ಅಂತಹ ದೊಡ್ಡ ಕಾರ್ಯವಾವುದೂ ಇಲ್ಲ; ಚಿತ್ರಸೇನನು ಉತ್ತಮಪುರುಷನಾದುದರಿಂದ ತೃಣವನ್ನೂ ಪರ್ವತವನ್ನಾಗಿ ಮಾಡಿ ಹೇಳಿರುವನು ಎಂದನು.

ಅಪ್ಪಾ ಭದ್ರ ! ನಡೆದ ಸಂಗತಿಯನ್ನು ಹೇಳುತ್ತೇನೆ, ನಾನು ಉತ್ತಮ ಪುರು ಷನೋ ಇವನು ಉತ್ತಮ ಪುರುಷನೋ ನೀನೇ ಹೇಳು. ನಮ್ಮ ಸೈನ್ಯಕ್ಕೂ ಪಿಂಡಾರ

ಸೈನ್ಯಕ್ಕೂ ಈಚೆಗೆ ಯುದ್ಧ ನಡೆದ ಸಂಗತಿಯನ್ನು ನೀನು ಬಲ್ಲೆಯಷ್ಟೆ, ಆ ಯುದ್ಧದಲ್ಲಿ ನಾವಿಬ್ಬರೂ ಜತೆಯಲ್ಲಿಯೇ ಇರುತ್ತಲಿದ್ದೆವು ಒಂದಾನೊಂದು ದಿನ ಏಳೆಂಟು ಪಿಂಡಾರರನ್ನು ನಾನೊಬ್ಬನೇ ತರುಬಿಕೊಂಡು ಹೋದಾಗ ಅವರಲ್ಲಿ ಒಬ್ಬನು ನನ್ನ ಮೇಲೆ ತುಪಾಕಿಯನ್ನು ಹಾರಿಸಿದನು. ದೈವಾಧೀನದಿಂದ ನನ್ನ ಕುದುರೆಗೆ ಗುಂಡು ತಗಲಿ ಅದು ಸತ್ತು ಬೀಳಲು, ನಾನೂ ಕೆಳಗೆ ಬಿದ್ದೆನು. ನನ್ನ ಬಲಗಾಲು ಕುದುರೆಯ ಅಡಿಗೆ ಸಿಕ್ಕಿ ಜಜ್ಜಿಹೋಯಿತು. ಕಷ್ಟದಿಂದ ಏಳುವುದರೊಳಗಾಗಿ, ಅವರು ನನ್ನನ್ನು ಸುತ್ತಿಕೊಂಡು ತಮ್ಮ ಕತ್ತಿಗಳನ್ನೆತ್ತಿ ನನ್ನ ತಲೆಯ ಮೇಲೆ ಬಿಡುವುದರೊಳಗಾಗಿ ಇವನು ಎಲ್ಲಿಂದಲೋ ಓಡಿ ಬಂದು ಅವರ ಕೈಗಳನ್ನು ಒಂದೇ ಪೆಟ್ಟಿನಲ್ಲಿ ಕಡಿದು ನನ್ನನ್ನು ಎತ್ತಿಕೊಂಡು ಹೋಗಿ ನಮ್ಮ ಸೈನ್ಯದಲ್ಲಿ ಬಿಟ್ಟನು. ಆ ವೇಳೆಯಲ್ಲಿ ಇವನು ಬಾರದಿದ್ದರೆ ನಾನು ಯಮಪಟ್ಟಣವನ್ನು ಸೇರುತ್ತಲಿದ್ದೆನು ಎಂದನು.

ಚಿತ್ರಸೇನನು ಹೀಗೆನ್ನುತಲೆ, ಜಯವೀರನು ಅಂದು ಮಾರ್ಗಶಿರ ಶುದ್ಧ ಪಂಚಮಿ; ಹಿಂದೆ ನನ್ನ ತಂದೆಯವರು ತಮ್ಮ ಹಡಗುಗಳೆಲ್ಲಾ ಮುಳುಗಿ, ಹಣವನ್ನಿಟ್ಟಿದ್ದ ಧನಾಗಾರಗಳೆಲ್ಲಾ ದಿವಾಳಿಯಾಗಿ, ಮಾಡಿದ ಸಾಲಗಳನ್ನು ಹರಿಸಲಾರದೆ, ಮಾನ ಕಳೆದುಕೊಂಡಿರುವುದಕ್ಕಿಂತಲೂ ಪ್ರಾಣ ಬಿಡುವುದೇ ಲೇಸೆಂದು ಪ್ರಾಣಬಿಡಲು ಸಿದ್ಧರಾಗಿದ್ದಾಗ, ಅವನೋ ಒಬ್ಬ ಮಹಾತ್ಮನು ಆರಿಗೂ ತಿಳಿಯದಂತೆ ಸಾಲವನ್ನೆಲ್ಲಾ ತೀರಿಸಿ ವಿಪತ್ತಿನಿಂದ ಉದ್ಧರಿಸಿ ಸಾಹಾಯ್ಯಮಾಡಿದನು ಆದುದರಿಂದ ಪ್ರತಿವರ್ಷವೂ ಆ ದಿನ ನಾನು ಅವುದಾದರೂ ಒಂದು ಒಳ್ಳೆಯ ಕೆಲಸವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ ಎಂದನು.

ಅಂತಹ ಮಹಾಪುರುಷನಾರಪ್ಪ! ಎಂದು ಎಲ್ಲರೂ ಕೇಳಲು ಅವನಾವನೋ ಗೊತ್ತಿಲ್ಲ ಎಂದನು.

ಉಪಕಾರಮಾಡಿದರೆ ಹೀಗೆ ಮಾಡಬೇಕು ಎಂದು ಎಲ್ಲರೂ ಆಶ್ಚರ್ಯಪಟ್ಟರು.

ಆಗ ಭದ್ರಸಿಂಹನು ಉದಯಸಿಂಹನನ್ನು ನೋಡಿ ಏನಪ್ಪಾ! ನನಗೆ ಹಸಿವು ಎಂದರೆ ಕಥೆಗಳನ್ನು ಹೇಳಿ ಕಾಲಹರಣ ಮಾಡುತ್ತಿರುವುದನ್ನು ನೋಡಿದರೆ ಇನ್ನೂ ಫಲಾಹಾರಕ್ಕೆ ಸಿದ್ಧವಾಗಿಲ್ಲವೆಂದು ತೋರುತ್ತದೆ ಎಂದನು. ಅದಕ್ಕೆ ಉದಯಸಿಂಹನು ಇನ್ನೂ ಹತ್ತು ಗಂಟೆಯಾಗಿಲ್ಲ, ನನ್ನನ್ನು ರಕ್ಷಿಸಿದವನೊಬ್ಬ ಮಹಾಪುರುಷನು ಹತ್ತು

ಗಂಟೆಗೆ ಸರಿಯಾಗಿ ಇಲ್ಲಿಗೆ ಬರುವೆನೆಂದು ಹೇಳಿದ್ದಾನೆ. ಅದುವರೆಗೆ ಆ ಕಥೆಯನ್ನು ಹೇಳುತ್ತೇನೆ ಕೇಳು ಎನ್ನಲು, ದಮನಕನು ಇಂತಹ ಉಪಕಾರಿಗಳಿಗೆ ನಮ್ಮ ರಾಜನು ವರ್ಷಕ್ಕೊಮ್ಮೆ ಒಂದು ಬಹುಮಾನವನ್ನು ಕೊಡುವ ಏರ್ಪಾಡ ಮಾಡಿದ್ದಾನೆ; ಈ ವರ್ಷ ಆ ಬಹುಮಾನಕ್ಕೆ ಇಬ್ಬರಿರುವುದರಿಂದ ಅದನ್ನು ಆರಿಗೆ ಕೊಡುವುದು ಎಂದನು.

ಒಡನೆಯೇ ಭದ್ರಸಿಂಹನು ನಿಮ್ಮ ರಾಜನು ಕೊಡುವುದು ತಿಳಿದೇ ಇದೆ; ಅವನೋ ಒಬ್ಬ ಅಯೋಗ್ಯನಿಗೆ ತಾನೇ ಎನ್ನಲು, ಎಲ್ಲರೂ ಗೊಳ್ ಎಂದು ನಕ್ಕರು.

ನಿನ್ನ ಪ್ರಾಣದಾತನು ಎಲ್ಲಿಂದ ಬರುವನು ಎಂದು ದಮನಕನು ಕೇಳಲು, ಉದಯಸಿಂಹನು ಅವನು ಆಗ ಇಂದ್ರಪ್ರಸ್ಥದಲ್ಲಿದ್ದನು, ಈಗೆಲ್ಲಿದಾನೆಯೋ ಕಾಣೆ ಎಂದನು.

ಅವನು ಬರುವುದು ಖಂಡಿತವೋ ?

ಖಂಡಿತವಾಗಿಯೂ ಬರುತ್ತೇನೆಂದು ಹೇಳಿದ್ದಾನೆ.

ಅವನ ಕಥೆಯು ನನ್ನ ಪತ್ರಿಕೆಯಲ್ಲಿ ಪ್ರಕಟಿಸಲು ಸ್ವಾರಸ್ಯವಾಗಿದ್ದರೆ ಹೇಳು ಎಂದು ಭದ್ರಸಿಂಹನು ಕೇಳಲು,

ಕಥೆಯನ್ನು ಕೇಳಿದ ಮೇಲೆ ಸ್ವಾರಸ್ಯವೋ ಇಲ್ಲವೋ ನಿಮಗೇ ಗೊತ್ತಾಗುವುದು ಎಂದನು. "ಹಾಗಾದರೆ ಸರಿ."

ಇಂದ್ರಪ್ರಸ್ಥದ ಉತ್ಸವಕ್ಕೆ ನಾನು ಹೋಗಿದ್ದಾಗ——

ಅದನ್ನು ನಾವು ಬಲ್ಲೆವು.

ಅಲ್ಲಿ ನಾನು ಕಳ್ಳರ ಕೈಗೆ ಸಿಕ್ಕಿಬಿದ್ದುದು ನಿಮಗೆ ತಿಳಿಯದು.

ಇಂದ್ರಪ್ರಸ್ಥದಲ್ಲಿ ಕಳ್ಳರೇ ಇಲ್ಲ ಎಂದು ದಮನಕನು ಹೇಳಲು, ಉದಯಸಿಂಹನು ಇಲ್ಲದೇ ಏನು, ಅನೇಕರಿದ್ದಾರೆ ಎಂದನು.

ಅಡಿಗೆಯವನು ಬಡ್ಡಿಸಿದ ಅರೆಬೆಂದ ಪದಾರ್ಥವನ್ನು ತಿಂದು ಅಜೀರ್ಣವಾಗಿದ್ದುದರಿಂದ ನೀನು ಎಲ್ಲಿಯೋ ಕಳ್ಳರಿಗೆ ಸಿಕ್ಕಿಬಿದ್ದಂತೆ ಕನಸನ್ನು ಕಂಡಿರಬಹುದು.

ನಾನು ಹೇಳುವುದರಲ್ಲಿ ಎಳ್ಳಷ್ಟಾದರೂ ಸುಳ್ಳಿಲ್ಲ. ಕಳ್ಳರು ನನ್ನನ್ನು ಹಿಡಿದುಕೊಂಡು ಹೋಗಿ ತಮ್ಮ ಯಜಮಾನನಿಗೆ ಒಪ್ಪಿಸಲು, ಅವನು 'ನಾಳೆಯ ಬೆಳಗಾಗುವುದರೊಳಗಾಗಿ ಆರು ಸಾವಿರ ವರಹಗಳು ನನ್ನ ಕಯ್ಯಿಗೆ ಬಂದರೆ ಸರಿ, ಇಲ್ಲವಾದರೆ

ನಿನ್ನನ್ನು ಪ್ರಾಣದೊಂದಿಗೆ ಬಿಡುವುದಿಲ್ಲ' ಎಂದು ಹೇಳಿದನು ಆ ಕಳ್ಳರ ಯಜಮಾನನಲ್ಲಿ ಆಡುವುದೊಂದು ಮಾಡುವುದೊಂದಿಲ್ಲವಾದುದರಿಂದ ನಾನು ಒಡನೆಯೇ ವೀರಸಿಂಹನಿಗೆ ಒಂದು ಕಾಗದವನ್ನು ಬರೆದೆನು.

ವೀರಸಿಂಹನು ಅಷ್ಟು ಹಣವನ್ನು ತೆತ್ತು ನಿನ್ನನ್ನು ಬಿಡಿಸಿಕೊಂಡನೋ ?

ಇಲ್ಲ. ವೀರಸಿಂಹನು ನಾನು ಈಗ ನಿರೀಕ್ಷಿಸುತ್ತಲಿರುವ ಮಹಾತ್ಮನನ್ನು ಕರೆದು ಕೊಂಡು ಬಂದನು.

ಓಹೋ, ಅವನೇನು ಭೀಮಸೇನನೋ ! ತನ್ನ ಗದೆಯಿಂದ ಕಳ್ಳರನ್ನೆಲ್ಲಾ ಸದೆದು ನಿನ್ನನ್ನು ಬಿಡಿಸಿಕೊಂಡು ಬಂದನೋ ?

ಅವನು ಭೀಮಸೇನನೂ ಅಲ್ಲ, ಅವನಲ್ಲಿ ಗದೆಯೂ ಇಲ್ಲ ; ನನ್ನಂತೆಯೇ ಅವನೂ ಮನುಷ್ಯನೇ. ಆದರೂ ಅವನು ಕಳ್ಳರ ಯಜಮಾನನ ಸಂಗಡ ಒಂದೆರಡು ಮಾತನ್ನಾಡಲು ನನಗೆ ಬಂಧವಿಮೋಚನವಾಯಿತು.

ಆ ಮೇಲೆ ಆ ಕಳ್ಳನು ನಿನ್ನ ರಕ್ಷಕನಲ್ಲಿ ಅಪರಾಧಕ್ಷಮಾಪಣೆಯನ್ನು ಮಾಡಿ ಕೊಂಡನೋ ? " ಹೂಂ "

ನಿನ್ನ ರಕ್ಷಕನ ಹೆಸರೇನು ? " ರಾಜಾಮಲಯಸಿಂಹ "

ಅಂತಹ ರಾಜನು ಇದ್ದರೆ ನನಗೆ ಗೊತ್ತಿರಬೇಕು, ಆ ಹೆಸರಿನವನು ಅವನೂ ಇಲ್ಲ ಎಂದು ದಮನಕನು ಹೇಳಿದನು. ಚಿತ್ರಸೇನನು ನನಗೆ ಎಲ್ಲಾ ರಾಜರ ಹೆಸರುಗಳೂ ಗೊತ್ತು ; ಆದರೂ ಅಂತಹ ಹೆಸರನ್ನು ಎಂದೂ ಕೇಳಿದುದಿಲ್ಲ ಅವನ ವಿಷಯವನ್ನು ಆರಾದರೂ ಬಲ್ಲಿರೋ ಎಂದನು. ಆಗ ಜಯವೀರನು ನಾನು ಸ್ವಲ್ಪ ಕೇಳಿ ಬಲ್ಲೆ ; ನಾವಿಕಸ್ಸೈಂಧವನೆಂಬನೊಬ್ಬನು ಮಲಯದ್ವೀಪವನ್ನು ಬೆಲೆಗೆ ಕೊಂಡು ಅಲ್ಲಿಯ ಗುಹೆಯೊಂದನ್ನು ತನ್ನ ವಾಸಕ್ಕೆ ಅನುಕೂಲವಾಗಿ ಮಾಡಿಕೊಂಡಿದ್ದಾನೆಂದು ನಮ್ಮ ನಾವಿಕನೊಬ್ಬನು ಹೇಳಿದ್ದನು. ಬಹುಶಃ ಅವನು ಆ ದ್ವೀಪಕ್ಕೆ ರಾಜನಾಗಿರಬಹುದು ಎಂದನು.

ಹಾಗಾದರೆ ಅವನು ಬಲು ಹಣಗಾರನಾಗಿರಬೇಕು.

ಅಪ್ಪಾ ದಮನಕ ! ನೀನು ಯವನಯಾಮಿನೀವಿನೋದಗಳಲ್ಲಿ ಅಲ್ಲೀಬಾಬನ

ಕಥೆಯನ್ನು ಕೇಳಿ ಒಲ್ಲೆಯೋ ಎಂದು ಉದಯಸಿಂಹನು ಕೇಳಲು, ಇದೇನು ಮಾತು? ಪಾಠಶಾಲೆಗೆ ಹೋಗುವ ಪ್ರತಿಯೊಬ್ಬ ಸಣ್ಣ ಹುಡುಗನೂ ಅದನ್ನು ಬಲ್ಲನು ಎಂದನು.

ಇವನಿಗೂ ಅಲ್ಲೀಬಾಬನಿಗೆ ಸಿಕ್ಕಿದಂತೆ ಒಂದು ಗುಹೆಯೂ ಅದರ ತುಂಬ ಧನವೂ ಸಿಕ್ಕಿರುವುವು.

ನೀನು ಆ ಗುಹೆಯನ್ನು ನೋಡಿದ್ದೀಯೋ?

ನಾನು ನೋಡಿಲ್ಲ, ವೀರಸಿಂಹನು ನೋಡಿದ್ದಾನೆ. ನಿಮ್ಮ ಧರ್ಮಕ್ಕೆ ಆ ರಾಜನ ಮುಂದೆ ಎಲ್ಲಿಯಾದರೂ ಈ ಪ್ರಸ್ತಾಪವನ್ನು ಮಾಡೀರಿ, ಜೋಕೆ. ಕಣ್ಣನ್ನು ಕಟ್ಟಿ ವೀರಸಿಂಹನನ್ನು ಆ ಗುಹೆಯೊಳಗೆ ಕರೆದುಕೊಂಡು ಹೋಗಿದ್ದರಂತೆ ಎಂದು ಪ್ರಾರಂಭಿಸಿ ಅವನು ಅಲ್ಲಿ ಅನುಭವಿಸಿದುದನ್ನೂ, ಅನಂತರ ಇಂದ್ರಪ್ರಸ್ಥದಲ್ಲಿ ನಡೆದುದನ್ನೂ ಆದ್ಯೋಪಾಂತವಾಗಿ ಹೇಳಿದನು. ಆಗ ಉದಯಸಿಂಹನಿಗೇನಾದರೂ ಹುಚ್ಚು ಹಿಡಿಯಿತೋ ಎಂದು ಅವರೆಲ್ಲರೂ ಅವನ ಮುಖವನ್ನು ನೋಡುತ್ತಿರಲು, ಜಯವೀರನು ನಮ್ಮ ನಾವಿಕನಿಂದ ನಾನೂ ಹೀಗೆಯೇ ಕೇಳಿದ್ದೆನು ಎಂದನು.

ಸ್ವಾಮೀ ಜಯವೀರರೇ! ನೀವಿಲ್ಲಿಲ್ಲದಿದ್ದರೆ ಇವರು ನನ್ನನ್ನು ಹುಚ್ಚನೆಂದೇ ಹೇಳಿಬಿಡುತ್ತಲಿದ್ದರು ಎಂದು ಉದಯಸಿಂಹನು ಹೇಳಲು, ದಮನಕನು ನಾನು ಅದನ್ನು ನಂಬುವುದಿಲ್ಲ; ಅದು ಹಾಗಿರಲಿ. ಆ ಯವನದೇಶದ ಯುವತಿಯನ್ನು ನೋಡಿದೆಯೋ ಎನ್ನಲು, ಉದಯಸಿಂಹನು ಒಂದು ದಿನ ಅವಳನ್ನು ನಾಟಕಶಾಲೆಯಲ್ಲಿ ನೋಡಿದ್ದೆನು. ಅವನ ಮನೆಗೆ ಊಟಕ್ಕೆ ಹೋಗಿದ್ದಾಗ ಅಲ್ಲಿ ಅವಳ ಸಂಗೀತವನ್ನು ಕೂಡ ಸ್ವಲ್ಪ ಕೇಳಿದೆನೆಂದು ಆಗಲೇ ಹೇಳಲಿಲ್ಲವೇ ಎಂದನು.

ಓಹೋ! ನಿಮ್ಮ ರಾಜನೂ ನಮ್ಮಂತೆಯೇ ಊಟಮಾಡುತ್ತಾನೆ

ಅವನು ಸ್ವಲ್ಪವೇ ಊಟಮಾಡುತ್ತಾನೆ.

ಹಾಗಾದರೆ ಅವನು ಒಂದು ಪಿಶಾಚಿ.

ಇಂದ್ರಪ್ರಸ್ಥದ ಗಂಗಾಬಾಯಿಯೂ ಹೀಗೆಯೇ ಹೇಳಿದಳು.

ಸರಿ ಸರಿ. ಈಗ ಅವನ ಸಮಾಚಾರ ಗೊತ್ತಾಯಿತು. ದೊಡ್ಡ ಕಣ್ಣು, ಅದರ ತಾರಕೆಯನ್ನು ಇಷ್ಟಬಂದಂತೆ ದೊಡ್ಡುದನ್ನೂ ಸಣ್ಣದನ್ನೂ ಮಾಡುವನು; ಮೂಗು ಸ್ವಲ್ಪ ಉದ್ದ; ಅಗಲವಾದ ಹಣೆ; ಸೀಸದ ಬಣ್ಣ; ಕಪ್ಪು ಕೂದಲು; ಬಿಳಿಯ ಹಲ್ಲು,

ವಿಪರೀತ ವಿನಯ ; ಇದೆಲ್ಲಾ ನಿಜ ತಾನೆ ಎಂದು ದಮನಕನು ಕೇಳಲು, ಉದಯ ಸಿಂಹನು ಭಲಾ, ಭಲಾ ! ಅವನನ್ನು ಬಹು ಸರಿಯಾಗಿ ವರ್ಣಿಸಿದೆ ಎಂದನು.

ಅವನಿಗೆ ತಲೆಯಲ್ಲಿ ಕೊಂಬಿರುವುದೋ ಎಂದು ಒಬ್ಬನೂ, ಅವನಿಗೆ ಹಜ್ಜೆಗಳು ಹಿಂದಿರುಗಿರುವುವೋ ಎಂದು ಇನ್ನೊಬ್ಬನೂ, ಅವನು ಭೂಮಿಯಲ್ಲಿ ನಡೆಯುವನೋ ಅಥವಾ ಗಾಳಿಯಲ್ಲಿ ಹಾರುವನೋ ಎಂದು ಮತ್ತೊಬ್ಬನೂ ಕೇಳಲು, ಉದಯಸಿಂ ಹನು ನೀವೆಲ್ಲರೂ ಅವನನ್ನು ನೋಡದಿರುವುದರಿಂದ ಈಗ ಹೀಗೆ ಹಾಸ್ಯಮಾಡುತ್ತೀರಿ ; ನೋಡಿದಾಗ ನೀವೇ ಆಶ್ಚರ್ಯಪಡುತ್ತೀರಿ ಎಂದನು.

ಆಗ ಚಿತ್ರಸೇನನು ನೀವುಗಳೆಲ್ಲಾ ಹೇಳುವುದು ಹಾಗಿರಲಿ, ಆ ಕಳ್ಳನ ಸಹ ವಾಸವಿಲ್ಲದಿದ್ದರೆ ಅವನು ನಿಜವಾಗಿಯೂ ದೊಡ್ಡ ಮನುಷ್ಯನೆಂದು ನಾನು ಹೇಳುತ್ತ ಲಿದ್ದೆ ಎಂದನು.

ಕಳ್ಳರೂ ಸುಳ್ಳು, ಪಿಶಾಚನೂ ಸುಳ್ಳು, ರಾಜನೂ ಸುಳ್ಳು ; ಇವುಗಳನ್ನೆಲ್ಲಾ ನೀನು ಸ್ವಪ್ನದಲ್ಲಿ ಕಂಡುದೇ ಹೊರತು ಮತ್ತೆ ಬೇರೆ ಇಲ್ಲ. ಇದೋ, ಗಡಿಯಾರದಲ್ಲಿ ಹತ್ತು ಗಂಟೆ ಬಡಿಯುತ್ತಿದೆ ; ಫಲಾಹಾರವಾಗಿದ್ದರೆ ಕೊಡು, ಇಲ್ಲವಾದರೆ— ಎಂದು ದಮನಕನು ಹೇಳುವುದರೊಳಗಾಗಿಯೇ, ರಾಜಾಮಲಯಸಿಂಹರು ಬಿಜಯ ಮಾಡಿಸಿದರು ಎಂದು ಆಳು ಹೇಳಿದನು. ಆ ಹೆಸರನ್ನು ಕೇಳುತ್ತಲೆ ಎಲ್ಲರೂ ಬೆಚ್ಚಿ ಬಿದ್ದರು.

---

# ಇಪ್ಪತ್ತೆಂಟನೆಯ ಅಧ್ಯಾಯ

## ಫಲಾಹಾರ

ಮಲಯಸಿಂಹನು ಮುಗುಳುನಗೆಯನ್ನು ಬೀರುತ್ತ ಒಳಗೆ ಬಂದು ಉದಯಸಿಂಹ ನೊಡನೆ ಕುಶಲಪ್ರಶ್ನೆಯನ್ನು ಮಾಡಿ ನಾನು ಬರುವುದು ಅರ್ಧನಿಮಿಷ ಸಾವಕಾಶ ವಾಯಿತು; ಕ್ಷಮಿಸಬೇಕು. ಐನೂರು ಮೈಲಿಗಳ ದೂರ ಒಂದೇಸಾರಿ ಪ್ರಯಾಣ ಮಾಡು ವುದು ಬಾಯಮಾತೇ ಎಂದನು.

ಐನೂರು ಮೈಲಿಗಳೇ ! ಎಂದು ಎಲ್ಲರೂ ಆಶ್ಚರ್ಯಪಟ್ಟರು.

